# ಹೊಸತು




ಜುಲೈ ೨೦೦೩
ಬೆಲೆ : ರೂ. ೧೦

ನೆಮ್ಮದಿಯ ನಾಳೆ ನಮ್ಮದು

## ಮಾರ್ಕ್ಸ್‌ನ ಅಧ್ಯಯನ ಇಂದು ಅಗತ್ಯವೇ ?

# ಅಪೂರ್ವ ಕಲಾವಿದ
# ಅಪ್ಪಾ ಸಾಹೇಬ ಕಾಡಾಪುರಕರ


ದವಸ ಧಾನ್ಯಗಳಲ್ಲಿ ರಚಿಸಿರುವ 'ಲತಾ ಮಂಗೇಶ್ಕರ್'

**ಯಾ**ವ ಪ್ರಚಾರದ ಸುಳಿಗೂ ಸಿಲುಕದೆ ಕಲಾತಪಸ್ವಿಯಾಗಿ ಉಳಿದಿರುವ ಹೆಸರಾಂತ ಕಲಾವಿದರಲ್ಲಿ ಅಪ್ಪಾ ಸಾಹೇಬ ಕಾಡಾಪುರಕರ ಒಬ್ಬರು. ಬೆಳಗಾವಿ ಜಿಲ್ಲೆಯ ನಿಪ್ಪಾಣಿಯಲ್ಲಿ ಇವರ ತಂದೆ ತೋರಗಲ್ ಸರ್ಕಾರ್ ಕಲಾವಿದರೆಂದೇ ಖ್ಯಾತರಾದವರು. ೨೧ನೇ ಅಕ್ಟೋಬರ್ ೧೯೩೬ರಂದು ಜನಿಸಿದ ಅಪ್ಪಾ ಸಾಹೇಬರು ಚಿತ್ರಕಲೆಯಲ್ಲಿ ಹೆಚ್ಚು ಅಭಿರುಚಿ ಮೂಡಿಸಿಕೊಂಡು ಬಹುಬೇಗ ಗೋಡೆಯ ಮೇಲೆ ಚಿತ್ರ ಬರೆಯುವುದನ್ನು ರೂಢಿಸಿಕೊಂಡರು; ತಂದೆಯೊಡನೆ ಕಲಾ ಕಾರ್ಯಗಳಲ್ಲಿ ಗಮನಹರಿಸಿ ನಕ್ಷೆ ತೆಗೆಯುವುದು, ಕಲ್ಲಿನಲ್ಲಿ ಶಿಲ್ಪ ಕಲಾಕೃತಿ ಮೂಡಿಸುವುದು ಮೊದಲಾದುವಲ್ಲಿ ಖ್ಯಾತರಾದರು. ಇವರ ವಿಶೇಷವಾದ ಚಿತ್ರಕಲಾ ಶೈಲಿ ಜನಮನವ ಸೂರೆಗೊಂಡಿತು. ಬೇಲೂರು ಹಳೇಬೀಡುಗಳಲ್ಲಿ ಇವರು ನಿರ್ವಹಿಸಿದ ಕಲಾಕಾರ್ಯ ಶ್ಲಾಘನೀಯ. ಏಕಲವ್ಯನಂತೆ ಇವರು ಸಾಧಿಸಿದ ಒಂದೊಂದು ಕಾರ್ಯವೂ ಪ್ರಶಂಸೆಯ ಪ್ರತೀಕವಾಯಿತು.

ಬೆಳ್ಳಿಯ ಪಲ್ಲಕ್ಕಿ, ಕಲಾಕುಂದಾಗದ ಚಾರಂಗ ಮತ್ತು ಸಿಂಹಾಸನ, ಸೃಜನಶೀಲವಾಗಿ 'ಆಕಾರೆವು ಮಹಾನ್' ಎಂಬ ತತ್ವದ ಮೇಲೆ ಮೂಡಿರುವ ಕಲಾಕೃತಿಗಳು ಗಂಭೀರವಾಗಿವೆ. ತೈಲವರ್ಣದ 'ಕಾರ್ಗಿಲ್', ಜಲವರ್ಣದ 'ಸಂಗೀತ ವಿಶ್ವಭಾಷೆ' ಗೋಧಿಕಡ್ಡಿಯಲ್ಲಿ ರಚಿಸಿರುವ ಡಾ|| ಎಂ. ವಿಶ್ವೇಶ್ವರಯ್ಯ, ಮರದ ತೊಗಟೆಯಿಂದ ಉಸ್ತಾದ ಬಿಸ್ಮಿಲ್ಲಾ ಖಾನ್, ಬಟ್ಟೆ ಚೂರುಗಳಿಂದ ವಿ. ಶಾಂತಾರಾಂ, ದವಸಧಾನ್ಯಗಳಿಂದ ಮೂಡಿರುವ ಲತಾ ಮಂಗೇಶ್ಕರ್ ಇವರ ಅವಿಸ್ಮರಣೀಯ ಕೃತಿಗಳು. ಮುಂಬೈ, ಕಲ್ಕತ್ತಾ ಸೇರಿದಂತೆ ಭಾರತದಾದ್ಯಂತ ಇವರ ಕಲಾ ಪಾಂಡಿತ್ಯಕ್ಕೆ ಮನ್ನಣೆ ಸಿಕ್ಕಿದೆ. ಸಾಕಷ್ಟು ಚಿತ್ರಕಲಾ ಪ್ರದರ್ಶನಗಳಲ್ಲಿ ಭಾಗಿಯಾಗಿದ್ದಾರೆ.

*ಪಿ. ಎಂ. ರಾಜನ್, ನಂ. ೪ಸಿ (೪೨/ಸಿ) ಥಿಯೋಬಾಲ್ಡ್ ಅಡ್ಡರಸ್ತೆ (ಪಶ್ಚಿಮ)*
*ನಜರಾಬಾದ್, ಮೈಸೂರು - ೫೭೦ ೦೧೦*

**ಕಲಾವಿದರ ವಿಳಾಸ :**

ಶ್ರೀ ಎಸ್. ಅಪ್ಪಾ ಸಾಹೇಬ ಬಿ. ಕಾಡಾಪುರಕರ

೨೧೨೭ (ಎ), ಪ್ರಭಾತ್ ಟಾಕೀಸ್ ಬಳಿ, ಶೇಠವಾಲ್ ಗಲ್ಲಿ, ನಿಪ್ಪಾಣಿ - ೫೯೧ ೨೩೭


ಮುಂಜಾನೆಯ ಸಮಯ - 'ಆಕಾರ' ತತ್ವ (ಜಲವರ್ಣ)


ಗಾಯಕ ಬಾಳಪ್ಪ ಹುಕ್ಕೇರಿ (ಪೆನ್ಸಿಲ್ ರೇಖಾಚಿತ್ರ)


ವಿಶ್ವದ ಶಬ್ದ ಸ್ವರ (ಜಲವರ್ಣ)

# ಹೊಸತು

## ಒಳಗೇನಿದೆ.....




ಚಿತ್ರಗಳು : ಬಿ. ವಿಲ್ಸನ್, ಎಸ್. ಶಶಿಕಾಂತ್ ಯೆಡಹಳ್ಳಿ , ಸ್ಯಾಮ್
ಹರಿಣಿ, ಶ್ರೀಹರಿ, ಎನ್. ಆರ್. ಬೊಮ್ನಳ್ಳಿ, ಜಿ. ಎಂ. ಬೊಮ್ನಳ್ಳಿ.
ವಿನ್ಯಾಸ : ನವಕರ್ನಾಟಕ ವಿನ್ಯಾಸ
ಮುಖಚಿತ್ರ : ಕಾರ್ಲ್ ಮಾರ್ಕ್ಸ್
ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

**ಮು**ಖ್ಯಮಂತ್ರಿ ಕೃಷ್ಣ ಅವರು ಮಾರಮ್ಮ ಮುಂತಾದ ದೇವರುಗಳನ್ನು ಬಿಟ್ಟು ಉಳಿದೆಲ್ಲ ಶಿಷ್ಟ ದೇವರುಗಳನ್ನು ಸಂಧಿಸಿ ಮಳೆಗಾಗಿ ಮೊರೆಯಿಟ್ಟರು. ಹೋಟೆಲಿಗೆ ಹೋಗಿ ದುಡ್ಡು ಕೊಟ್ಟರೆ ಮಸಾಲೆ ದೋಸೆ ಸಿಗುವಂತೆ ಗುಡಿ-ಗುರುದ್ವಾರ-ಮಸೀದಿ-ಚರ್ಚುಗಳಿಗೆ ಭೇಟಿ ನೀಡಿ ಮಳೆ ಬೇಕೆಂದು ಕೇಳಿದರೆ ಹೇಗೆ ಸಿಕ್ಕುತ್ತದೆ ! ವಾಸ್ತುವಿನ ಹೆಸರಲ್ಲಿ ಕೆಲವು ಲಕ್ಷಗಳನ್ನು ಖರ್ಚು ಮಾಡಿದ್ದು ಕೂಡ ದಂಡವೆನಿಸಿರಬೇಕು ಅವರಿಗೆ, ಈ ಮಳೆರಾಯನ ತುಂಟತನದಿಂದ. ದೆಹಲಿ ದರ್ಬಾರಿನ ನಾಯಕ ವಾಜಪೇಯಿ ಹಲವು ದಶಕಗಳಿಂದ ಇದ್ದ ರಸ್ತೆಗಳಿಗೆ ಕೂಡುರಸ್ತೆಗಳನ್ನು ಮಾಡಿಸಿ ಅದೇ 'ಸುವರ್ಣ ಚತುರ್ಭುಜ' ಎಂದು ಬೆನ್ನು ತಟ್ಟಿಕೊಳ್ಳಲು ದೇಶದಲ್ಲಿ ಲಕ್ಷಗಟ್ಟಲೆ ಮರಗಳನ್ನು ಕೆಡವಿಸಿದ್ದಾರೆ. ಬೆಂಗಳೂರು - ಹುಬ್ಬಳ್ಳಿ ರಸ್ತೆಯಲ್ಲಿ ಏನಿಲ್ಲವೆಂದರೂ ಎರಡು ಸಾವಿರ ದೊಡ್ಡ ದೊಡ್ಡ ಮರಗಳನ್ನು ಉರುಳಿಸಿದ್ದಾರೆ. ಹಾಗೆ ಮಾಡುತ್ತಾ ತಂಪೆರೆದುಕೊಳ್ಳಲು ದೇವರುಗಳ ಬಳಿ ಹೋಗಿ 'ಮಳೆ ಕೊಡಿ' ಎಂದರೆ ಅವರು ಛೀಮಾರಿ ಹಾಕದಿರುತ್ತಾರೆಯೇ ? ಮಳೆ ಸುರಿಸಲು ವೈಜ್ಞಾನಿಕ ಕ್ರಮಗಳನ್ನು ಅನುಸರಿಸುವುದನ್ನು ಬಿಟ್ಟು ಸಂವಿಧಾನಕ್ಕೆ ವಿರೋಧವಾಗಿ ಅವೈಜ್ಞಾನಿಕ ಪದ್ಧತಿಗಳನ್ನು ಪೋಷಿಸುವ 'ಫಾರ್ವರ್ಡ್' ಅಲ್ಲದ ಹಾರ್ವರ್ಡ್ ಧೀಮಂತರನ್ನು ಕಂಡು ಮರುಗಬೇಕೋ ಟೀಕಿಸಬೇಕೋ ಎಂಬ ತೀರ್ಮಾನ ಕೈಗೊಳ್ಳಬೇಕಾಗಿದೆ.

ದೆಹಲಿಯ ಆಸ್ಥಾನ ವಾಕ್ಪಟು ವೆಂಕಯ್ಯ ನಾಯ್ಡು ಮಾತನಾಡಲು ಬಾಯಿ ಬಿಟ್ಟರೆ ಅದೇಕೋ ತಲೆಯಲ್ಲಿ ತುಂಬಿಕೊಂಡಿರುವ ಕಶ್ಮಲವನ್ನೆಲ್ಲಾ ಹೊರಹಾಕುತ್ತಿರುವಂತೆ ಎಣ್ಣೆ ಮುಖ ಮಾಡಿಕೊಳ್ಳುತ್ತಾರೆ. ಹೀಗೊಮ್ಮೆ ಮೊದ್ದು ಸುರಿಸುತ್ತಾ ವಿಕಾಸ ಮತ್ತು ಲೋಹ ಪುರುಷರನ್ನು ಸಂಶೋಧಿಸಿ ತೆಗೆದು ದೊಡ್ಡಾಟ ಆರಂಭಿಸಿದ್ದಾರೆ. ದೇಶದ ಜನ ಸಾಂಖ್ಯ ಪುರುಷರೆಂದು ಅವರು ಭಾವಿಸಿದ್ದಾರೋ ಏನೋ ! ಅಂತಿಮ ಹಂತದಲ್ಲಿ ಪುರುಷನು ಪ್ರಕೃತಿಯ ಸೆಳೆತಕ್ಕೆ ಮಾರುಹೋಗದೆ ಕೇವಲನಾಗಿ ಉಳಿದುಬಿಡುವಷ್ಟು ವಿವೇಕ ಗಳಿಸುತ್ತಾನೆಂದು ನಮ್ಮ ಸಾಂಖ್ಯ ದರ್ಶನದ ಒಂದು ತತ್ತ್ವ. ಉತ್ತರ ಪ್ರದೇಶದ ನುಡಿಗಟ್ಟಿನಲ್ಲಿ ಹೇಳಬೇಕಾದರೆ ವಾಜಪೇಯಿ - ಅದ್ವಾನಿಗಳು ನಾಗನಾಥ - ಸರ್ಪನಾಥಗಳಿದ್ದಂತೆ, ಅಷ್ಟೆ. ಅವೆರಡೂ ಒಂದೇ; ಆದರೆ ತೋರಿಕೆಗೆ ಹೆಸರುಗಳು ಬೇರೆಬೇರೆ. ಅವರಿಬ್ಬರಲ್ಲಿ ಯಾರು ನಾಯಕರಾದರೂ ಮಂದಿರದ ರಾಜಕೀಯವನ್ನು ಬಿಟ್ಟು ಎತ್ತರಕ್ಕೆ ಬೆಳೆಯುವ ಸಾಧ್ಯತೆ ಇಲ್ಲ, ಅಮೆರಿಕಾಕ್ಕೆ ನಮ್ಮ ದೇಶವನ್ನು ಒತ್ತೆ ಇಡದೆ ದೇಶದ ಸಾರ್ವಭೌಮತ್ವವನ್ನು ರಕ್ಷಿಸುವ ಮನೋಭೂಮಿಕೆ ಇಲ್ಲ. ಲಾಸ್ ಏಂಜಲಿಸ್‌ನಲ್ಲಿ ಅದ್ವಾನಿ ಹೇಳಿದರು, ಭಾರತ ಮತ್ತು ಅಮೆರಿಕಾಗಳೆರಡೂ ಭಯೋತ್ಪಾದನೆಗೆ ಬಲಿಯಾಗಿವೆ, ಎಂದು. ಲೂಟಿಕೋರರಾಗಿರುವುದರಿಂದ ಅಮೆರಿಕಾಕ್ಕೆ ಭಯೋತ್ಪಾದಕರಿಂದ ಆತಂಕವಿದೆ; ನಮ್ಮ ದೇಶವು ಇದರಲ್ಲಿ ಅಮೆರಿಕಾಕ್ಕೆ ಸಮಾನವೆ ? ದೇಶ ವಿಭಜನೆಯಿಂದ ಹುಟ್ಟಿಕೊಂಡ ಒಂದು ನಿರ್ದಿಷ್ಟ ಸನ್ನಿವೇಶದಿಂದ ಭಾರತ ಭಯೋತ್ಪಾದಕರ ಏಟಿಗೆ ಗುರಿಯಾಗಿದೆ. ಅಮೆರಿಕಾದ ಮಾರೀಚ ಹೃದಯಕ್ಕೆ ರಕ್ತ ತುಂಬಲು ಅಧ್ವಾನಿ ಆಡುವ ಮಾತುಗಳು ನಾಳೆ ನಮಗೆ ಕಂಟಕ ತರಲಿವೆ.

ಇರಾಕಿಗೆ ಭಾರತದ ಸೈನ್ಯದ ತುಕಡಿಗಳನ್ನು ಕಳಿಸಲು ಒಂದು ರೀತಿ ಒಪ್ಪಿಗೆ ನೀಡಿಬಂದಿರುವ ಅಧ್ವಾನಿ ನಮ್ಮ ಗೃಹ ಸಚಿವರೋ, ರಕ್ಷಣಾ ಸಚಿವರೋ, ಅಥವಾ ಎರಡೂನೋ ಎಂಬ ಪ್ರಶ್ನೆ ಕಾಡುತ್ತಿದೆ. ''ಅಮೆರಿಕಾದಿಂದ ವಿವರಗಳನ್ನು ಪಡೆದು ತೀರ್ಮಾನಿಸುತ್ತೇವೆ'' ಎಂಬುದರ ಅರ್ಥವೇನು ? ''ನಾವು ಕಳಿಸಲು ಸಿದ್ಧ'' ಎಂದು. ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಳ್ಳದಿದ್ದ ಜನ ಮತ್ತು ಪಕ್ಷ ರಾಷ್ಟ್ರದ ಚುಕ್ಕಾಣಿ ಹಿಡಿದಾಗ ಸಂಭವಿಸುವ ವಿಪತ್ತು ಎಂತಹುದೆಂದು ಈಗ ತಿಳಿಯುವ ಸಮಯ ಬಂದಿದೆ. ಅವರಿಗೆ ನಮ್ಮ ದೇಶದ ಸ್ವಾತಂತ್ರ್ಯದ ಬಗ್ಗೆ ಗೌರವವಿಲ್ಲ ಮತ್ತು ಬೇರೆ ದೇಶಗಳ ಸ್ವಾತಂತ್ರ್ಯ ಹರಣ ಮಾಡುವವರೊಟ್ಟಿಗೆ ಸೇರುವುದು ಒಂದು ಘೋರ ಪಾತಕ ಎನಿಸುವುದಿಲ್ಲ. ಒಂದು ಸಂಗತಿ ನೆನಪಿಗೆ ಬರುತ್ತದೆ: ಜಲಿಯನ್‌ವಾಲಾ ಬಾಗ್ ಹತ್ಯೆಯ ತರುವಾಯದಲ್ಲಿ ಪಂಜಾಬಿನ ಯುವಕರು ಉಗ್ರವಾಗಿ ಪ್ರತಿಭಟನೆ ಆರಂಭಿಸಿದ್ದರು. ಆಗ ಬ್ರಿಟಿಷರು ಲಾಹೋರಿನ ಡಿ.ಎ.ವಿ. ಕಾಲೇಜಿನ ಪ್ರಾಚಾರ್ಯರನ್ನು ಒಂದು ಪಂಜರದಲ್ಲಿ ಕೂಡಿಹಾಕಿ ಲಾಹೋರಿನ ಒಂದು ಪ್ರಮುಖ ವೃತ್ತದಲ್ಲಿರಿಸಿದರು. ಏತಕ್ಕಾಗಿ ? ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿದ್ದ ಯುವಕರಿಗೆ ಪಾಠ ಕಲಿಸುವುದಕ್ಕಾಗಿ !

ಲನೇ ಪುಟಕ್ಕೆ




ಸಂಪುಟ-೪ ಸಂಚಿಕೆ - ೧೨ ಜುಲೈ ೨೦೦೩



*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೨೬

*ಹೊಸತು ಕಚೇರಿಯ ವಿಳಾಸ*




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**
**website : www.navakarnatakabooks.com**

# ಭಾರತ ಸಂಚಾರ ನಿಗಮದ ಬೇಟೆ

**ಸಂಪಾದಕೀಯ**

**ಸಾಂ**ಪ್ರದಾಯಿಕ ಸ್ಥಿರ ಟೆಲಿಫೋನ್‌ಗಳಿಂದ ಸೆಲ್ಯೂಲರ್ ಟೆಲಿಫೋನ್‌ಗಳಿಗೆ ಮಾಡುವ ಕರೆಗಳ ದರವನ್ನು ಆರುಪಟ್ಟು ಹೆಚ್ಚಿಸಲು ಪ್ರಯತ್ನಪಟ್ಟು, ಅದನ್ನು ಗ್ರಾಹಕರ ಪ್ರತಿಭಟನೆಯಿಂದ ಸಂಘಟಿತವಾದ ರಾಜಕೀಯ ಒತ್ತಡದಿಂದಲೋ ಎಂಬಂತೆ ಮೂರರಷ್ಟಕ್ಕೆ ಇಳಿಸಿದರು. ಇದರಿಂದ ಭಾರತ ಸಂಚಾರ ನಿಗಮಕ್ಕೆ ಮಾರಣಾಂತಿಕ ಪೆಟ್ಟು ಬಿತ್ತೆಂದು ಮೊಸಳೆಯ ಕಣ್ಣೀರನ್ನು ಸುರಿಸಿದ ಖಾಸಗೀವಲಯ ನಿಯಮಿಸಿದ ಅರುಣ್ ಶೌರಿ ಎಂಬ ಸಾರ್ವಜನಿಕ ಉದ್ದಿಮೆಗಳ ಬೇಟೆಗಾರನ ಕೌಶಲ್ಯ ಶಕುನಿಯಂಥದೇ ವಿನಃ ಧೀರೋದಾತ್ತ ನಾಯಕನ ಶೌರ್ಯವೇನೂ ಅಲ್ಲ. ಸ್ಥಿರ ಮತ್ತು ಸೆಲ್ಯೂಲರ್ ಎರಡೂ ಟೆಲಿಫೋನ್‌ಗಳನ್ನು ಹೊಂದಿದ್ದು, ಯಾರು ಈ ಸಣ್ಣ ಹೆಚ್ಚಳವನ್ನು ಭರಿಸಬಲ್ಲವರಾಗಿದ್ದರೋ ಅವರಿಂದಲೇ ಪ್ರಮುಖವಾಗಿ ವಿರೋಧ ಬಂದಿರುವುದು ಎಂದು ಗಮನಿಸಿದಾಗ ಸೆಲ್ಯೂಲರ್ ಲಾಬಿ ಈ ಬಗ್ಗೆ ಬೊಬ್ಬೆ ಎಬ್ಬಿಸಿದ್ದು ಅರ್ಥವಾಗುತ್ತದೆ. ಭಾಸಂನಿಗಮದ ಆದಾಯ ಕುಸಿಯಲು ಸರ್ಕಾರದ ಹೊಣೆಗಾರಿಕೆಯ ಮಿಕ್ಕೆಲ್ಲ ಕಾರಣಗಳನ್ನು ಬದಿಗಿಟ್ಟು ಸಾಂದರ್ಭಿಕವಾಗಿ ಸೃಷ್ಟಿಯಾದ ಈ ಪ್ರಕರಣವನ್ನು ಮಾತ್ರ ಕಾರಣವನ್ನಾಗಿಸಿ ಬೊಟ್ಟುಮಾಡುವುದು ಕೇವಲ ಸೋಗಲಾಡಿತನ.

ಭಾಸಂನಿಗಮಕ್ಕೆ ಅದು ಗ್ರಾಮೀಣ ಸೇವೆಯಿಂದ ಕಳೆದುಕೊಳ್ಳುವ ಅಪಾರ ಹಣವನ್ನು ಗ್ರಾಮಾಭಿವೃದ್ಧಿ ಯೋಜನೆಯ ಅಂಗವೆಂದು ಪರಿಗಣಿಸಿ ಸಂಪೂರ್ಣವಾಗಿ ತುಂಬಿಕೊಡುವ ಭರವಸೆ ೧೯೮೭ರಷ್ಟು ಹಳೆಯದು. ಆದರೆ ಇದನ್ನು ಸರ್ಕಾರ ನಡೆಸಿಕೊಡಲೇ ಇಲ್ಲ. ಟೆಲಿಕಾಂ ಸರಕುಗಳನ್ನು ಕೊಳ್ಳುವುದನ್ನು ಪದೇಪದೇ ರಾಜಕೀಯವಾಗಿಸಿ, ಕೆಲಸಕ್ಕೆ ಬಾರದ, ಹಿಂದುಳಿದ ತಂತ್ರಜ್ಞಾನದ, ಬೇಡಿಕೆ ಇಲ್ಲದ ವಸ್ತುಗಳನ್ನು ಅಪಾರವಾಗಿ ಖರೀದಿಸುವ ಅವ್ಯವಹಾರದ ಮೂಲಕ ಹತ್ತಾರು ಸಹಸ್ರಾರು ಕೋಟಿ ರೂ.ಗಳ ನಷ್ಟವನ್ನು ಕಳೆದ ಹತ್ತು ವರ್ಷಗಳಲ್ಲಿ ಕಂಪೆನಿಯ ಮೇಲೆ ಎಡೆಬಿಡದೆ ಹೊರಿಸುತ್ತಾ ಬಂದಿದ್ದಾರೆ. ಇದರಲ್ಲಿ ಭಾಗವಹಿಸಿದ ರಾಜಕೀಯ ಧುರೀಣರಿಗೆ ಹಾಗೂ ಖಾಸಗಿ ಸರಕು ಪೂರೈಸುವವರಿಗೆ ತಾಳಹಾಕುವ ತೊತ್ತಿನ ಉನ್ನತ ಅಧಿಕಾರಿಗಳಿಗೇನೂ ಲೆಕ್ಕವಿಲ್ಲ. ಇಂಥ ನೂರಾರು ಅಧಿಕಾರಿಗಳು ಕೇಂದ್ರ ಸರ್ಕಾರಿ ನೌಕರ ಸಂಹಿತೆಗೆ ವಿರೋಧವಾಗಿ ನಿವೃತ್ತರಾದೊಡನೆಯೇ ಅದೇ ಖಾಸಗಿ ಸಂಸ್ಥೆಗಳಲ್ಲಿ ಅತಿ ಹೆಚ್ಚು ವೇತನ ಪಡೆಯುತ್ತಾ ಭೂಸಂನಿವನ್ನು ಟೀಕಿಸುತ್ತಾ ಆನಂದ ತುಂದಿಲರಾಗಿರುವುದು ಪ್ರಚಾರಕ್ಕೆ ಸಿಗದ ಷಡ್ಯಂತ್ರ. ಕ್ಲಿಂಟನ್ ಒತ್ತಡದ ಮೇಲೆ, ವಿಶ್ವವಾಣಿಜ್ಯ ಪ್ರಕ್ರಿಯೆಯಂತೆ ಕೂಡ ಇನ್ನಷ್ಟು ಕಾಲ ಮುಂದೆ ಹಾಕಬಹುದಿದ್ದರೂ, ಕ್ರಮಕ್ರಮವಾಗಿ ಇಳಿಸದೆ, ರಾಷ್ಟ್ರೀಯ, ಅಂತರರಾಷ್ಟ್ರೀಯ ಕರೆಗಳ ದರವನ್ನು ಶೇ. ೬೬ ರಷ್ಟು ತುರ್ತಾಗಿ ಇಳಿಸಿದ್ದು ಮತ್ತೊಂದು ಮಹತ್ತರ ಪೆಟ್ಟು. ಕಳೆದ ಹತ್ತು ವರ್ಷಗಳಿಂದ ಸ್ಥಿರ ಟೆಲಿಫೋನ್‌ಗಳ ಮಾಹೆಯಾನ ಬಾಡಿಗೆಯನ್ನು ಏತನ್ಮಧ್ಯೆ ಅಪಾರ ವೆಚ್ಚದಲ್ಲಿ ಸೇವೆಯ ಗುಣಮಟ್ಟವನ್ನು ಹೆಚ್ಚಿಸಿದ್ದರೂ, ಆದ್ದರಿಂದ ನ್ಯಾಯಯುತವಾಗಿದ್ದರೂ, ಗ್ರಾಹಕರ ಪ್ರತಿರೋಧವನ್ನು ನೆಪಮಾಡಿ, ಒಂದಿಷ್ಟು ಹೆಚ್ಚಿಸಲು ಬಿಡದೆ ಆದ ಆಘಾತ. ಇದರ ಜತೆಗೆ ಐದನೆಯ ವೇತನ ಆಯೋಗದ ವರದಿಯನ್ವಯ ನೌಕರರ ಸಂಬಳವನ್ನು ಅಪರೂಪವಾಗಿ ನಿರೀಕ್ಷೆಗೆ ಮೀರಿ ಹೆಚ್ಚಿಸಿದಾಗ ಹಳೆ ಬಾಕಿಯೆಂದೇ ಒಂದೇ ವರ್ಷ, ಕೇಂದ್ರ ನೌಕರರಿಗೆ ೪೦,೦೦೦ ಕೋಟಿ ರೂ.ಗಳಷ್ಟು ಬಟವಾಡೆಯಾಯಿತು. ಖಾಸಗಿ ಲಾಬಿ ಸೊರಗುತ್ತಿದ್ದ ಮಾರುಕಟ್ಟೆಗೆ ಈ ಹಣ ರಕ್ತದಾನವಾಗುತ್ತದೆಂದೂ, ಆದ್ದರಿಂದ ಹೆಚ್ಚಿಸಬೇಕೆಂದೂ ತಂದ ಒತ್ತಾಯ ಅಚ್ಚರಿಪಡುವಂತಿತ್ತು! ಕಾರ್ಮಿಕರಿಗೆ ಅದು ತಮ್ಮ ಸಂಸ್ಥೆಗೆ ನೀಡಿದ ಲೆಕ್ಕಾಚಾರದ ನಿಧಾನಗತಿಯ ವಿಷವೆಂದು ತಿಳಿಯುವ ಸಾಮರ್ಥ್ಯವೇ ಇರಲಿಲ್ಲ. ಸಾಲದೆಂಬಂತೆ ಸೆಪ್ಟಂಬರ್ ೨೦೦೦, ಭಾಸಂನಿಗಮದ ಕಂಪೆನಿಯ ಅವತಾರವಾದಾಗ, ಏನೋ ಕಂಪೆನಿಯ ರಚನೆಯ ಬದಲಾವಣೆಯಿಂದಲೇ ಅಪಾರ ಹಣ ಗಳಿಕೆಯಾದಂತೆ ವಿಪರೀತ ವೇತನ ಹೆಚ್ಚಿಸಿ ಸಂಸ್ಥೆಯ ಆರ್ಥಿಕತೆಗೆ ಪೆಟ್ಟುನೀಡಿದ್ದು, ಖಾಸಗೀಕರಣಗೊಳಿಸುವ ಮಾರ್ಗಕ್ಕೆ ನೌಕರರಿಂದ ಮೊದಲ ಹಂತದಲ್ಲೇ ವಿರೋಧ ಬರದಿರಲೆಂದು ಎಸೆದ ಆಮಿಷವಾಗಿತ್ತು. ಇದರಲ್ಲಿ ಹಾಲೀ ಕಾರ್ಮಿಕನಾಯಕರು ಸರಿಯಾದ ಮಾರ್ಗದರ್ಶನ ನೀಡದೆ ಅವಕಾಶವಾದವನ್ನು ಅನುಸರಿಸಿದ್ದು ದುರಂತ. ಸಂಸ್ಥೆಯನ್ನು ತ್ವರಿತವಾಗಿ ರೋಗಗ್ರಸ್ತಗೊಳಿಸುವ ಇಂಥ ಹಲವು ಹತ್ತು ಪಿತೂರಿಗಳು ಸ್ಪಷ್ಟವಾಗೇ ಇತ್ತು. ಈ ಷಡ್ಯಂತ್ರವನ್ನು ಪ್ರತಿಭಟಿಸುವ ರಾಜಕೀಯ ಇಚ್ಛಾಶಕ್ತಿಯ ಕೊರತೆ, ತನ್ನ ಹಿತವೇನೆಂದು ತಿಳಿಯಲು ಅಸಮರ್ಥರಾದ ನೌಕರವರ್ಗ, ಗ್ರಾಹಕರ ಮತ್ತು ಕಾರ್ಮಿಕ ಸಂಘಗಳ ಮಾಲೀಕರಂಥ ನೇತಾರರ ಉದ್ದೇಶಪೂರಿತ ನಿಷ್ಕ್ರಿಯತೆ, ಸರ್ಕಾರದ ಮತ್ತು ಖಾಸಗೀ ಮಾಧ್ಯಮಗಳ ಎಡೆಬಿಡದ ಖಾಸಗೀಕರಣ ಪಕ್ಷಪಾತದ ಪ್ರಚಾರ ವೈಖರಿ, ಇವುಗಳ ಮಧ್ಯೆ ಯಾವ ವ್ಯಾಪಕ ಚಳುವಳಿಯನ್ನು ತಾನೇ ಕಟ್ಟಲಾದೀತು ? ಪ್ರೊ॥ ಇಂದಿರೇಶನ್ ಅವರು ಆಗಲೇ ಟೆಲಿಕಾಂ ಪರಿಸ್ಥಿತಿ ಕುರಿತು 'ದಿ ಹಿಂದೂ' ಪತ್ರಿಕೆಯಲ್ಲಿ ''ದಿ ಎನಿಮಿ ವಿತಿನ್'' ಎಂಬ ಪ್ರಸಿದ್ಧ ಲೇಖನ ಪ್ರಕಟಿಸಿದ್ದು.

ಮೊನ್ನೆ ಕರ್ನಾಟಕ ವಲಯದ ಇನ್ನೇನು ನಿವೃತ್ತರಾಗಲಿರುವ ಮುಖ್ಯ ಅಧಿಕಾರಿ ಹಾಗೂ ದಕ್ಷಿಣ ವಲಯದ ದೂರಸಂಪರ್ಕ ಖಾತೆಯ ಮುಖ್ಯಾಧಿಕಾರಿ ಇಬ್ಬರೂ, ಸೇವಾ ಸಂಹಿತೆಯನ್ನು ಮರೆತು, ಒಂದೇ ವೇದಿಕೆಯಿಂದ ಬಹಿರಂಗವಾಗಿ ತಮ್ಮ ಸಂಸ್ಥೆಗೆ ನ್ಯಾಯವಾಗಿ ವಾಣಿಜ್ಯ ಸಾಧು ನೀತಿಗಳನ್ನು ಕೈಗೊಳ್ಳಲು ಮತ್ತು ಸಮಾನಮಟ್ಟದಲ್ಲಿ ಪೈಪೋಟಿಗೆ ಇಳಿಯಲು ಕಣ್ಣಿಗೆ ಕಾಣದ ಯಾರ್‍ಯಾರೋ ಬಿಡುತ್ತಿಲ್ಲವೆಂದೂ, ಪರಿಣಾಮವಾಗಿ ಭಾಸಂನಿ ಮುಳುಗಿ ಹೋಗುತ್ತಿದೆಯೆಂದೂ, ಗೋಳು ಕರೆದಿದ್ದಾರೆ. ಸಾಧಾರಣ ನೌಕರರು ಇದರ ವಿರುದ್ಧ ಹೋರಾಡಬೇಕೆಂದು ಇವರು ಕರೆಕೊಟ್ಟಿರುವುದು ತಡವಾದರೂ ಪರಿಸ್ಥಿತಿಯ ಗಂಭೀರತೆಯನ್ನು ಅಧಿಕೃತವಾಗಿ ಹೊರಗೆಡವಿದೆ. ಖಾಸಗಿ ಟೆಲಿಫೋನ್ ಕಂಪೆನಿಗಳು ಒಂದರಲ್ಲೊಂದು ವಿಲೀನವಾಗಿ ಬೆಳೆಯಲು, ಎಷ್ಟು ಬೇಕಾದರೂ ವಿದೇಶೀ ಪಾಲುಗಾರಿಕೆ ಪಡೆದುಕೊಳ್ಳಲು ಈಗಷ್ಟೇ ಈ ಸರ್ಕಾರ ಅನುಮತಿ ಇತ್ತಿದೆ. ಈ ಕಂಪೆನಿಗಳು ತಾವು ಇಲ್ಲಿಯವರೆಗೂ ೭೧೦೦ ಕೋಟಿ ರೂಪಾಯಿಗಳ ನಷ್ಟ ಅನುಭವಿಸಿರುವುದಾಗಿ ಗೋಳಿಟ್ಟು, ತಾವು ಸರ್ಕಾರಕ್ಕೆ ಕೊಡಬೇಕಾದ ಅಪಾರ ಲೈಸೆನ್ಸ್ ವಗೈರೆ ಹಣದಲ್ಲಿ ಬೃಹತ್ತಾದ ವಿನಾಯ್ತಿ ಕಸಿದುಕೊಂಡಿವೆ. ಆದರೆ ಅವರು ಹೀಗೆ ಮಾಡಿದ್ದೂ ಭೂಸಂನಿಗಮವನ್ನು ಅಸಮಾನ ಪೈಪೋಟಿಯ, ನಷ್ಟಕರ ಸೇವಾದರಗಳ ಹಣಾಹಣಿಗೆ ನೂಕಿ ಕುಲಗೆಡಿಸುವುದಕ್ಕೆ ಎಂಬುದು ಈಗ ಬಹಿರಂಗವಾಗಿದೆ. ಭಾಸಂನಿಗಮಕ್ಕೆ ಕೊಡಬೇಕಾದ ಹಣವನ್ನು ಹಿಂತಿರುಗಿಸುವ ಮತ್ತು ಕಂಪೆನಿಯಾಗಿಸುವ ಕಾಲಕ್ಕೆ ವಾಗ್ದಾನಮಾಡಿದ್ದಂತೆ ಒಂದಿಷ್ಟು ಸಹಾಯಕ ಬಂಡವಾಳವನ್ನು ಇನ್ನಷ್ಟು ಕಾಲ ನೀಡಲು ಹಣಕಾಸುಮಂತ್ರಿ ಒಪ್ಪಿಲ್ಲ. ಈಗ ಈ ದುರ್ಬಲ ಭಾಸಂನಿಗಮದ ಉದ್ಧಾರ ಸಾಧ್ಯವಿಲ್ಲವೆಂದು ಕೈ ಚೆಲ್ಲಿ ಅದನ್ನು ಚೂರುಚೂರುಮಾಡಿ ಬೇಟೆಯಾಡಿ ಸುಲಭ ಬೆಲೆಯಲ್ಲಿ ಖಾಸಗಿಯವರಿಗೆ ಒಪ್ಪಿಸುವ ಉಪಕ್ರಮವಷ್ಟೇ ಉಳಿದಿರುವುದು.

ಆಂತರಿಕ ಖಾಸಗಿಕ್ಷೇತ್ರದಲ್ಲಿ ಭಾಸಂನಿಗಮದಂಥ ಬೃಹತ್ ಘಟಕವನ್ನು ಕೊಂಡು ನಡೆಸಲು ಅಗತ್ಯವಾದ ಬೃಹತ್ ಬಂಡವಾಳದ ಕೊರತೆ, ಆಧುನಿಕ ತಂತ್ರಜ್ಞಾನದ ಕೊರತೆ ಮುಂತಾದ ನೆಪಹೂಡಿ ದೇಶದ ಒಂದೆರಡು ಬೃಹತ್ ಕಂಪನಿಗಳ ಕನಿಷ್ಠ ಹೂಡಿಕೆಯ ಜತೆ ಪಾಲುಗಾರಿಕೆ ಮಾಡಿಕೊಂಡ ಬಹುರಾಷ್ಟ್ರೀಯ ಕಂಪೆನಿಗಳ ಏಕಸ್ವಾಮ್ಯದ ರಂಗಪ್ರವೇಶಕ್ಕೆ ಬೇಕಾದ ಭೂಮಿಕೆ ಇದರಿಂದ ರಚಿತವಾದಂತಾಗಿದೆ. ಈ ಬೆಳವಣಿಗೆ ವ್ಯಾಪಕವಾಗಿ, ದಾವಾನಲವಾಗಿ, ಇನ್ನಿತರ ಸಾರ್ವಜನಿಕ ಲಾಭಕರ ಉದ್ದಿಮೆಗಳನ್ನು ಇಷ್ಟರಲ್ಲೇ ಆಹುತಿ ತೆಗೆದುಕೊಳ್ಳುವುದು ಖಂಡಿತ. ''ಸಾರ್ವಜನಿಕ ಕ್ಷೇತ್ರವನ್ನು ರಾಜಕೀಯ ಪ್ರವೇಶದಿಂದ ಮುಕ್ತವಾಗಿಡಲು ಆಗುವುದಿಲ್ಲ. ಆದ್ದರಿಂದ ಅದನ್ನು ಖಾಸಗೀಕರಣಗೊಳಿಸಬೇಕು'' ಎನ್ನುವ ಭಂಡರು ಅವನ್ನು ಸ್ವಾಯತ್ತಗೊಳಿಸಿ ರಾಜಕೀಯದಿಂದ ಮುಕ್ತಗೊಳಿಸಲು ಮುಂದಾಗುವುದಿಲ್ಲ! ಸಾರ್ವಜನಿಕ ಕ್ಷೇತ್ರವೂ ಖಾಸಗಿಕ್ಷೇತ್ರವೂ ಎರಡೂ ಸೇರಿ ಶ್ರಮಿಸಿದರೂ ಮುಗಿಸಲಾರದಷ್ಟು ಅಭಿವೃದ್ಧಿಕಾರ್ಯಗಳು ನಮ್ಮ ಮುಂದೆ ಇರುವಾಗ ಇವನ್ನು ಪರಸ್ಪರ ಶತ್ರುಗಳೆಂದು ವರ್ಣಿಸುವ ಈ ಆತ್ಮಘಾತುಕರಿಂದ ಪ್ರಜ್ಞಾಪೂರ್ವಕ ಸಂಘಟಿತ ಜನತಾ ಚಳುವಳಿಯಿಂದ ಮಾತ್ರ ರಕ್ಷಣೆ ಸಾಧ್ಯ. ಭಾಸಂನಿಗಮಕ್ಕೆ ಸ್ವಾಯತ್ತತೆ ನೀಡಿದರೆ ಅದು ಈಗಲೂ ಲಾಭದಾಯಕವೂ, ಸಾರ್ವಜನಿಕ ಸೇವಾತತ್ಪರವೂ ಆಗಿ ಉಳಿಯುವುದು ಸಾಧ್ಯ.

## ವಿಚಾರಶೀಲರ ಮೇಲೆ ಸಂಪ್ರದಾಯಸ್ಥರ ಆಕ್ರೋಶ

**ಸ**ತ್ಯಾನ್ವೇಷಣೆಯಲ್ಲಿ ತೊಡಗುವ ವಿಚಾರಶೀಲರ ಮೇಲೆ ದಾಳಿ ನಡೆಸುವುದು ಹೊಸದೇನಲ್ಲ, ಅನಾದಿಕಾಲದಿಂದ ಬಂದದ್ದು. ಪಟ್ಟಭದ್ರರಿಗೆ, ಸಂಪ್ರದಾಯಬದ್ಧರಿಗೆ ಅಹಿತಕರವಾಗಿರುವ ಸತ್ಯ ಅರುಹಿದವರನ್ನು ವ್ಯವಸ್ಥೆಯ ಅಡಿಯಾಳುಗಳು ನಿಂದಿಸುವುದು, ಪೀಡಿಸುವುದು, ಕೆಲವೊಮ್ಮೆ ಹಿಂಸಿಸುವುದು ಇತಿಹಾಸದುದ್ದಕ್ಕೂ ನಡೆದುಕೊಂಡುಬಂದಿದೆ. ಚರಕ, ಆರ್ಯಭಟ, ಗೆಲಿಲಿಯೋ ಗೆಲಿಲಿ ಕಾಲದಿಂದ ಹಿಡಿದು ಪ್ರಾರಂಭದ ದಿನಗಳಲ್ಲಿ ವಿಜ್ಞಾನಿಗಳು, ಸಂಶೋಧಕರು ಪಟ್ಟ ಪಾಡು ಎಲ್ಲರಿಗೂ ತಿಳಿದಿದೆ. ಆದರೂ ಪಟ್ಟು ಬಿಡದೆ ಸತ್ಯಶೋಧನೆ ನಡೆಸಿದವರ ವಿಚಾರಗಳು ಇಂದಿಗೂ ಪ್ರಸ್ತುತ.

ಇಪ್ಪತ್ತೊಂದನೆ ಶತಮಾನದಲ್ಲಿ ಅಡಿಯಿರಿಸಿರುವ ಇಂದೂ ಕೂಡ ವಿಚಾರಶೀಲರ ಮೇಲೆ ಸಂಪ್ರದಾಯವಾದಿಗಳಿಂದ ದಾಳಿಯಲ್ಲಿ ಹೆಚ್ಚಿನ ಬದಲಾವಣೆ ಏನಿಲ್ಲ. ಐತಿಹಾಸಿಕ ಸತ್ಯಗಳನ್ನ ತಮಗೆ ಅನುಕೂಲವಾಗುವಂತೆ ತಿರುಚುವುದರಲ್ಲಿ ಸಂಪ್ರದಾಯವಾದಿಗಳು ಸಿದ್ಧಹಸ್ತರಾಗುತ್ತಿದ್ದಾರೆ. ವಸ್ತುಸ್ಥಿತಿಯನ್ನು ವಿಶ್ಲೇಷಣೆ ಮಾಡಿ, ತತ್ತ್ವಬದ್ಧವಾಗಿ ನಿಜವನ್ನು ಎತ್ತಿಹಿಡಿಯುವ ಬುದ್ಧಿಜೀವಿಗಳ ಮೇಲೆ ಕಿಡಿ ಕಾರುವುದು ಈಚೆಗೆ ಹೆಚ್ಚಾಗುತ್ತಿದೆ. ಪಟ್ಟಭದ್ರರಿಗೆ, ಧರ್ಮಾಂಧರಿಗೆ ಎದುರಾಗುವ ಮೊದಲ ಶತ್ರುಗಳು ಬುದ್ಧಿಜೀವಿಗಳು. ಫಾಸಿಸಮ್‌ನ ಇತಿಹಾಸ ಅದಕ್ಕೆ ತಕ್ಕ ಉದಾಹರಣೆ. ಫಾಸಿಸ್ಟ್ ಪ್ರವೃತ್ತಿಗೆ ಮೊದಲು ಬಲಿಯಾದವರು ಬುದ್ಧಿಜೀವಿಗಳು. ಫಾಸಿಸಮ್‌ಗೆ ಬೆಂಬಲ ನೀಡದವರೆಲ್ಲ ದೇಶದ್ರೋಹಿಗಳ ಹಣೆಪಟ್ಟಿ ಹೊತ್ತು ತೊಂದರೆಗೀಡಾದ್ದು ನಮ್ಮ ನೆನಪಿನಲ್ಲಿ ಈಗಲೂ ಹಸಿರಾಗಿಯೇ ಇದೆ.

ನಮ್ಮ ದೇಶದಲ್ಲಿ ಈಗ ಕೇಂದ್ರದಲ್ಲಿ ಆಡಳಿತಾರೂಢವಾಗಿರುವ ಭಾಜಪ ನೇತೃತ್ವದ ಸರಕಾರ ಕ್ರಮಬದ್ಧವಾದ ರೀತಿಯಲ್ಲಿ ತನ್ನ ನೀತಿಯನ್ನು ಒಪ್ಪದಿರುವ ಬುದ್ಧಿಜೀವಿಗಳ ಮೇಲೆ ದಾಳಿ ನಡೆಸುತ್ತಿದೆ. ಇತಿಹಾಸವನ್ನು ತಿದ್ದಿ, ವಿಕೃತಗೊಳಿಸಿ, ತಮ್ಮ ವಿಚಾರಗಳನ್ನು ತುರುಕಲು ಭಾಜಪ ಆಯ್ಕೆಮಾಡಿಕೊಂಡಿರುವುದು ವಿದ್ಯಾಭ್ಯಾಸ ಕ್ಷೇತ್ರ. ವಿಶ್ವವಿಖ್ಯಾತ ಇತಿಹಾಸಕಾರರನ್ನು ವಿಚಾರಶೀಲರನ್ನು ಅದು ನಡೆಸಿಕೊಂಡಿರುವ ರೀತಿ ನಿಜಕ್ಕೂ ಅಪಮಾನಕರ. ಪಠ್ಯಪುಸ್ತಕಗಳಲ್ಲಿ ಅದು ತಂದಿರುವ ಮಾರ್ಪಾಟುಗಳು ಸರ್ವತ್ರ ಖಂಡನೆಗೀಡಾಗಿದೆ. ಆಡಳಿತದ ಚುಕ್ಕಾಣಿ ಹಿಡಿದಿರುವ ಭಾಜಪ ಆಯಕಟ್ಟಿನ ಸ್ಥಾನಗಳಲ್ಲಿ ವಿಚಾರಶೀಲರಾದ ತಜ್ಞರನ್ನು ಕಿತ್ತುಹಾಕಿ ತನ್ನ ಭಂಟರನ್ನು ನೇಮಿಸುತ್ತಿರುವುದು ಸರ್ವವಿದಿತ. ಭಾಜಪದ ವರಿಷ್ಠರು, ಸಂಘಪರಿವಾರದ ವಿವಿಧ ಶಾಖೆಗಳಾದ ವಿಶ್ವ ಹಿಂದೂಪರಿಷತ್, ಭಜರಂಗದಳ ಮೊದಲಾದ ಸಂಘಟನೆಗಳ ಪ್ರಮುಖರು ಬುದ್ಧಿಜೀವಿಗಳ ಮೇಲೆ ದಾಳಿಯನ್ನು ತೀವ್ರಗೊಳಿಸಿದ್ದಾರೆ. ಅವರ ವಿಚಾರಗಳನ್ನು ಒಪ್ಪದವರನ್ನು ಮಾರ್ಕ್ಸ್‌ವಾದಿಗಳು, ಕಮ್ಯುನಿಸ್ಟರು, ಮುಸಲ್ಮಾನರ ಪರರು ಎಂದೆಲ್ಲ ಹಣೆಪಟ್ಟಿ ಮಾಡಿ ಗೊಂದಲ ಉಂಟುಮಾಡಲು ನೋಡುತ್ತಿದ್ದಾರೆ. ಕೋಮು ಸಾಮರಸ್ಯ ಬಯಸುವವರು, ವೈಚಾರಿಕ ಪ್ರಜ್ಞೆ ಉಂಟುಮಾಡಲು ಶ್ರಮಿಸುವವರು ಮಾರ್ಕ್ಸ್‌ವಾದಿಗಳೋ ಕಮ್ಯುನಿಸ್ಟರೋ ಆಗಿಯೇ ಇರುತ್ತಾರೆಂದೇನೂ ಇಲ್ಲ. ಆದರೂ ಈ ರೀತಿ ಬುದ್ಧಿಜೀವಿಗಳಿಗೆ ಹಣೆಪಟ್ಟಿ ಕಟ್ಟುವುದು ಈಗ ಫ್ಯಾಷನ್ ಆಗುತ್ತಿದೆ. ಇದರಿಂದ ಕಮ್ಯುನಿಸ್ಟರಿಗೆ ಅವರೆಷ್ಟು ಹೆದರುತ್ತಾರೆಂದು ಗೊತ್ತಾಗುತ್ತದೆ. ಇದಕ್ಕೆ ಯಾರೂ ಮಾರುಹೋಗರು ಎಂಬುದನ್ನು ಅವರು ತಿಳಿಯಬೇಕು.

ಮಾಧ್ಯಮಗಳಲ್ಲಿ, ಪತ್ರಿಕೆಗಳಲ್ಲಿ ಸಂಘಪರಿವಾರದ ಭಂಟರು ಸತ್ಯಾಂಶಗಳನ್ನು ತಿರುಚಿ ಬುದ್ಧಿಜೀವಿಗಳನ್ನು ಅವಹೇಳನ ಮಾಡಲು ನೋಡುತ್ತಾರೆ. ಗುಜರಾತ್ ಕೋಮುಗಲಭೆಗಳ ಸಂದರ್ಭದಲ್ಲಿ ಇದು ಅತ್ಯಂತ ಸ್ಪಷ್ಟವಾಗಿ ಕಂಡುಬಂದಿತು. ಭಾಜಪ ನಾಯಕರು, ಸಂಘಪರಿವಾರದ ವರಿಷ್ಠರು ಎಲ್ಲ ನಿಯಮಾವಳಿಗಳನ್ನು ಗಾಳಿಗೆ ತೂರಿ ಸರಕಾರಿ ಸಂಸ್ಥೆಗಳಲ್ಲಿ ತಮ್ಮ ಭಂಟರನ್ನು ತೂರಿಸುವುದನ್ನು ಬಹಿರಂಗವಾಗಿಯೇ ಸಮರ್ಥಿಸಿಕೊಳ್ಳುತ್ತಿದ್ದಾರೆ. ಉನ್ನತ ವಿದ್ಯಾಸಂಸ್ಥೆಗಳಲ್ಲಿ, ಇತರ ಸಾರ್ವಜನಿಕ ಸಂಸ್ಥೆಗಳಲ್ಲಿ ಇರುವ ವಿಚಾರಶೀಲ ತಜ್ಞರನ್ನು ಮಾರ್ಕ್ಸ್‌ವಾದಿಗಳ ಪಟ್ಟಿಗೆ ಸೇರಿಸಿ ತೆಗೆದುಹಾಕಿ ಶುದ್ಧೀಕರಿಸುವ ಅಗತ್ಯತೆಯನ್ನು ಅವರು ಸ್ಪಷ್ಟವಾಗಿ ಹೇಳಿಕೊಂಡಿದ್ದಾರೆ. ಉದಾಹರಣೆಗೆ, ಜವಹರಲಾಲ್ ನೆಹರೂ ವಿಶ್ವವಿದ್ಯಾಲಯದ ಅಧ್ಯಾಪಕ ವರ್ಗವನ್ನು ಸಾರಾಸಗಟಾಗಿ ಈ ಪಟ್ಟಿಗೆ ಸೇರಿಸಲಾಗಿದೆ. ಸಂಘಪರಿವಾರದ ದೃಷ್ಟಿಯಲ್ಲಿ ಇಂದು ಬುದ್ಧಿಜೀವಿಗಳು ಎಂದರೆ ಅವರು ಮುಸಲ್ಮಾನರ ಪರ ವಕಾಲತ್ತು ವಹಿಸುವವರು, ಕಮ್ಯುನಿಸ್ಟರು ಎಂದೇ ಆಗಿದೆ. ಹೊಸದಾಗಿ ಸಂಘಪರಿವಾರಕ್ಕೆ ನಿಷ್ಠೆ ತೋರುತ್ತಿರುವ ಕೆಲವರು ಈ ವಿಷಯದಲ್ಲಿ ಅವರಿಗಿಂತ ಒಂದು ಹೆಜ್ಜೆ ಮುಂದೆ ಹೋಗಿದ್ದಾರೆ. ಅಲ್ಲಿ ಇಲ್ಲಿ ಕದ್ದದ್ದನ್ನು ತಮ್ಮದೇ ಎಂದು ಹೇಳಿಕೊಂಡು ಪ್ರಚಾರದಲ್ಲಿ ತೊಡಗುತ್ತಿದ್ದಾರೆ, ಅಧಿಕಾರದಲ್ಲಿರುವವರನ್ನು ತೃಪ್ತಿಗೊಳಿಸಲು. ಆದರೆ ಅಪಪ್ರಚಾರದಿಂದ, ಹಣೆಪಟ್ಟಿ ಕಟ್ಟುವುದರಿಂದ ಸತ್ಯವನ್ನು ದೀರ್ಘಕಾಲ ಮುಚ್ಚಿರಿಸಲು ಸಾಧ್ಯವಾಗದು ಎನ್ನುವುದನ್ನು ಅವರು ಅರಿತುಕೊಳ್ಳಬೇಕು.

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ : ೨೨೫೫೩೮೭

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ☎ : ೨೪೪೧೦೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ☎ : ೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ☎ : ೪೨೪೩೦೨




**ಬಿ.** ಪೀರ್‌ಬಾಷ ಅವರ ನಾಟಕ "ಶೂದ್ರಶಕ್ತಿ" ಇತ್ತೀಚಿಗೆ ನಡೆದ ಅಮಾನವೀಯ, ಖಂಡನೀಯ ಘಟನೆಗೆ ಹಿಡಿದ ಕನ್ನಡಿಯಾಗಿರುವುದಲ್ಲದೆ ಪ್ರತಿಭಟನೆಯ ಸಂಕೇತವೂ ಹೌದು. ಭಾರತೀಯ ಸಮಾಜ ಯಾವಾಗಲೂ ಬಲಹೀನರನ್ನು ತುಳಿದು ಉಳ್ಳವರ, ಬಲವಂತರ, ಅಧಿಕಾರಸ್ಥರ ಕಡೆಗೆ ಒಲವನ್ನು ತೋರಿಸುವಂಥದ್ದಾಗಿದೆ. ಅಸ್ಪೃಶ್ಯತೆಯಾ ಇನ್ನಾವುದೇ ಸಾಮಾಜಿಕ ಪಿಡುಗುಗಳನ್ನು ದೇಶದಿಂದ ಓಡಿಸಬೇಕಾದರೆ ಮುಖ್ಯವಾಗಿ ಸಾಮಾನ್ಯ ಜನರು, ಈ ದೇಶದ ಮೂಲ ನಿವಾಸಿಗಳೆಲ್ಲರೂ ಶಿಕ್ಷಣ ಪಡೆದು, ಸಂಘಟಿತರಾಗಿ ಹೋರಾಡಿದರೆ ಗುರಿ ಮುಟ್ಟುವುದು ದೂರವಿಲ್ಲ, ನಾಟಕ ಮಾರ್ಮಿಕ.

*ಸೇಡಂ* **ಅಣ್ಣಾಸಾಗರ್ ಬಿ. ಆರ್.**

'ಪುಸ್ತಕ ಪ್ರಸರಣಪ್ರಿಯ ಶ್ರೀ ಕಿಟ್ಟಪ್ಪಗೌಡ'ರ ಬಗ್ಗೆ ಕೋ. ಚೆನ್ನಬಸಪ್ಪ ಅವರು ಬರೆದ ಲೇಖನದಿಂದ ಪುಸ್ತಕಪ್ರಿಯರ ಸಂತತಿಗೆ ಇನ್ನಷ್ಟು ಒತ್ತುಕೊಟ್ಟಂತಾಗಿದೆ.

ಇಂದಿನ ದೃಶ್ಯ ಮಾಧ್ಯಮಗಳ ವೈಭವೀಕರಣಕ್ಕೆ ಸಿಕ್ಕಿದ ಯುವಪೀಳಿಗೆ ಪುಸ್ತಕ ಓದಿನ ಆಸಕ್ತಿಯನ್ನು ಕಳೆದುಕೊಂಡಿದೆ. ಕಿಟ್ಟಪ್ಪ ಮೇಸ್ಟ್ರಂತಹ ಮಹಾನುಭಾವರು ಸರ್ಕಾರವು ಮಾಡದಂತಹ ಕಾರ್ಯವನ್ನು ಮಾಡಿ ತೋರಿಸಿದ್ದಾರೆ. ಕನ್ನಡ ಪುಸ್ತಕದ ಮೇಲಿನ ಪ್ರೀತಿ ಹೀಗೆ ಹೆಚ್ಚಾಗುತ್ತಲೇ ಹೋದರೆ ನಿಜಕ್ಕೂ ಕಿಟ್ಟಪ್ಪನಂಥವರು, ಕೋ. ಚೆ. ಅಂಥವರು ಮಾಡಿದಂತಹ ಘನಕಾರ್ಯ ಸಾರ್ಥಕವಾಗುತ್ತದೆ. ನಿಜಕ್ಕೂ ಇದೊಂದು ಶ್ಲಾಘನೀಯ ಬೆಳವಣಿಗೆ.

*ತೀರ್ಥಹಳ್ಳಿ* **ರಾಂ ಕೊಪ್ಪಲು**

## ಕೃಷಿ ಪತ್ರಿಕೋದ್ಯಮ ಪ್ರಶಸ್ತಿಗೆ ಆಹ್ವಾನ

ಆಸಕ್ತರು ಸೆಪ್ಟೆಂಬರ್ ೨೦೦೨ರಿಂದ ಆಗಸ್ಟ್ ೨೦೦೩ರ ನಡುವೆ ಯಾವುದೇ ಪತ್ರಿಕೆ ಅಥವಾ ನಿಯತಕಾಲಿಕದಲ್ಲಿ ಪ್ರಕಟಗೊಂಡ ಕೃಷಿಕಪರ ಬರಹವನ್ನು ಕಳುಹಿಸಿಕೊಡಲು ಕೋರಲಾಗಿದೆ. ಒಬ್ಬರು ಗರಿಷ್ಠ ಎರಡು ಲೇಖನಗಳನ್ನು ಕಳುಹಿಸಬಹುದು. ಪೂರ್ಣ ವಿಳಾಸ ಹಾಗೂ ಉದ್ಯೋಗದ ವಿವರ ಬರೆಯುವುದು ಅಗತ್ಯ. ಪ್ರವೇಶದೊಂದಿಗೆ ಐದು ರೂಪಾಯಿ ಸ್ಟಾಂಪ್ ಹಚ್ಚಿದ ಸ್ವ ವಿಳಾಸ ಬರೆದ ಉದ್ದನೆಯ ಲಕೋಟೆ ಲಗತ್ತಿಸಲು ಕೋರಿದೆ. ಪ್ರವೇಶ ಸ್ವೀಕರಿಸಲು ಕೊನೆಯ ದಿನಾಂಕ ಸೆಪ್ಟೆಂಬರ್ ೫, ೨೦೦೩.

*ಲೇಖನಗಳನ್ನು ಕಳುಹಿಸಬೇಕಾದ ವಿಳಾಸ :*

**ಅನಿತಾ ಪೈಲೂರು**

**ಪರ್ಯಾಯ ಕೃಷಿಮಾಧ್ಯಮ ಕೇಂದ್ರ,**

ಕೃಷ್ಣಾಲಯ, ೧ನೇ ಮುಖ್ಯರಸ್ತೆ, ೪ನೇ ಅಡ್ಡರಸ್ತೆ,
ನಾರಾಯಣಪುರ, ಧಾರವಾಡ - ೫೮೦ ೦೦೮.

ಡಾ॥ ಜಯಪ್ರಕಾಶ ಮಾವಿನಕುಳಿಯವರ 'ಮಹಿಳೆಯರು...' ಲೇಖನ ಹಿಡಿಸಿತು. ಕುಟುಂಬದ ಕಣ್ಣಾದ ಈ ಹೆಣ್ಣಿನ ಹಿರಿಮೆ ಅಪಾರ. ಈಕೆ ಬರಿ ಹೆಣ್ಣಾಗದೇ ಸರ್ವರಿಗೂ 'ತಾಯಿ' ಎನ್ನಿಸೋದೆ ಘನ ವ್ಯಕ್ತಿತ್ವ !

*ಕಣಿವೆ ಬಿಳಚಿ* **ಸಂತೇಬೆನ್ನೂರು ಫೈಜ್ನಟ್ರಾಜ್**




ಜೂನ್-೦೩ರ 'ಹೊಸತು' ಮತ್ತೊಂದು ಸಮೃದ್ಧ ಸಂಚಿಕೆ. ಉತ್ತಮ ಲೇಖನಗಳು, ಕಾವ್ಯಧಾರೆಯೊಂದಿಗೆ ಮುದನೀಡಿದ ಸಂಚಿಕೆ.

ಡಾ॥ ದಯಾನಂದ ಅವರ 'ನೀರು, ನೀರು, ನೀರು' ಲೇಖನ ತುಂಬಾ ಮಾಹಿತಿ ನೀಡುತ್ತದೆಯಾದರೂ ಒಂದು ಮುಖ್ಯ ಸಂಗತಿಯನ್ನು ಪ್ರಸ್ತಾಪಿಸದೆ ಬಿಟ್ಟಿದ್ದಾರೆ. ಅದೇ ನಮ್ಮ ಅಭಯಾರಣ್ಯಗಳ ಸಂರಕ್ಷಣೆ. ನೀರಿನ ಸೆಲೆ ಮಳೆ ನಿಜ, ಆದರೆ ಮಳೆಯ ಚಕ್ರ ಕಾಡುಗಳಿಲ್ಲದೆ ಅಪೂರ್ಣವಾಗುತ್ತದೆ. ಮಳೆಕೊಯಿಲಿನಂತಹ ಉತ್ತಮ ಮಾರ್ಗೋಪಾಯಗಳಂತೆ ಅರಣ್ಯ ಸಂರಕ್ಷಣೆ ಅತ್ಯಂತ ಜರೂರಾಗಿ ಹಾಗೂ ಆದ್ಯತೆ ಮೇರೆಗೆ ಮಾಡಬೇಕಾದ ಕ್ರಮ. ಇದರಿಂದ ವನ್ಯ ಜೀವಿಗಳೂ ರಕ್ಷಿತವಾಗುತ್ತವೆ. ವಾಸ್ತವದಲ್ಲಿ ವನ್ಯಜೀವಿ - ಅರಣ್ಯಗಳ ಸಮತೋಲನವೇ 'ನೀರಿನ' ಸೆಲೆ.

*ಬೆಂಗಳೂರು* **ಕೆ. ಎಸ್. ನವೀನ್**

ಸೀಯಾರ್ಕೆರವರ "ಭಾರತ-ಪಾಕಿಸ್ತಾನ ಫಲಪ್ರದ ಮಾತುಕತೆಗೆ ಎಚ್ಚರ ಅಗತ್ಯ" ಅತ್ಯಂತ ಉಪಯುಕ್ತವಾಗಿದೆ. ಎರಡು ದೇಶಗಳ ಮಧ್ಯೆ ಸಂಬಂಧಗಳು ಉತ್ತಮಗೊಳ್ಳುವುದಕ್ಕೆ ಕಾಶ್ಮೀರ ಸಮಸ್ಯೆಗೆ ಪರಿಹಾರ ಕಾಣುವುದು ಬಹಳ ಮುಖ್ಯವಾದ ಅಂಶ ಎಂಬುದರಲ್ಲಿ ನೂರಕ್ಕೆ ನೂರರಷ್ಟು ಸತ್ಯವಾದ ಅಂಶವಾಗಿದೆ.

ವಸುಮತಿ ಉಡುಪರವರು "ಬದುಕು"ವಿನಲ್ಲಿ ತೋರಿರುವ ಅಂಶಗಳನ್ನು ಈಗಲೂ ಬಡ ವರ್ಗದ ಜನರಲ್ಲಿ ಕಾಣಬಹುದು. ಶೇ. ೪೦ರಷ್ಟು ಮಕ್ಕಳು ಶಾಲೆಗೆ ಸೇರದೆ ಜೀವನ ಹೊರೆಯುವುಧಕ್ಕೆ ತಮ್ಮ ತಮ್ಮ ಕಸುಬುಗಳಲ್ಲಿ ತೊಡಗಿದ್ದಾರೆ.

ಅಲ್ಲಮಪ್ರಭುವಿನ ವಚನವನ್ನು ಆಧರಿಸಿ "ಸಂಸಾರವೆಂಬ ಹೆಣಬಿದ್ದರೆ" ಲೇಖನದಲ್ಲಿ, ನಮ್ಮ ಪ್ರಪಂಚದಲ್ಲಿ ಜಾಗತೀಕರಣದಿಂದ ಉಂಟಾಗುತ್ತಿರುವ ಸಮಸ್ಯೆಗಳ ಬಗ್ಗೆ ವಿವರಣೆಯನ್ನು ನೀಡಿರುವುದು ಬಹಳ ಉಪಯುಕ್ತವಾಯಿತು. ಪ್ರೊ॥ ಶಿವರಾಮಯ್ಯರವರಿಗೆ ಧನ್ಯವಾದಗಳು. "ಪುಗಸಟ್ಟೇ ಪ್ರಸಂಗ"ದಂಥ ಲೇಖನಗಳನ್ನು ಹೆಚ್ಚು ಪ್ರಕಟಿಸಿ. ಕೊನೆಯದಾಗಿ "ನೆಮ್ಮದಿಯ ನಾಳೆ ನಮ್ಮದು" – ಹೇಗೆ ?

ಹೊನ್ನಾಯ್ಕನಹಳ್ಳಿ **ನೆಲ್ಲೂರು ಕೆ. ಹನುಮೇಗೌಡ**

### ಬೇಡ ಈ ಕಾಯಕ

ಎತ್ತಿಕೋ ತ್ರಿಶೂಲ ಎಂದರೆ
ಮಗುವಿನ ಎಳೆನಗು
ಕಣ್ಣು ತುಂಬುತ್ತದೆ
ಪಾರಿವಾಳದ ಹಾರಾಟ
ಮನ ಸೆಳೆಯುತ್ತದೆ
ದಂಡೆಯಲಿ ಬಿರಿದ
ಮಲ್ಲಿಗೆಯ ದಂಡೆ
ನೀರಿನಲಿ ಮುಖ ನೋಡುತ್ತದೆ
ತಿಳಿನೀರ ಕೆಂಪಾಗಿಸಲು
ಮನಸಿಲ್ಲ ಒಡೆಯಾ
ಬೇಡ ಈ ಕಾಯಕ
ತೊಗಾಡಿಯಾ

***ಡಾ॥ ರಂಗಾರೆಡ್ಡಿ ಕೋಡಿರಾಂಪುರ***

### ಆನ್‌ಲೈನ್

ಕೆಲವರಿಗೆ ಆಟ
ಆಡಿಸುತ್ತದೆ,
ಆಡಿ ಸುಸ್ತಾದವರ
ಪ್ರಾಣ ತೆಗೆಸುತ್ತದೆ

ಮಂಡ್ಯ **ಎನ್. ಶ್ರೀನಿವಾಸ್**

## ಜಿ. ಬಿ. ಜೋಶಿ ಶತಮಾನೋತ್ಸವ

"ಜಿ. ಬಿ. ಜೋಶಿ ಜನ್ಮಶತಮಾನೋತ್ಸವ"ವನ್ನು ಇದೇ ಜುಲೈ ೨೯, ೨೦೦೩ ರಂದು ಧಾರವಾಡದಲ್ಲಿ ಪ್ರಾರಂಭಿಸಿ, ವರ್ಷಪರ್ಯಂತ ರಾಜ್ಯದ ಇತರ ಭಾಗಗಳಲ್ಲಿ ಸ್ಥಳೀಯ ಸಂಘ ಸಂಸ್ಥೆಗಳ ಸಹಕಾರದಿಂದ ವಿಚಾರಸಂಕಿರಣ ಹಾಗೂ ನಾಟಕೋತ್ಸವಗಳನ್ನು ಏರ್ಪಡಿಸುವ ಯೋಜನೆ ಹಾಕಿಕೊಂಡಿದ್ದೇವೆ.

"ಜಿ. ಬಿ. ಜೋಶಿ ಮೆಮೋರಿಯಲ್ ಟ್ರಸ್ಟ್" ಎಂಬ ಪ್ರತಿಷ್ಠಾನವನ್ನು ಪ್ರಾರಂಭಿಸಿ, ಅದರ ಮೂಲಕ ಜಿ. ಬಿ.ಯವರ ಕನಸುಗಳನ್ನು ನನಸಾಗಿಸುವ ಕಾರ್ಯ ಕೈಗೆತ್ತಿಕೊಂಡಿದ್ದೇವೆ. ಅದರ ಬಗ್ಗೆ ವಿವರವಾದ ಮನವಿಗಾಗಿ ಸಂಪರ್ಕಿಸಿ.

**ಜಿ. ಬಿ. ಜೋಶಿ ಮೆಮೋರಿಯಲ್ ಟ್ರಸ್ಟ್**
ನಂ. ೨, ಮೆಣಸಿನಕಾಯಿ ಓಣಿ
ಮಂಗಳವಾರಪೇಟ, ಧಾರವಾಡ - ೫೮೦ ೦೦೧
ದೂರವಾಣಿ : ೦೮೩೬-೨೪೪೧೮೨೨, ೨೪೪೭೦೦೨

ಸಂಕುಲಜೀವ ಅವರ 'ಸೀತೆ, ಅಹಲ್ಯೆ, ನಾನು, ನೀವು' ಲೇಖನ, ನೂರಾರು ವರ್ಷಗಳಿಂದ ಸಮಾಜ ನೆಚ್ಚಿಕೊಂಡು ಬಂದ ಯೋನಿಶೀಲ (ಯೋನಿಪಾವಿತ್ರ್ಯ, ಯೋನಿಪರಿಶುದ್ಧತೆ) ಎಂಬ ಮೌಢ್ಯಕ್ಕೆ ಹೊಸ ಆಯಾಮವನ್ನು ನೀಡಿ, ವಿಚಾರವಂತರೆಲ್ಲರೂ ಆ ಬಗೆಗೆ ಚಿಂತಿಸುವಂತೆ ಮಾಡಿದೆ. ಯೋನಿಶೀಲಕ್ಕೆ ನಮ್ಮ ಸಮಾಜ ಕೊಟ್ಟ ಅನಗತ್ಯ ಪ್ರಾಮುಖ್ಯ, ಪ್ರಾಶಸ್ತ್ಯಗಳಿಂದಾಗಿ, ಇಂದು ಲಕ್ಷಾಂತರ ಮಹಿಳೆಯರ ಗೌರವದ, ಘನತೆಯ, ಮಾನವಂತ ಬದುಕಿಗೇ ಕಿಚ್ಚಿಟ್ಟಂತಾಗಿದೆ. ಒಂದು ಗಂಡು ಬಲಾತ್ಕಾರದಿಂದ ಒಂದು ಹೆಣ್ಣಿನೊಂದಿಗೆ ದೈಹಿಕ ಮಿಲನವಾದಾಗ, ಅಥವಾ ಒಂದು ಗಂಡಿನಿಂದ ಹೆಣ್ಣಿನ ಮೇಲೆ ಅತ್ಯಾಚಾರ ನಡೆದಾಗ, ಸ್ತ್ರೀ ಕೆಡುತ್ತಾಳೆ ಎಂಬ ವಿಚಾರವೇ ತಲೆಬುಡವಿಲ್ಲದ್ದು, ಅತಾರ್ಕಿಕವಾದ್ದು, ಅವೈಜ್ಞಾನಿಕವಾದ್ದು. ಶತಮಾನಗಳಿಂದ ಸಮಾಜಕ್ಕಂಟಿದ ದೃಷ್ಟಿಮಾಂದ್ಯದಿಂದ ನಾವು ಹೊರ ಬಂದು, ಮಹಿಳೆಯರ ಶೀಲ, ಚಾರಿತ್ರ್ಯ ಕುರಿತಾದ ಹೊಸ ಮೌಲಿಕ ಚಿಂತನೆಗಳೆಡೆಗೆ ನಮ್ಮ ಪ್ರಜ್ಞೆಯನ್ನು ಜಾಗೃತಗೊಳಿಸಬೇಕಾಗಿದೆ. ಸ್ವಸ್ಥ ಸಮಾಜದ ದೃಷ್ಟಿಯಿಂದ ಈ ಲೇಖನ ತುಂಬ ಅರ್ಥಪೂರ್ಣವಾದ್ದು.

ಮೂಡಂಬೈಲು **ಸಿ. ಎಚ್. ಕೃಷ್ಣಶಾಸ್ತ್ರಿ**

ತ್ರಿಶೂಲ, ಲಾಠಿ ಮುಂತಾದುವುಗಳು ಹಿಂಸೆಯ ಸಂಕೇತಗಳು. ಪ್ರಜಾಪ್ರಭುತ್ವದಲ್ಲಿ ಹಿಂಸೆಗೆ ಸ್ಥಾನ ಇಲ್ಲ ಎನ್ನುವ ಪ್ರಧಾನಿ ವಾಜಪೇಯಿಯವರ ಮಾತು ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ವಾಜಪೇಯಿ ಮಾತಿನ ಮಲ್ಲ ಎನ್ನುವುದು ಎಲ್ಲರಿಗೂ ತಿಳಿದ ವಿಚಾರ. ಮಾತು ಬೇರೆ, ಕೃತಿ ಬೇರೆ ಎನ್ನುವುದನ್ನು ಅವರು ನಡೆದು ಬಂದ ದಾರಿಯನ್ನು ಗಮನಿಸಿದರೆ ಯಾರಿಗಾದರೂ ತಿಳಿಯುತ್ತದೆ.

ವಾಜಪೇಯಿ ಅವರು ಪ್ರತಿನಿಧಿಸುವ ಸಂಘಪರಿವಾರ ಹಿಂಸೆಯನ್ನೇ ಆಧಾರಸ್ತಂಭವನ್ನಾಗಿರಿಸಿಕೊಂಡು ಬೆಳೆದು ಬಂದಿರುವ ಒಂದು ಒಕ್ಕೂಟ. ಈ ಪ್ರಜಾಪ್ರಭುತ್ವದಲ್ಲಿ ಹಿಂಸೆಯ ಸಾಧ್ಯತೆಗಳನ್ನು ತಿಳಿದು ಅದನ್ನು ಆಯೋಜಿತವಾಗಿ ಕಾರ್ಯರೂಪಕ್ಕೆ ತರುವುದರಲ್ಲಿ ಸಂಘಪರಿವಾರದ ಸದಸ್ಯರು ಯಶಸ್ಸು ಕಂಡಿದ್ದಾರೆ. ಕಾನೂನಿನ ಹಸ್ತಕ್ಕೆ ಸಿಲುಕದೆ ಅನೇಕ ಹಿಂಸಾಚಾರಗಳ ಸರಣಿಯನ್ನೇ ಈ ದೇಶದಲ್ಲಿ ಸಂಘಪರಿವಾರ ನಡೆಸಿದೆ.

ಸಂಘಪರಿವಾರದ ನಾಯಕರ ಭಾಷಣದಿಂದ ಹಿಡಿದು ಅವರ ಎಲ್ಲಾ ಕ್ರಿಯೆಗಳಲ್ಲೂ ಹಿಂಸೆ ಅಡಗಿದೆ. ಪ್ರವೀಣ್ ತೊಗಾಡಿಯಾ ಆಗಿರಲಿ, ವಿನಯ್ ಕತಿಯಾರ್ ಆಗಿರಲಿ, ಉಮಾಭಾರತಿ ಅಥವಾ ವಸುಂಧರಾ ಅವರೇ ಆಗಿರಲಿ, ಅವರ ಮಾತುಗಳಲ್ಲಿ ಹಿಂಸೆ ಹಬೆಯಾಡುತ್ತಿರುತ್ತದೆ. ಮತ್ತೊಂದು ಕೋಮಿನ ವಿರುದ್ಧ ದ್ವೇಷದ ಭಾವನೆ ಬೆಳೆಸಲು ತಮ್ಮ ಭಾಷಣಗಳನ್ನು ಅವರು ಬಳಸುತ್ತಾರೆ. ಹಿಂಸೆಯ ಅಡಿಪಾಯದ ಮೇಲೆ ನೆಲೆ ನಿಂತಿರುವ ಸಂಘ ಪರಿವಾರದ ನಾಯಕರೊಬ್ಬರು ಈಗ ಹಿಂಸೆಯ ಚಿಹ್ನೆಗಳ ವಿರುದ್ಧ ಮಾತನಾಡುತ್ತಿರುವುದು ವಿರೋಧಾಭಾಸವಲ್ಲವೇ ?

ಮೈಸೂರು **ಪಿ. ಪಿ. ಬಾಬುರಾಜ್**

## ಹೀಗೊಂದು ಕಲಿಕೆ

ಸ್ನೇಹಿತನೂರಿಗೆ ಪ್ರಯಾಣ ಹೊರಟಿದ್ದೆ. ಅದಕ್ಕೂ ಮುನ್ನ ಪ್ರಯಾಣದಲ್ಲಿಯ ಹವ್ಯಾಸದಂತೆ ಬಸ್ ನಿಲ್ದಾಣದಲ್ಲಿಯ ಪುಸ್ತಕ ಮಳಿಗೆಗೆ ಹೋದೆನು. ಅಂಗಡಿಗೆ ಬಂದಿದ್ದ ಬಂಡಲ್ ಅನ್ನು ಒಡೆದಾಕ್ಷಣ ವಾರಪತ್ರಿಕೆ ಖರೀದಿಸಿದ ಮೊದಲಿಗನಾಗಿದ್ದೆ. ಬಸ್ ಪ್ರಯಾಣ ಆರಂಭವಾಗಿ ಕೆಲ ದೂರ ಸಾಗಿದ್ದೆ. ನನ್ನೊಂದಿಗೆ ಪಕ್ಕದಲ್ಲಿ ಅಪರಿಚಿತನು ಕುಳಿತಿದ್ದನ್ನು ಗಮನಿಸಿದ್ದೆ. ನಾನು ಓದುವ ಪುಟದಲ್ಲಿ ಆತನೂ ಮಗ್ನನಾಗಿದ್ದನು; ಆತನು ಹಿಂದಿಯಲ್ಲಿ ಮಾತನಾಡಿಸಿದಾಗಲೇ ಆತನೆಡೆ ಗಮನಿಸಿದೆ. ಆತನು ಪ್ರಶ್ನಿಸಿದ್ದು 'ಜೀ ಯಹ ಕನ್ನಡ್ ಮೆ 'ಹ' ಹೈನಾ' ಎಂದು. ಅದು 'ಹ' ದ ಬದಲಾಗಿ 'ಹಾ' ಅಕ್ಷರವಿದ್ದು, ಅವರಿಗೆ ಕನ್ನಡ ಭಾಷೆ ಪರಿಚಯವಿಲ್ಲದ್ದನ್ನು ಅರಿತೆ. ಪುನಃ ಅವರ ಮಾತಿನಲ್ಲೇ 'ಹ' ನಹೀಂ, ಕನ್ನಡ ಮೆ 'ಹಾ' ಹೈ' ಎಂದು ಉತ್ತರಿಸಿದೆ. ಅವರು ಕನ್ನಡ ಅಕ್ಷರ ಗುರುತಿಸುವಲ್ಲಿ ತಪ್ಪಾಗಿತ್ತು. ಅಲ್ಲದೇ ಆತ ಕನ್ನಡೇತರನಾಗಿದ್ದನ್ನು ಮನದಲ್ಲೇ ಅಂದುಕೊಂಡು ನನ್ನ ಪಾಡಿಗೆ ನಾನು ಪತ್ರಿಕೆಯ ಲೇಖನದಲ್ಲಿ ತಲ್ಲೀನನಾದೆ. ಅವರೊಂದಿಗೆ ಹೆಚ್ಚಿನ ಪರಿಚಯದ ಆಸಕ್ತಿ ತೋರದೆ ಇದ್ದಾಗ್ಯೂ, ತನ್ನ ಸೀಟ್ ಕೆಳಗಡೆಯಿಂದ ಸೂಟ್‌ಕೇಸ್ ಎತ್ತಿ, ತಮ್ಮ ತೊಡೆಯ ಮೇಲೆ ಇಟ್ಟುಕೊಂಡು ಒಳಗಡೆ ಇರುವ ಫೈಲ್ ತೆರೆದರು. ಅದರಲ್ಲಿರುವ ಬಿಳಿ ಕಾಗದ ತೆರೆದರು. ನನ್ನೊಂದಿಗೆ ಹಿಂದಿಯಲ್ಲಿರುವಂತೆ ಕನ್ನಡ ಮೂಲಾಕ್ಷರಗಳನ್ನು ಹಾಗೂ ಅವುಗಳ ಉಚ್ಚಾರಗಳನ್ನು, ಹಿಂದಿ ಮೂಲಾಕ್ಷರಗಳೊಂದಿಗೆ ಹೋಲಿಸಿ ಬರೆದುಕೊಡಲು ವಿನಂತಿಸಿದರು. ಅವರ ಅಪೇಕ್ಷೆ ಬಹಳಷ್ಟು ಖುಶಿ ನೀಡಿತು. ಕೋರಿಕೆಯಂತೆ ಪ್ರಯಾಣದಲ್ಲಿಯೇ ಅವರು ನೀಡಿದ ಬಿಳಿಕಾಗದದಲ್ಲಿ ಹಿಂದಿಯಂತೆ ಕನ್ನಡ ವರ್ಣಮಾಲೆಗಳನ್ನು ಬರೆದೆನು. ಹಾಗೆಯೇ ಅವುಗಳನ್ನು ತುಲನಾತ್ಮಕವಾಗಿ ಉಚ್ಚಾರಗಳೊಂದಿಗೆ ವ್ಯತ್ಯಾಸ ಸಹಿತ ಪರಿಚಯ ಮಾಡಿಕೊಟ್ಟೆನು. ನಂತರ ನನ್ನ ಮನಸ್ಸಿನಲ್ಲಿ ಹಾದು ಹೋದ ವಿಚಾರಗಳು ಹಲವು. ಕನ್ನಡನಾಡಲ್ಲಿ ಕನ್ನಡ ಮಾಧ್ಯಮ ಆಯ್ಕೆಯ ಗೋಜಲು, ಆಡಳಿತದಲ್ಲಿ ಕನ್ನಡ ಅನುಷ್ಠಾನಕ್ಕಾಗಿ ನಡೆದಿರುವ, ನಡೆಯುತ್ತಿರುವ ಪ್ರಯತ್ನ, ಹಾಗೆಯೇ ಆಂಗ್ಲಭಾಷಾ ವ್ಯಾಮೋಹದಿಂದಾಗಿ ಮಕ್ಕಳಿಗಾಗಿ ಪ್ರವೇಶ ಪಡೆಯಲು ಮಧ್ಯಮ ವರ್ಗದವರ ಗೋಳಾಟ; ಇವೆಲ್ಲವನ್ನು ಮನದಲ್ಲೇ ಅವಲೋಕಿಸುತ್ತಲೇ ಕನ್ನಡ ಭಾಷೆ ಕಲಿಯಲು ಇವರ ಒಲವು ನನ್ನ ಮನತುಂಬಿತು. ಅವರಿಗೆ ಕೆಲವು ಅಕ್ಷರಗಳು ತಿಳಿಯದಿರಬಹುದೆಂದು ಯೋಚಿಸಿ ಅವರಿಗೆ ಗಜೇಂದ್ರಗಡ ಬಸ್ ನಿಲ್ದಾಣದ ಪುಸ್ತಕ ಮಳಿಗೆಯಲ್ಲಿ ಕನ್ನಡ ಅಂಕಲಿಪಿಯನ್ನು ಹೆಚ್ಚಿನ ಮಾಹಿತಿಗಾಗಿ ಬಳಸಿಕೊಳ್ಳಲೆಂದು ನಾನೇ ಖರೀದಿಸಿ ಕೊಡುವೆನೆಂದೆನು. ಆ ಮಾತಿಗೆ ಪ್ರತಿಯಾಗಿ ಪುನಃ ಫೈಲಿನಲ್ಲಿ 'ಕನ್ನಡ ಅಂಕಲಿಪಿ' ಎಂಬುದನ್ನು ಬರೆದುಕೊಂಡರು. ಅವರ ಕಲಿಕೆಯ ದಾಹಕ್ಕೆ ಹಾಗೂ ಅಭಿಮಾನಕ್ಕೆ ಮಾತ್ರವಲ್ಲ, ಓರ್ವ ಭಾಷಾ ಬೋಧಕನಾಗಿರುವ ನನಗೆ ವೃತ್ತಿಯ ಸಾರ್ಥಕದ ಅನುಭವ ತಂದಿತು. ಅಂದಹಾಗೆ ಆ ಸಹ ಪ್ರಯಾಣಿಕನು ಮಹಾರಾಷ್ಟ್ರದ ಲಾತೂರ್ ನಿವಾಸಿ.

*ಬರದೂರ (ಮುಂಡರಗಿ)* **ಎಮ್. ಎಮ್. ಹೆಬ್ಬಾಳ**

## ದಿಕ್ಕು ತೋರಿದವರು



*ಆರೇಳು ವರ್ಷದ ಹಿಂದಿನ ಮಾತು. ನಾನು ಅಂತಿಮ ವರ್ಷದ ಪರೀಕ್ಷೆಯನ್ನು ಮುಗಿಸಿ ಮುಂದೆ ಓದುವುದೆ ? ಕೆಲಸಕ್ಕೆ ಸೇರುವುದೆ ? ಎನ್ನುವ ತ್ರಿಶಂಕು ಸ್ಥಿತಿಯಲ್ಲಿದ್ದೆ. ನಮಗೆಲ್ಲಾ ಕೆಲಸ ಸಿಗುವುದೇ ಎಂಬ ದೊಡ್ಡ ಚಿಂತೆ ಬಾಧಿಸುತ್ತಿತ್ತು. ಈ ಶೂನ್ಯಚಿತ್ತದಿಂದಲೇ ಪರಿಷತ್ತಿಗೊಂದು ಪ್ರದಕ್ಷಿಣೆ ಹಾಕಿಕೊಂಡು ಬರೋಣವೆಂದು ನನ್ನ YAMAHA ಬೈಕ್ ಹತ್ತಿ ಹೊರಟೆ.*

*ನಾನು ಗಾಡಿ ನಿಲ್ಲಿಸುತ್ತಿದ್ದಂತೆಯೆ ವಾಚ್‌ಮನ್ ಓಡಿಬಂದು 'ಮೇಷ್ಟ್ರು ಕರೀತಿದಾರೆ' ಎಂದು ಹೇಳಿದ. ನನ್ನನ್ನ ತಾನೆ ಎಂದು ಖಚಿತಪಡಿಸಿಕೊಂಡೆ. ಅದಕ್ಕೆ ಅವನು 'ಹೌದು, ಬೇಗ ನಡೆಯಿರಿ' ಎಂದು ಹೇಳಿ ಹೊರಟೇ ಹೋದ. ಇದೇನಪ್ಪ ಬೆಳಬೆಳಗ್ಗೇನೆ ನಂಜುಂಡರಾಯರ ದರ್ಶನ. ಏನೇನು ಕಾದಿದೆಯೊ ಎಂದು ಆಲೋಚಿಸುತ್ತಾ ಮೇಷ್ಟ್ರ ಮುಂದೆ ನಿಂತಿದ್ದೆ.*

*ಎಲ್ಲೊ ಹೊರಟು ನಿಂತಿದ್ದ ನಂಜುಂಡರಾಯರು 'ನೋಟೀಸ್ ಬೋರ್ಡ್ ನೋಡಿದೆಯಾ ?' ಎಂದರು. ನನಗೇಗೆ ಈ ಪ್ರಶ್ನೆ ಕೇಳುತ್ತಿದ್ದಾರೆ ಎನ್ನುವಷ್ಟರಲ್ಲೇ 'ಯಾವುದೊ Software ಕಂಪನಿ ಕೆಲಸಕ್ಕೆ ಕರೆದಿದ್ದಾರೆ. ಅಪ್ಲೈ ಮಾಡು' ಎಂದು ಹೇಳಿ ಕಾದುನಿಂತಿದ್ದ ಕಾರುಹತ್ತಿ ಹೊರಟೇಬಿಟ್ಟರು. ಹೀಗೆ ಒಂದೆರಡು ವಾರಗಳು ಉರುಳಿತು. ಪರಿಷತ್ತಿನ ಕ್ಯಾಂಟೀನ್‌ನಲ್ಲಿ ಕಾಫಿ ಹೀರುತ್ತಾ, ಹರಟೆ ಹೊಡೆಯುತ್ತಾ ಕುಳಿತಿದ್ದೆ. ನಂಜುಂಡರಾವ್ ಅವರ ದೂತ ಪ್ರತ್ಯಕ್ಷನಾದ. ನಾನು ಮತ್ತೆ ನಂಜುಂಡರಾಯರ ಮುಂದೆ ನಿಂತಿದ್ದೆ. 'ಅವತ್ತು ಹೇಳಿದೆನಲ್ಲ, ಆ ಕಂಪನಿಗೆ ಅಪ್ಲೈ ಮಾಡಿದೆಯಾ, Interview ಬಂತಾ ?' ಎಂದು ಕೇಳಿದರು. 'ಹೂ ಮೇಷ್ಟ್ರೆ Interview ಗೆ ಹೋಗಿದ್ದೆ, ಚೆನ್ನಾಗಿ ಮಾಡಿದ್ದೇನೆ' ಎಂದೆ. 'ಗುಡ್ ಗುಡ್, ಕೆಲಸ ಸಿಕ್ಕಿದರೆ ಬಂದೇಳು. ಆಗಾಗ ನೋಟೀಸ್ ಬೋರ್ಡ್ ನೋಡ್ತಾಯಿರು' ಎಂದು ಹೇಳಿ ಬೇರೆಡೆಗೆ ನಡೆದರು.*

*ಹೀಗೆ ಮಾಜಿ ವಿದ್ಯಾರ್ಥಿಗಳ, ಹಾಲಿ ವಿದ್ಯಾರ್ಥಿಗಳ ಯೋಗಕ್ಷೇಮದ ಬಗ್ಗೆ ಸದಾ ಕಾಳಜಿ ವಹಿಸುತ್ತಿದ್ದರು. ಅವರ ಮಾರ್ಗದರ್ಶನದಿಂದ ನನಗೆ ಡೆಲ್-ಡಾಟ್‌ನಲ್ಲಿ ಕೆಲಸ ಸಿಕ್ಕಿತು. ನಮ್ಮ ಪ್ರೀತಿಯ ಮೇಷ್ಟ್ರಿಗೆ ನಮೋ ನಮಃ ಎನ್ನುತ್ತೇನೆ.*

**– ಎಸ್. ಖುತ, ಹಿರಿಯ ವಿದ್ಯಾರ್ಥಿ**

*೩ನೇ ಪುಟದಿಂದ.... (ಈ ತಿಂಗಳು)*

ವಾಜಪೇಯಿಗಲ್ಲದಿದ್ದರೆ ಅಧ್ವಾನಿಯವರಿಗಾದರೂ ಇದರ ನೆನಪಿರಬೇಕಾಗಿತ್ತು. ಇರಾಕಿನಲ್ಲಿ ಯುವಕರು ತಮ್ಮ ದೇಶದ ಸ್ವಾತಂತ್ರ್ಯಕ್ಕಾಗಿ, ಸಂಪತ್ತಿನ ರಕ್ಷಣೆಗಾಗಿ ಮತ್ತು ಸಾರ್ವಭೌಮತ್ವಕ್ಕಾಗಿ ಇಂದು ಸೆಣಸಾಡುತ್ತಿದ್ದಾರೆ. ದುರಾಕ್ರಮಣ ನಡೆಸಿರುವ ಅಮೆರಿಕಾ - ಬ್ರಿಟನ್‌ಗಳು ವಸಾಹತುಶಾಹಿಯ ದರ್ಪದಿಂದ ಇರಾಕಿನ ಜನರನ್ನು ಚಚ್ಚಿಹಾಕುತ್ತಿವೆ. ಅವರು ಯಾರನ್ನು ಬೇಕಾದರೂ ದಸ್ತಗಿರಿ ಮಾಡಬಹುದು, ಕಾರಾಗೃಹಕ್ಕೆ ತಳ್ಳಬಹುದು, ಯಾತನೆಗೆ ಗುರಿಮಾಡಬಹುದು, ಭಯೋತ್ಪಾದಕರೆಂಬ ಹಣೆಪಟ್ಟಿ ಹಚ್ಚಬಹುದು ಮತ್ತು ಲಾಡೆನ್ ಬೆಂಬಲಿಗರೆಂದು ಘೋಷಿಸಬಹುದು. ಭಾರತದ ದೃಷ್ಟಿಯಲ್ಲಿ ಇದೆಲ್ಲಾ ಅಂಗೀಕಾರಾರ್ಹವಲ್ಲ. ಬುಷ್ - ಬ್ಲೇರ್ ಏನೇ ಹೇಳಿಕೊಳ್ಳಲಿ, ನಿಜವಾಗಿಯೂ ಅವರು ಆಕ್ರಮಣಕಾರರು, ನರಹಂತಕರು, ಇರಾಕಿನ ಸ್ವಾತಂತ್ರ್ಯಹರಣ ಮಾಡಿರುವವರು. ಅಂತಹ ಕ್ಷುದ್ರ ಪಾತಕಿಗಳ ಆಕ್ರಮಣವನ್ನು ಮಾನ್ಯ ಮಾಡಿ ಇರಾಕಿನ ನಾಗರಿಕರನ್ನು ಸದೆ ಬಡಿಯಲು ಭಾರತವು ತನ್ನ ಸೈನ್ಯವನ್ನು ಕಳಿಸುವುದು ನಮ್ಮ ದೇಶದ ಸ್ವಾತಂತ್ರ್ಯೋತ್ತರ ಚರಿತ್ರೆಯಲ್ಲಿ ಅತಿ ಅಮಾನುಷವಾದ ಮತ್ತು ನೀಚತನದ ಕೆಲಸವಾಗುತ್ತದೆ. ನಮ್ಮ ಸೈನ್ಯ ಇರಾಕಿನ ನಾಗರಿಕ ಹೋರಾಟಗಾರರನ್ನು ಕೊಲ್ಲುವುದು ಅಥವಾ ಅವರಿಂದ ಕೊಲ್ಲಿಸಿಕೊಳ್ಳುವುದು ಯಾವ ಪುರುಷಾರ್ಥಕ್ಕೆ ? ಅಮೆರಿಕಾದ ಮುಂದೆ ಜೊಲ್ಲು ಸುರಿಸಿಕೊಂಡು ನಿಂತು ದಯಾಭಿಕ್ಷೆಗಾಗಿ ಹಲ್ಲು ಗಿಂಜುವುದಕ್ಕೆ !! ಇದರಿಂದ ನಮ್ಮ ದೇಶದ ಜನರು ರೊಚ್ಚಿಗೇಳದಿದ್ದರೆ, ನಾಳೆ ನಮ್ಮ ದೇಶದ ಮೇಲೆ ಆಕ್ರಮಣ ನಡೆದಾಗ ಅವರು ಎಚ್ಚೆತ್ತುಕೊಂಡು ಹೋರಾಟ ಮಾಡುತ್ತಾರೆಯೆ ? ಬ್ರಿಟಿಷರ ಜೈಲಿನಿಂದ ಹೊರಬರಲು ಅಕ್ಷಮ್ಯವಾದ ಮುಚ್ಚಳಿಕೆಗಳನ್ನು ಬರೆದುಕೊಡುವವರಿಗೆ ಸ್ವಾತಂತ್ರ್ಯ ಹೋರಾಟದ ಪರಂಪರೆಯ ಪರಿಜ್ಞಾನವಿಲ್ಲ, ಹೋಗಲಿ; ಆದರೆ ದೇಶದ ಸಾರ್ವಜನಿಕರಿಗೆ ರಾಷ್ಟ್ರೀಯ ಸ್ವಾತಂತ್ರ್ಯವೆಂಬುದರ ಔನ್ನತ್ಯದ ಕಲ್ಪನೆ ಇರುವುದಿಲ್ಲವೆ ?

ಇರಾಕಿನಲ್ಲಿ ಜನ ಅಮೆರಿಕಾ ವಿಧಿಸುವ ಶಾಸನವನ್ನು ಉಲ್ಲಂಘಿಸುತ್ತಿದ್ದಾರೆ, ಅದನ್ನು ಹತ್ತಿಕ್ಕಬೇಕು, ಎಂಬುದು ಅಮೆರಿಕಾ - ಬ್ರಿಟನ್ನುಗಳ ಆಕಾಂಕ್ಷೆ. ಭಾರತದ ಜನ ಕೇಳಬೇಕಾದ ಪ್ರಶ್ನೆ ಇದು : ಇರಾಕಿಗಳು ಅಮೆರಿಕಾ ವಿಧಿಸುವ ಕಾನೂನನ್ನು ಏಕೆ ಅಂಗೀಕರಿಸಬೇಕು ? ಕಾನೂನು ಭಂಗ ಮಾಡಿದರೆ ತಪ್ಪೇನು ? ಅವರ ಕೈಲಾದ ರೀತಿಯಲ್ಲಿ ಅಮೆರಿಕಾದ ಆಕ್ರಮಣಕಾರರನ್ನು ಒದ್ದೋಡಿಸಲು ಇರಾಕಿನ ಯುವಕರು ಅವರನ್ನು ಸಿಕ್ಕಲ್ಲಿ ನಿಗ್ರಹಿಸುತ್ತಾರೆ. ನಮ್ಮ ಖುದೀರಾಮ್, ಛಾಪೇಕರ್ ಸೋದರರು, ಮದನಲಾಲ್ ಢಿಂಗ್ರಾ, ಭಗತ್ ಸಿಂಗ್, ಚಂದ್ರಶೇಖರ ಆಜಾದ್, ಮೊದಲಾದವರು ಮಾಡಿದ್ದೂ ಇದನ್ನೇ. ಹೀಗಿರುವಾಗ ನಮ್ಮ ಸೈನ್ಯ ಇರಾಕಿಗೆ ಹೋಗಿ ಅಮೆರಿಕಾದ ಪರವಾಗಿ ಇರಾಕಿಗಳಿಂದ ಏಟು ತಿನ್ನಬೇಕೆ ಮತ್ತು ಅವರನ್ನು ಕೊಲ್ಲಬೇಕೆ ? ಈ ಹಿನ್ನೆಲೆಯಲ್ಲಿ ಲೋಕಸಭೆಯ ತೀರ್ಮಾನ ಮುಂತಾದುವು ತೀರಾ ಗೌಣ. ಕರುಣಾನಿಧಿ - ಚಂದ್ರಬಾಬು ನಾಯ್ಡು ಅಂತಹ ಬೇಜವಾಬ್ದಾರಿ ಸ್ವಾರ್ಥ ರಾಜಕಾರಣಿಗಳ ಆಸರೆಯಲ್ಲಿ ವಾಜಪೇಯಿ ಯಾವ ನಿರ್ಣಯವನ್ನು ಬೇಕಾದರೂ ಲೋಕಸಭೆಯಲ್ಲಿ ಅಂಗೀಕಾರ ಮಾಡಿಸಿಕೊಳ್ಳಬಹುದು. ಅದು ಬೇರೆ ವಿಷಯ. ಆದರೆ ಮುಖ್ಯ ಪ್ರಶ್ನೆ ಇದು : ಭಾರತವು ಅಮೆರಿಕಾ ಆಕ್ರಮಣದ ಪರವಾಗಿ ಕೈಂಕರ್ಯ ವಹಿಸಿ ಇರಾಕಿನ ಸ್ವಾತಂತ್ರ್ಯ ಹೋರಾಟಗಾರರನ್ನು ಬಲಿ ತೆಗೆದುಕೊಳ್ಳಬೇಕೆ ?

ಅಮೆರಿಕಾದ ಕೇಂದ್ರ ಪೊಲೀಸ್ ಪಡೆಗೆ ದೆಹಲಿಯಲ್ಲಿ ಕಚೇರಿ ತೆಗೆಯಲು ಅವಕಾಶ ಮಾಡಿಕೊಟ್ಟ ಅಧ್ವಾನಿ ಅಮೆರಿಕಾದ ಗೂಢಚಾರ ಸಂಸ್ಥೆಯೊಡನೆ ಏನೇನು ಚರ್ಚೆ ನಡೆಸಿ ಎಂತೆಂತಹ ವಾಗ್ದಾನ ಮಾಡಿದ್ದಾರೋ ಯಾರಿಗೆ ಗೊತ್ತು! ನಾಳೆ ನಮ್ಮ ದೇಶದಲ್ಲಿ ಮಿಲಿಟರಿ ನೆಲೆಗಳನ್ನು ಅಮೆರಿಕಾಕ್ಕೆ ತೆರವು ಮಾಡಿಕೊಟ್ಟರೆ ಅದಕ್ಕಿಂತಲೂ ದೊಡ್ಡ ಆಘಾತ ಇನ್ನೊಂದಿರಲಾರದು. ಜಪಾನಿನ ಓಕಿನಾವಾ ಪ್ರಾಂತ್ಯದ ಜನರ ಅನುಭವ ಜಗತ್ತಿಗೆ ತಿಳಿದಿದೆ. ಅಧ್ವಾನಿ - ಫರ್ನಾಂಡಿಸ್‌ಗೆ ಅದು ತಿಳಿಯದಿಲ್ಲ. ವಾಜಪೇಯಿ ಸರ್ಕಾರದ ಸಾಧನೆಗಳು ಇಂತಹವು: ಅಮೆರಿಕಾದ ದಾಸನಾಗಿರುವುದು, ಸಾರ್ವಜನಿಕ ಉದ್ಯಮಗಳನ್ನು ಸಾಯಿಸಿ ಖಾಸಗಿಯವರಿಗೆ ಹಂಚುವುದು, ಇತ್ಯಾದಿ.

ಗುಜರಾತಿನಿಂದ ಬರುತ್ತಿರುವ ವರದಿಗಳನ್ನು ಗಮನಿಸಿದರೆ ನಮ್ಮ ವಾಜಪೇಯಿ ಬಣದವರು ತುರ್ತು ಪರಿಸ್ಥಿತಿಯ ವಿರುದ್ಧ ಸೆಣಸಿದ ವೀರರೇ, ಎಂಬ ಅನುಮಾನ ಮೂಡುತ್ತದೆ. ಗುಜರಾತಿನ ನರಮೇಧದಲ್ಲಿ ಪಾಲ್ಗೊಂಡಿದ್ದವರ ವಿರುದ್ಧ ನೀಡಲಾಗಿದ್ದ ಆರೋಪ ಪಟ್ಟಿಗಳನ್ನು ಆರೋಪ ಮಾಡಿದ್ದವರೇ ಹಿಂತೆಗೆದುಕೊಳ್ಳುತ್ತಿದ್ದಾರೆ! ತನಿಖೆಗಳಲ್ಲಿ ಸಾಕ್ಷ್ಯ ಹೇಳುತ್ತಿದ್ದವರು ಹಿಂದೇಟು ಹಾಕುತ್ತಿದ್ದಾರೆ. ನ್ಯಾಯಮೂರ್ತಿ ನಾನಾವಟಿ ಆಯೋಗದ ಮುಂದೆ ಹಾಜರಾಗಲು ಆಪಾದನೆಗಳನ್ನು ಮಾಡಿದ್ದವರು ನಿರಾಕರಿಸುತ್ತಿದ್ದಾರೆ. ತನಿಖೆ ಮುಗಿಯುವ ಮೊದಲೇ ನಾನಾವಟಿ ಹೇಳಿಬಿಟ್ಟಿದ್ದಾರೆ : ಗುಜರಾತ್ ಸರ್ಕಾರ ನಿರಪರಾಧಿ, ಎಂದು. ಸಾಕ್ಷ್ಯ ನೀಡುವವರಿಗೆ ರಕ್ಷಣೆ ಒದಗಿಸಲಾಗುವುದೆಂದು ಹೇಳುವ ಪೊಲೀಸ್ ಅಧಿಕಾರಿಗಳು ಆಪಾದನೆ ಹೊರಿಸಿದ್ದವರಿಗೆ ಹಿಂಸೆ ನೀಡುತ್ತಿದ್ದಾರೆ. ಆರೋಪ ಹಿಂತೆಗೆದುಕೊಳ್ಳದಿದ್ದರೆ ನೀವು ನಮ್ಮೂರೊಳಗೆ ಬರಬೇಡಿ, ಎಂಬ ವಾತಾವರಣ ನಿರ್ಮಾಣವಾಗುತ್ತಿದೆ. ಇದನ್ನೆಲ್ಲಾ ಮಾಡಿಸುವ ನರೇಂದ್ರ ಮೋದಿಗೆ ದೆಹಲಿ ಪ್ರಭುಗಳ ಆಶೀರ್ವಾದವಿದೆ. ತುರ್ತು ಪರಿಸ್ಥಿತಿಯ ಕರಾಳತೆಯನ್ನು ಮೀರಿಸುವ ಫ್ಯಾಸಿಸ್ಟ್ ದುರಾಚರಣೆ ಇದು. ಇದರ ಅಧ್ವರ್ಯುಗಳು ಅಮೆರಿಕಾ ಜೊತೆ ಸೇರಿಕೊಳ್ಳುವುದರಲ್ಲಿ ಆಶ್ಚರ್ಯವೆಲ್ಲಿಯದು! ನಮ್ಮ ದೇಶದ ಜನ ಇಂದು ಜಾಗ್ರತರಾಗದಿದ್ದರೆ ನಮ್ಮ ನಾಳೆಗಳು ರಕ್ತಮಯ ವಾಗುತ್ತವೆ, ಕತ್ತಲಿನಿಂದ ಆವೃತವಾಗಿರುತ್ತವೆ. ಹಾಗಾಗದಿರಲು ನಾವಿಂದೇ ಪಣತೊಟ್ಟು ಮುಂದಡಿ ಇರಿಸಬೇಕು.

ನಮ್ಮ ಕೇಂದ್ರ ಸರ್ಕಾರ ತನ್ನದೇ ರೀತಿಯಲ್ಲಿ ಕಾಶ್ಮೀರ ಸಮಸ್ಯೆ ಬಗೆಹರಿಸಲು 'ಮುಂದಡಿ' ಇರಿಸುತ್ತಿದೆ. ಅದರಿಂದ ಮುಗ್ಗರಿಸಿ ಬೀಳುವುದು ಅನಿವಾರ್ಯ. ಕಾಶ್ಮೀರದ ಪ್ರಶ್ನೆ ಇತ್ಯರ್ಥವಾಗುವುದು ಆ ರಾಜ್ಯದ ಜನರ ಜೊತೆ ಸಂವಾದ ಬೆಳೆಸುವುದರಿಂದ ಮತ್ತು ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರಿಂದ. ಆದರೆ ವಾಜಪೇಯಿ - ಅಧ್ವಾನಿ ಲೆಕ್ಕಾಚಾರ ಬೇರೆಯೇ ಇದೆ. ಅಮೆರಿಕಾವನ್ನು ಬಲವಾಗಿ ತಬ್ಬಿ ಹಿಡಿದರೆ ನಮ್ಮ ಆಕಾಂಕ್ಷೆ ಫಲಿಸುತ್ತದೆಂದು ಅವರ ಗ್ರಹಿಕೆ. ಆದ್ದರಿಂದಲೇ ನಮ್ಮ ದೇಶದ ಎಲ್ಲ ವಿದೇಶಾಂಗ ವ್ಯವಹಾರಗಳೂ ಅಮೆರಿಕಾ ಪರವಾಗುತ್ತಿವೆ. ''ವ್ರತವೂ ಇಲ್ಲ ಸುಖವೂ ಇಲ್ಲ'' ಎಂಬ ಮಾತೊಂದಿದೆ. ನಮ್ಮ ದೇಶ ಅಂತಹ ಹೀನಾಯ ಸ್ಥಿತಿಗೆ ತಳ್ಳಲ್ಪಡುತ್ತಿದೆಯೇನೋ ಎಂಬ ಭಾವನೆ ಮೂಡುತ್ತಿದೆ. ಪಾಕಿಸ್ತಾನವನ್ನೆದುರಿಸಲು ನಮಗೆ ಅಮೆರಿಕಾ ಒಬ್ಬ ಶಿಖಂಡಿ ಎಂಬ ಭಾವನೆ ಪೂರ್ತಿಯಾಗಿ ಮೂರ್ಖತನದ ಸೂಚನೆ. ಕಳೆದ ಐವತ್ತು ವರ್ಷಗಳಲ್ಲಿ ಅಮೆರಿಕಾದಿಂದ ಈ ರೀತಿ ಸಹಾಯ ಪಡೆದು ಉದ್ಧಾರವಾಗಿರುವ ಯಾವ ದೇಶವೂ ಇಲ್ಲ. ಪಾಕಿಸ್ತಾನದ ಕೈ ಕಟ್ಟಲು ಅಮೆರಿಕಾ ಹಗ್ಗ ಹುಡುಕುತ್ತಿದೆಯೆಂಬ ಭ್ರಮೆ ಬೇಡ. ಅಷ್ಟೇ ಅವಾಸ್ತವಿಕವಾದ ಭಾವನೆ ಕಾಶ್ಮೀರದ ಇಂದಿನ ವಾತಾವರಣವು ಪಾಕಿಸ್ತಾನದ ಹಸ್ತಕ್ಷೇಪವಿಲ್ಲದಿದ್ದರೆ ಎಲ್ಲಾ ಶುಭ್ರವಾಗಿರುತ್ತದೆ, ಎಂಬುದು. ಆದ್ದರಿಂದ ನಮ್ಮೆಲ್ಲ ಚಿಂತನೆಯೂ ಕಾಶ್ಮೀರ-ಕೇಂದ್ರಿತವಾಗಬೇಕಾಗಿಲ್ಲ, ಅಮೆರಿಕಾದ ಸಹಾಯಹಸ್ತ ನಿರೀಕ್ಷಿಸುವಂಥದಾಗ ಬೇಕಾಗಿಲ್ಲ. ಕಾಶ್ಮೀರದಲ್ಲಿ ನಮ್ಮದೇ ಜನರೊಡನೆ ವ್ಯವಹರಿಸಲು ಅನ್ಯದೇಶದ ಕುಶಾಗ್ರಮತಿಯ ನೆರವು ಬೇಡಬೇಕೆ ? ಅವನು ನಮ್ಮನ್ನೇ ಕಬಳಿಸಿಬಿಡುತ್ತಾನೆಂಬ ಎಚ್ಚರಿಕೆ ಅಗತ್ಯ.

---

## (ಪ್ರ) ದಕ್ಷಿಣೆ



ದೇವರೇ
ನನ್ನಿಂದ ಕೊಡಲು
ಸಾಧ್ಯವಾಗದು
ದಕ್ಷಿಣೆ,
ಧಾರಾಳವಾಗಿ
ಹಾಕುತ್ತೇನೆ
ಮೂರು ಪ್ರದಕ್ಷಿಣೆ.

**ಆಶಾ ಹೆಗಡೆ**
'ಸಿಂಧೂರ ನಿಲಯ', ಲಿಂಗದಕೋಣ, ನೀಲೆಕಣಿ
ಶಿರಸಿ - ೫೮೧ ೪೦೩, ಉ. ಕ.

ಸಾವರಕರರು ಜೂನ್ ೧೯೧೧ರಲ್ಲಿ ಅಂಡಮಾನ್ ದ್ವೀಪಕ್ಕೆ ಬಂದರು. ಒಂದು ವರ್ಷ ತುಂಬುವುದರ ಒಳಗಾಗಿ ತಮಗೆ ಕ್ಷಮಾದಾನ ಮಾಡಬೇಕೆಂದು ಭಾರತ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿದರು. ಆ ಮನವಿಯ ಮೂಲಪಾಠ ಲಭ್ಯವಿಲ್ಲ. ಆದರೆ ೧೯೧೩ನೆ ಇಸ್ವಿ ನವೆಂಬರ್ ೧೪ರಂದು ಅರ್ಪಿಸಿದ ಇನ್ನೊಂದು ಮನವಿಯಲ್ಲಿ ೧೯೧೧ರ ಮನವಿಯನ್ನು ಪ್ರಸ್ತಾವಿಸಿದ್ದಾರೆ. ಆ ಮನವಿಯ ಬಹುಭಾಗ ಸೆರೆಮನೆಯಲ್ಲಿದ್ದ ಅನುಕೂಲತೆಗಳಿಗೆ ಸಂಬಂಧಿಸಿದೆ. ಇಂಡಿಯಾ ದೇಶದ ಜೈಲಿಗೆ ತನ್ನನ್ನು ವರ್ಗಾಯಿಸುವಂತೆ ಕೋರಿದ್ದಾರೆ. ಯಾಕೆಂದರೆ ಅಲ್ಲಿಯ ಜೈಲುಗಳಲ್ಲಿ, ಒಂದನೆಯದಾಗಿ ; ಸಜೆ ಅವಧಿಯಲ್ಲಿ ರಿಯಾಯಿತಿ ಸಿಕ್ಕುತ್ತದೆ, ಎರಡನೆಯದಾಗಿ ; ತಮ್ಮವರು ಬಂದು ತಮ್ಮನ್ನು ಸಂದರ್ಶಿಸಬಹುದು.

ಆ ಕ್ಷಮಾ ಯಾಚನಾ ಪತ್ರದ ಕೊನೆಯ ಪ್ಯಾರಾ ಬಹು ಬಿಚ್ಚು ಮಾತುಗಳಲ್ಲಿದೆ. ಅದರ ಪೂರ್ಣ ಪಾಠ ಹೀಗಿದೆ :

''ಕೊನೆಯದಾಗಿ, ೧೯೧೧ರಲ್ಲಿ ನಾನು ಕಳಿಸಿದ್ದ ಕ್ಷಮಾ ಯಾಚನಾ ಮನವಿ ಪತ್ರವನ್ನು ತಾವು ಪರಾಂಬರಿಸೋಣವಾಗಬೇಕೆಂದೂ ಇಂಡಿಯಾ ಸರ್ಕಾರಕ್ಕೆ ಅದನ್ನು ಮಂಜೂರಾತಿಗಾಗಿ ಕಳಿಸಿಕೊಡಬೇಕೆಂದೂ ಘನತೆವೆತ್ತ ತಮಗೆ ನೆನಪು ಮಾಡಬಹುದೇ ? ಭಾರತದ ರಾಜಕೀಯದಲ್ಲಿ ಇತ್ತೀಚೆಗೆ ಆದ ಬೆಳವಣಿಗೆಯೂ ಸರ್ಕಾರದ ಮೃದು ಸಮಾಧಾನ ಧೋರಣೆಯೂ ಮತ್ತೊಮ್ಮೆ ಸಂವಿಧಾನಾತ್ಮಕ ಬಾಗಿಲನ್ನು ತೆರೆದಿದೆ. ನಮ್ಮನ್ನು ಶಾಂತಿ ಮತ್ತು ಪ್ರಗತಿ ಪಥದಿಂದ ದಾರಿತಪ್ಪಿಸಿ ವಂಚಿಸಿದ್ದ ೧೯೦೬-೧೯೦೭ ರಲ್ಲಿದ್ದ ಉದ್ವಿಗ್ನಕಾರಕ ನಿರಾಶಾದಾಯಕ ಪರಿಸ್ಥಿತಿ ಈಗ ಇಲ್ಲ. ಭಾರತ ಮತ್ತು ಮಾನವರ ಕ್ಷೇಮವೇ ತಮ್ಮ ಹೃದಯದಲ್ಲಿರುವವರು ಯಾರೂ ಈ ಮುಳ್ಳು ದಾರಿಯನ್ನು ಕಣ್ಣು ಮುಚ್ಚಿಕೊಂಡು ತುಳಿಯಲಾರರು. ಆದ್ದರಿಂದ ಸರ್ಕಾರ ತಮ್ಮ ಬಹುಮುಖೀ ಔದಾರ್ಯದಿಂದ ನನ್ನನ್ನು ಬಿಡುಗಡೆ ಮಾಡಿದ ಪಕ್ಷದಲ್ಲಿ ನಾನು ನನ್ನ ಮಟ್ಟಿಗೆ ಸಂವಿಧಾನಾತ್ಮಕ ಪ್ರಗತಿಯ ಕಡುನಿಷ್ಠೆಯ ಪ್ರತಿಪಾದಕನೂ ಇಂಗ್ಲಿಷ್ ಸರ್ಕಾರಕ್ಕೆ ವಿಧೇಯನೂ, ನಿಷ್ಠನೂ ಆಗಿರುತ್ತೇನಲ್ಲದೆ ಬೇರೆಯಿಲ್ಲ. ಆ ಪ್ರಗತಿಗೆ ಅದೇ ಅತ್ಯಂತ ಮುಖ್ಯವಾದ ಪರಿಸ್ಥಿತಿ. ನಾವು ಜೈಲಿನಲ್ಲಿ ಇರುವವರೆಗೆ ಭಾರತದಲ್ಲಿರುವ ಚಕ್ರವರ್ತಿಗಳ ನೂರಾರು ಸಹಸ್ರಾರು ಘನವೆತ್ತ ಪ್ರಜೆಗಳಲ್ಲಿ ನಿಜವಾದ ಸುಖ ಸಂತೋಷ ಭಾರತದಲ್ಲಿ ಇರಲಾರದು. ಯಾಕೆಂದರೆ ರಕ್ತ ಸಂಬಂಧ ಎಲ್ಲಕ್ಕಿಂತ ಅಧಿಕ ನಂಟು. ನಮ್ಮನ್ನು ಬಿಡುಗಡೆ ಮಾಡಿದ್ದೆ ಆದರೆ ಜನರು ಸಂತೋಷದಿಂದ ಹರ್ಷೋದ್ಗಾರ ಮಾಡಿ ಸರ್ಕಾರಕ್ಕೆ ಕೃತಜ್ಞರಾಗುತ್ತಾರೆ. ಭರ್ತ್ಸನೆ ಮಾಡಿ ಸೇಡು ತೀರಿಸಿಕೊಳ್ಳುವುದಕ್ಕಿಂತ ಕ್ಷಮಿಸಿ, ಬುದ್ಧಿ ಕಲಿಸುವುದು ಉತ್ತಮವಾಗಿರಬಹುದು. ಮೇಲಾಗಿ ನನ್ನನ್ನು ತಮ್ಮ ಮಾರ್ಗದರ್ಶಿಯೆಂದು ನಿರೀಕ್ಷಿಸಿದ ಭಾರತ ಮತ್ತು ವಿದೇಶದಲ್ಲಿರುವ ದಾರಿತಪ್ಪಿದವರನ್ನೆಲ್ಲ ಸಂವಿಧಾನಾತ್ಮಕ ಮಾರ್ಗಕ್ಕೆ ತಿರುಗಿಸುವ ಪರಿವರ್ತನೆಯಾಗುತ್ತದೆ. ಬೇಕಾದ ಯಾವ ರೂಪದಿಂದಲಾದರೂ ಸರ್ಕಾರದ ಸೇವೆಗೈಯ್ಯಲು ನಾನು ಸಿದ್ಧನಿದ್ದೇನೆ. ಯಾಕೆಂದರೆ ನನ್ನ ಪರಿವರ್ತನೆ ಪ್ರಜ್ಞಾಪೂರ್ವಕವಾದದ್ದು. ಹಾಗೆಯೇ ನನ್ನ ಮುಂದಿನ ಭವಿಷ್ಯ ನಡತೆಯೂ ಪರಿವರ್ತನೆಯಾಗುತ್ತದೆ. ನನ್ನನ್ನು ಜೈಲಿನಲ್ಲಿಡುವುದರಿಂದ, ಬಿಡುವುದರಿಂದಾಗುವ ಯಾವ ಒಳಿತೂ ಆಗಲಾರದು. ಬಲಾಢ್ಯರಾದವರು ಮಾತ್ರ ದಯಾಮಯರಾಗಿರಲು ಸಾಧ್ಯ. ಆದ್ದರಿಂದ 'ಉಡಾಳ' ಆದ ಮಗ ಸರ್ಕಾರದ ಮಾತೃಮಂದಿರದ ಬಾಗಿಲಿಗಲ್ಲದೆ ಮತ್ತೆಲ್ಲಿಗೆ ಹೋದಾನು ? ಘನಾಢ್ಯರಾದ ತಾವು ಈ ಕೆಲವು ಅಭಿಪ್ರಾಯಗಳನ್ನು ಗಣನೆಗೆ ತೆಗೆದುಕೊಳ್ಳುವಿರೆಂದು ನಂಬುತ್ತೇನೆ......

(ಸಹಿ) ವಿ. ಡಿ. ಸಾವರಕರ

* * *

ಮುಂಬೈ ಸರ್ಕಾರದ ವಾರ್ತಾ ಇಲಾಖಾ ನಿರ್ದೇಶಕರ ಆದರಗಳೊಂದಿಗೆ
ಪಿ. ೨/೫-೧-೨೪

# ವಿ. ಡಿ. ಸಾವರಕರರ ಕ್ಷಮಾ ಯಾಚನಾ ಮನವಿ



ಮುಂಬಯಿ ಸರ್ಕಾರವು ವಿನಾಯಕ ದಾಮೋದರ ಸಾವರಕರರನ್ನು ಬಿಡುಗಡೆ ಮಾಡಲು ನಿರ್ಧರಿಸಿದೆ. ಸರ್ಕಾರದ ಈ ಕೆಳಗಿನ ನಿರ್ಣಯವನ್ನು ಗೃಹಖಾತೆಯು ಹೊರಡಿಸಿದೆ.

೧. ೧೮೯೮ ಕ್ರಿಮಿನಲ್ ಪ್ರೊಸೀಜರ್ ಕೋಡ್, ಸೆಕ್ಷನ್ ೪೦೧ರ ಕೆಳಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಆಡಳಿತ ಮಂಡಲಿಯ ಮುಖ್ಯಸ್ಥರಾದ ರಾಜ್ಯಪಾಲರು ದ್ವೀಪಾಂತರ ಶಿಕ್ಷೆಗೆ ಗುರಿಯಾಗಿರುವ ವಿನಾಯಕ ದಾಮೋದರ ಸಾವರಕರರ ಇನ್ನೂ ಉಳಿದಿರುವ ಸಜೆಯನ್ನು ಮನ್ನಾಮಾಡಲಾಗಿದೆ.

೨. ಈ ಆಜ್ಞೆಯಲ್ಲಿ ನಿರೂಪಿಸಿರುವ ಷರತ್ತುಗಳನ್ನು ಅಪರಾಧಿಯು ಒಪ್ಪಿಕೊಂಡು ಒಂದು ಮುಚ್ಚಳಿಕೆಯನ್ನು ಬರೆದುಕೊಟ್ಟು ಕಾರಾಗೃಹದ ಮಹಾಧಿಕಾರಿಯ ಮುಖಾಂತರ ಸರ್ಕಾರಕ್ಕೆ ರವಾನಿಸತಕ್ಕದ್ದು ಹಾಗೂ ಈ ಆಜ್ಞಾನುಸಾರ ಖೈದಿಯನ್ನು ಬಿಡುಗಡೆ ಮಾಡಿದ ವರದಿಯನ್ನು ಅದರೊಡನೆ ಕಳಿಸಿಕೊಡತಕ್ಕದ್ದು.

**ಬಿಡುಗಡೆ ಮಾಡುವ ಈ ಆಜ್ಞೆಗೆ ಲಗತ್ತಿಸಿರುವ ಷರತ್ತುಗಳು ಈ ಕೆಳಗಿನವು :**

೧. ಸದರಿ ವಿನಾಯಕ ದಾಮೋದರ ಸಾವರಕರರು ಗೌರ್ನರ್ ಆಡಳಿತೆಯ ವ್ಯಾಪ್ತಿಯಲ್ಲಿರುವ ಮುಂಬಯಿ ಆಧಿಪತ್ಯದ ಪ್ರದೇಶದಲ್ಲಿಯೆ ವಾಸಿಸತಕ್ಕದ್ದು. ಈ ಪ್ರದೇಶದಲ್ಲಿರುವ ರತ್ನಗಿರಿ ಜಿಲ್ಲೆಯ ಹದ್ದಿನೊಳಗಡೆಯೇ ಇರತಕ್ಕದ್ದು. ಸರ್ಕಾರದ ಅಪ್ಪಣೆಯಿಲ್ಲದೆ, ತುರ್ತು ಸಂದರ್ಭಗಳಲ್ಲಿ ಜಿಲ್ಲಾ ಮ್ಯಾಜಿಸ್ಟ್ರೇಟರ ಅಪ್ಪಣೆಯಿಲ್ಲದೆ ಆ ಜಿಲ್ಲೆಯ ಹದ್ದನ್ನು ದಾಟಿ ಹೋಗತಕ್ಕದ್ದಲ್ಲ.

೨. ಸರ್ಕಾರದ ಒಪ್ಪಿಗೆಯಿಲ್ಲದೆ, ಇನ್ನೈದು ವರ್ಷ ಅವರು ಸಾರ್ವಜನಿಕವಾಗಿ ಇಲ್ಲವೆ ಖಾಸಗಿಯಾಗಿ ಯಾವ ವಿಧವಾದ ರಾಜಕೀಯ ಚಟುವಟಿಕೆಯಲ್ಲೂ ತೊಡಗತಕ್ಕದ್ದಲ್ಲ. ಹಾಗೂ ಐದು ವರ್ಷದ ಅವಧಿ ಮುಗಿದ ನಂತರವೂ ಮೇಲಿನ ನಿರ್ಬಂಧಗಳನ್ನು ಸರ್ಕಾರವು ಮುಂದುವರಿಸುವ ಅಧಿಕಾರ ಹೊಂದಿರುತ್ತದೆ.

ಮಿ. ಸಾವರಕರರು ಮೇಲಿನ ಷರತ್ತುಗಳನ್ನು ಒಪ್ಪಿಕೊಳ್ಳುವ ಇಂಗಿತವನ್ನು ಆಗಲೆ ವ್ಯಕ್ತಪಡಿಸಿದ್ದಾರೆ. ಈ ಕೆಳಗಿನ ದೃಢೀಕರಣವು ಅವರ ಬಿಡುಗಡೆಯ ಷರತ್ತು ಅಲ್ಲವೆಂದು ಅವರಿಗೆ ವಿವರಿಸಿದರೂ ಅವರು ಈ ಕೆಳಗಿನ ದೃಢೀಕರಣ ಬರೆದುಕೊಟ್ಟಿದ್ದಾರೆ :

''ನನ್ನ ವಿಚಾರಣೆಯು ನಿಷ್ಪಕ್ಷಪಾತವಾಗಿತ್ತೆಂದೂ ಶಿಕ್ಷೆಯು ನ್ಯಾಯ ಸಮ್ಮತವಾಗಿತ್ತೆಂದೂ ಒಪ್ಪಿಕೊಳ್ಳುತ್ತೇನೆ. ಕಳೆದ ದಿನಮಾನಗಳಲ್ಲಿ ನಾನು ನಿರತನಾಗಿದ್ದ ಹಿಂಸಾತ್ಮಕ ಮಾರ್ಗಗಳನ್ನು ನಾನು ಹೃತ್ಪೂರ್ವಕವಾಗಿ ಖಂಡಿಸುತ್ತೇನೆ. ಶಾಸನ ಮತ್ತು ಸಂವಿಧಾನವನ್ನು ಎತ್ತಿ ಹಿಡಿಯಲು ನಾನು ಬದ್ಧನಾಗಿದ್ದೇನೆ. ಹಾಗೂ ಇನ್ನು ಮುಂದೆ ನನಗೆ ಕೊಡಬಹುದಾದ ಅವಕಾಶದ ಪರಿಮಿತಿಯಲ್ಲಿ ಸುಧಾರಣೆಗಳನ್ನು ಯಶಸ್ವಿಗೊಳಿಸಲು ನಾನು ಸಮ್ಮತಿಸುತ್ತೇನೆ.''

ಯಥಾ ನಕಲು.

ಗೆ : ಯರವಾಡ ಕಾರಾಗೃಹ ಸೂಪರಿಂಟೆಂಡೆಂಟ್

* * *

ಶಿರಗಾಂವ
೯ನೇ ಮೇ ೧೯೨೫
ಗೆ.
ಡಿ. ಓ, ಫ್ಲಿನ್ Esq.
ಹಂಗಾಮಿ ಡೆಪ್ಯೂಟಿ ಕಾರ್ಯದರ್ಶಿ, ಮುಂಬಯಿ ಸರ್ಕಾರ
ಗೃಹ ಇಲಾಖೆ, (ಮುಂಬಯಿ)

■

**ಕಾ**ಡು' ಎಂದೊಡನೆಯೇ ನಿತ್ಯಹರಿದ್ವರ್ಣ, ಅಸಂಖ್ಯಾತ ವಿಧದ ಸಸ್ಯರಾಶಿ, ಹಕ್ಕಿ, ಪ್ರಾಣಿ, ಹುಳುಹುಪ್ಪಟೆಗಳು ಮುಂತಾದುವುಗಳಿಂದ ತುಂಬಿದ ಪಶ್ಚಿಮ ಘಟ್ಟದ ಬೆನ್ನಿಗೆ ಹರಡಿದ ದಟ್ಟವಾದ ಪ್ರದೇಶವೆಂಬ ಸಾಮಾನ್ಯವಾದ ಒಂದು ಕಲ್ಪನೆಯಿದೆ. ಕಾಡು ಎಂದರೆ ಎಲ್ಲೇ ಆಗಲಿ ಹೀಗಿರಬೇಕು, ಇದೇ ''ಒಳ್ಳೆಯ ಕಾಡು'', ಎಂಬುದು ನಮ್ಮ ಕಲ್ಪನೆ. ಆದರೆ ಕಾಡು ಎನ್ನಲ್ಪಡುವ ನಮ್ಮ ರಾಜ್ಯದ ಪ್ರದೇಶಗಳಲ್ಲಿ ಸಂಚರಿಸುವಾಗ ಎಲ್ಲೆಡೆಯೂ ಯಾವಾಗಲೂ ಇಂಥದೇ ಚಿತ್ರ ಕಾಣಬರುವುದಿಲ್ಲ. ಕೆಲವೆಡೆ ಜಾನುವಾರುಗಳು ಮೇಯುವುದರಿಂದ ವಿರಳವಾದ ಹುಲ್ಲುಗಾವಲುಗಳು, ಸೌದೆಗಾಗಿ ರೆಂಬೆಗಳನ್ನು ಕಡಿದ ಮರಗಳು; ಮತ್ತಷ್ಟು ಕಡೆ ಬರಿದಾಗಿ ಬರಡಾದ ಸಣ್ಣ ಸಣ್ಣ ಭೂಪ್ರದೇಶಗಳು ಕಂಡುಬರುತ್ತವೆ. ಮತ್ತೆ ಕೆಲವೆಡೆ ಕಾಣುವ ದಟ್ಟ ಹಸಿರು ಪ್ರದೇಶಗಳು ವಾಸ್ತವವಾಗಿ ಕಾಫೀ ತೋಟಗಳು. ಇವೆಲ್ಲವನ್ನು ಕಾಡಿನ ಪ್ರದೇಶವೆಂದರೆ ವಾಸ್ತವದಲ್ಲಿ ನಮ್ಮ ಕಾಡಿಗೆ ಏನಾಗಿದೆ ಎಂದು ಆತಂಕಕ್ಕೊಳಗಾದೇವು. ಕರ್ನಾಟಕದಲ್ಲಿ ಸೂರೆ ಹೊಡೆದ ಕಾಡಿನ ಸಂಪತ್ತುಗಳ ಬಗ್ಗೆ ಲೇಖನಗಳು ಪ್ರಕಟವಾಗುತ್ತಲೇ ಇವೆ. ಅರಣ್ಯ ಇಲಾಖೆಯವರು ಹೊಸ ವನೀಕರಣ ಕಾರ್ಯಕ್ರಮಗಳ ಮೂಲಕ ಕಾಡಿನ ಪುನರ್ನಿರ್ಮಾಣ ಮಾಡುತ್ತಿದ್ದೇವೆ ಎಂದು ಪ್ರತಿಕ್ರಿಯಿಸುತ್ತಾರೆ. ಇಂಥ ಪುನರ್ನಿರ್ಮಾಣ ಪ್ರಕ್ರಿಯೆಗಳು ಸಾಮಾನ್ಯವಾಗಿ ಒಂದೇ ಜಾತಿಯ ಮರಗಳನ್ನು ನೆಡುವಂಥವು, ವಾಣಿಜ್ಯ ಉದ್ದೇಶ ಉಳ್ಳವು. ಅಂಥ ಕೆಲಸಗಳಿಂದ ಉಂಟಾದ ಹಸಿರು ಛಾವಣಿ ನೋಡಲು ಅಂದವಾಗಿದ್ದರೂ, ವಾಸ್ತವದಲ್ಲಿ ಅದು ಸಸ್ಯ ವೈವಿಧ್ಯತೆಯಿಲ್ಲದ್ದೆ, ಕಾಡೆಂದು ಕರೆಸಿಕೊಳ್ಳಲು ಅರ್ಹವಾದುವಲ್ಲ ಹಾಗೂ ವಾಸ್ತವದಲ್ಲಿ ''ಪರಿಸರಕ್ಕೆ ಅಂಥ ಬೆಳವಣಿಗೆ ಆರೋಗ್ಯಕರವಲ್ಲ'' ಎಂಬುದು ಅನೇಕರ ಅಂಬೋಣ.



ಇದೊಂದು ಗೊಂದಲಮಯ ಪರಿಸ್ಥಿತಿ. ಇದನ್ನೆಲ್ಲಾ ಅರ್ಥೈಸುವುದು ಹೇಗೆ? ಕರ್ನಾಟಕದ ಕಾಡುಗಳು ಅವನತಿಯ ಹಾದಿ ಹಿಡಿದಿವೆಯೆ? ಇತ್ತೀಚಿನ ಪ್ರಯತ್ನಗಳಿಂದ ಇದನು ತಡೆ ಹಿಡಿಯಲು, ಪುನರ್ನಿರ್ಮಾಣದತ್ತ ಒಯ್ಯಲು ಸಾಧ್ಯವಾಗಿದೆಯೇ? ಬರೇ ಅಂಕಿ-ಸಂಖ್ಯೆಗಳನ್ನು ಗಮನಿಸಿದರೆ ಈ ಪ್ರಶ್ನೆಗಳಿಗೆ ಉತ್ತರ ಸಿಗುವುದಿಲ್ಲ. ಸರ್ಕಾರದ ಅಂಕಿ-ಅಂಶಗಳಂತೆ ೧೯೫೮-೫೯ರಲ್ಲಿ ಕರ್ನಾಟಕದ ಭೂಪ್ರದೇಶದ ಅರಣ್ಯ ವಿಸ್ತೀರ್ಣ ಶೇ. ೧೪.೪ರಷ್ಟು ಇದ್ದದ್ದು ೧೯೯೫-೯೬ರ ವೇಳೆಗೆ ಶೇ. ೧೬.೧ರಷ್ಟು ಮಟ್ಟಿಗೆ ವೃದ್ಧಿಯಾಯಿತು. ಅಲ್ಲದೆ, ೨೦೦೦ದಲ್ಲಿ ೧೭.೪ರಷ್ಟಕ್ಕೆ ತಲುಪಿತ್ತು. ಆದರೆ ವಿಜ್ಞಾನಿಗಳು ಸಂಶೋಧನೆಗಳ ಮೂಲಕ ಕಂಡುಕೊಂಡಿರುವ ಚಿತ್ರ ಇದಕ್ಕೆ ವಿರುದ್ಧವಾಗಿದೆ. ಇದರಂತೆ ೧೯೮೩ರಲ್ಲಿ ಅರಣ್ಯ ವಿಸ್ತೀರ್ಣ ಸುಮಾರು ಶೇ. ೧೩ ಅಥವಾ ಶೇ. ೧೪ರಷ್ಟು ಮಾತ್ರ ಎಂದು ಕಂಡುಬರುತ್ತದೆ. 'ಕಾಡು' ಎಂದು ಸರ್ಕಾರ ಹೇಳಿಕೊಳ್ಳುವ ಪ್ರದೇಶಗಳು ಸರ್ಕಾರದ ಸ್ವಾಧೀನದಲ್ಲಿರುವ ಕೇವಲ ಭೂಪ್ರದೇಶಗಳಷ್ಟೆ. ೧೯೨೦-೧೯೯೦ರ ಮಧ್ಯಂತರದಲ್ಲಿ ಕೇವಲ ಪಶ್ಚಿಮ ಘಟ್ಟದಲ್ಲಿ ಮಾತ್ರ ವಿನಾಶವಾದ ಕಾಡಿನ ಪ್ರದೇಶ ರಾಜ್ಯದ ಒಟ್ಟಾರೆ ಪ್ರದೇಶದ ಶೇ. ೭ರಷ್ಟಾಗುತ್ತದೆ. ಭಾರತ ಸರ್ಕಾರದ ಅರಣ್ಯ ಸರ್ವೇಕ್ಷಣದ ವರದಿ ಪ್ರಕಾರ ೧೯೯೦ರಿಂದೀಚೆಗೆ ಕರ್ನಾಟಕದ ಅರಣ್ಯಪ್ರದೇಶ ವಿಸ್ತಾರವಾಗುತ್ತಿದೆ. ಆದರೆ ಇದರ ಅಂಕಿ-ಅಂಶಗಳು ವಿಶ್ವಾಸಾರ್ಹವಾದುವಲ್ಲ ಎಂದು ಸಾಬೀತುಪಡಿಸಲಾಗಿದೆ. ಜೊತೆಗೆ ನೆಡು ತೋಪುಗಳನ್ನು ಸೇರಿಸುವುದರ ಮೂಲಕ ಮಾತ್ರವೇ ಕಾಡಿನ ಅಭಿವೃದ್ಧಿಯಲ್ಲಿ ಈ ಸಂಖ್ಯೆಯನ್ನು ಕಾಣಿಸಲಾಗಿದೆ. ಪ್ರಾಕೃತಿಕ ಕಾಡುಗಳ ಅವನತಿ ಮತ್ತು ನಷ್ಟ ಎಡೆಬಿಡದೆ ಸಾಗುತ್ತಲೇ ಇದೆ.

ಬೇರೆ ಬೇರೆ ತಜ್ಞರು ವಿವಿಧ ಮಾನದಂಡಗಳನ್ನು ಬಳಸಿ ಕಾಡಿನ ವಿಸ್ತೀರ್ಣವನ್ನು ಅಳೆಯುತ್ತಾರೆ. ಆದರೆ ಈ ಅಂಕಿ-ಅಂಶಗಳಲ್ಲಿ ಇಷ್ಟೊಂದು ವ್ಯತ್ಯಾಸಗಳು ಇರುವುದಕ್ಕೆ ಇದು ಮಾತ್ರ ಕಾರಣವಲ್ಲ. ಇದು ಮಾನದಂಡದ ವ್ಯತ್ಯಾಸಕ್ಕೆ ಮೀರಿದ, ''ಕಾಡು ಎಂದರೆ ಏನು?'' ಎಂಬ ಅರ್ಥ ವಿವರಣೆಯ ವ್ಯತ್ಯಾಸಕ್ಕೆ ಸಂಬಂಧಿಸಿದ್ದು! ಇದು ಅರ್ಥಹೀನ ಪ್ರಶ್ನೆ ಎಂದೀರಿ. ವಾಸ್ತವದಲ್ಲಿ ಇದರ ಯಥಾರ್ಥವನ್ನು ಅರ್ಥಮಾಡಿಕೊಂಡರೆ ಮಾತ್ರ ಸಮಸ್ಯೆಯ ನೈಜ ಸ್ವರೂಪವನ್ನು ನಾವು ಗ್ರಹಿಸಬಹುದಾಗಿದೆ. ಆ ತಿಳುವಳಿಕೆ ಮೂಡಿದ ಮೇಲೆ ಸಮಸ್ಯೆಗೆ ಒಂದು ಸರ್ವಾಂಗೀಣ ಪರಿಹಾರವನ್ನು ಸೂಚಿಸಲು ಸಾಧ್ಯ. ಆದ್ದರಿಂದ ಕೇವಲ ಅಂಕಿ-ಅಂಶಗಳ ಗೊಂದಲದಲ್ಲೇ ಮುಳುಗಿಹೋಗುವುದು ವ್ಯರ್ಥ. ಸಾಧಾರಣ ಜನಕ್ಕಂತೂ ಇದು ಒಂದಿಷ್ಟೂ ಗ್ರಹಿಕೆಯಾಗದು. ಆದ್ದರಿಂದ ''ಕಾಡಿನ ಸಮಸ್ಯೆ''ಯ ಸ್ವರೂಪವನ್ನು ತಿಳಿಯಲು ಪ್ರಯತ್ನಿಸೋಣ.

''ನಮಗೇಕೆ ಕಾಡು ಬೇಕು?'' ಅಥವಾ ''ಕಾಡು ಮಾನವನಿಗೆ ಏನು ನೀಡುತ್ತದೆ?'' ಎಂದು ಮೊದಲಿಗೆ ಪ್ರಶ್ನಿಸೋಣ. ಇದೇನು ಹೀಗೆ ಕ್ಷುಲ್ಲಕ ಪ್ರಶ್ನೆಯನ್ನು ಕೇಳುತ್ತೀರಿ ಎನ್ನಬಹುದು. ಯಾರಿಗೇ ಆದರೂ ಈ ಪ್ರಶ್ನೆಗೆ ಉತ್ತರ ತಿಳಿದೇ ಇರುತ್ತದಲ್ಲವೆ? ಕಾಡು ನಾಟಾ, ಸೌದೆ, ಜಾನುವಾರಿಗೆ ಮೇವು ಹಾಗೂ ಗೊಬ್ಬರವನ್ನು ಕೊಡುತ್ತದೆ; ಅಲ್ಲದೆ ಕಿರು ಉತ್ಪನ್ನಗಳಾದ ಜೇನು, ನೆಲ್ಲಿಕಾಯಿ, ಸೀಗೆ, ಉಪ್ಪಾಗೆ ಇತ್ಯಾದಿ ದೊರೆಯುತ್ತವೆ; ಬೆಟ್ಟದ ಮೈಮೇಲಿನ ಅಮೂಲ್ಯ ಮಣ್ಣನ್ನು ತೊಳೆದು ಹೋಗದಂತೆ ತಡೆಹಿಡಿದಿಡುತ್ತದೆ ದಟ್ಟವಾದ ಕಾಡು. ಜೊತೆಗೆ ಬಿದ್ದ ನೀರು ತಕ್ಷಣ ಹರಿದು ಹೋಗಿ ಪ್ರವಾಹಗಳನ್ನು ಉಂಟುಮಾಡದಂತೆ ತಡೆದು ಆ ನೀರು ಅಂತರ್ಜಲಕ್ಕೆ ಸೇರುವಂತೆ ಮಾಡಬಲ್ಲದು. ದೈವದತ್ತವಾದ ಪ್ರಾಣಿ ವೈವಿಧ್ಯಗಳನ್ನು, ಹಕ್ಕಿ, ಹುಳುಹುಪ್ಪಟ, ಸಸ್ಯಗಳನ್ನು ಒಳಗೊಂಡ ಕಾಡನ್ನು ಮುಂಬರುವ ಪೀಳಿಗೆಗಳಿಗಾಗಿ ರಕ್ಷಿಸಿ ಉಳಿಸಬೇಕು. ಜಾಗತಿಕ ತಾಪ ಏರಿಕೆ ಬಗೆಗೆ ಆತಂಕಗೊಂಡಿರುವ ನಮಗೆ ಕಾಡು, ಇಂಗಾಲವನ್ನು ಹಿಡಿದಿಟ್ಟು ಈ ಬದಲಾವಣೆಯ ದುಷ್ಪರಿಣಾಮದಿಂದ ರಕ್ಷಣೆ ನೀಡುತ್ತದೆ ಎಂದೂ ವಿಜ್ಞಾನಿಗಳು ಹೇಳುತ್ತಾರೆ. ಇಷ್ಟೆಲ್ಲಾ ಸ್ಪಷ್ಟವಾಗಿರುವಾಗ, ಕಾಡಿನ ಮೌಲಿಕತೆ ಎದ್ದು ಕಾಣುತ್ತಿರುವಾಗ, ''ನಮಗೇಕೆ ಕಾಡು ಬೇಕು?'' ಎಂದು ಪ್ರಶ್ನಿಸುವುದು ಮೂರ್ಖತನವೆಂದೆನಿಸಬಹುದು.

ಸಮಸ್ಯೆಯೆಂದರೆ ಮೇಲೆ ಪಟ್ಟಿ ಮಾಡಿದ ಎಲ್ಲ ಪ್ರಯೋಜನಗಳನ್ನು ಏಕಕಾಲದಲ್ಲಿ ಎಲ್ಲ ಕಡೆಯೂ ಸಂಪೂರ್ಣ ಮಟ್ಟದಲ್ಲಿ ಪಡೆದುಕೊಳ್ಳಲಾಗುವುದಿಲ್ಲ. ಈ ಕೆಳಗೆ ಸಾದರಪಡಿಸಿರುವ ಪಟ್ಟಿಯನ್ನು ಸ್ವಲ್ಪ ಗಮನಿಸಿ. ಈ ಪಟ್ಟಿಯ ೧ನೆಯ ಅಡ್ಡಸಾಲಿನ ಪ್ರಕಾರ ವನ್ಯಮೃಗಗಳನ್ನೂ ಜೀವ ವೈವಿಧ್ಯತೆಯನ್ನೂ ಸಂಪೂರ್ಣವಾಗಿ ರಕ್ಷಿಸಲು ಕಾಡುಗಳು ಸಂಪೂರ್ಣವಾಗಿ ಪ್ರಕೃತಿ ನಿಯಮಗಳಿಗೇ ಒಳಪಡುವಂತಾಗಬೇಕು. ಬಹುಶಃ ಈ ಮಾರ್ಗದಲ್ಲಿ, ಮೇಲ್ಮೈ ಮಣ್ಣು ಸಂರಕ್ಷಣೆಯನ್ನೂ ಅಂತರ್ಜಲ ಶೇಖರಣೆಯನ್ನೂ ಅತ್ಯುಚ್ಚಮಟ್ಟದಲ್ಲಿ ಸಾಧಿಸಬಹುದು. ಹಾಗಾದಾಗ ಆ ಕಾಡಿನಿಂದ ಮಾನವ ಬಳಕೆಗೆ ಬೇಕಾಗುವಂತಹ ಇತರ ವಸ್ತುಗಳನ್ನು ನಾವು ಪಡೆಯಲಾಗುವುದಿಲ್ಲ, ಒಣಗಿದ ಕಟ್ಟಿಗೆಗಳು ಮಾತ್ರ ಒಂದಿಷ್ಟು ದೊರೆತೀತು. ಜೇನು ಮುಂತಾದ ಲಘು ಉತ್ಪನ್ನಗಳನ್ನು ಕಾಡಿನ ಇತರ ವಿಷಯಗಳಲ್ಲಿ ಸಮತೋಲನ ತಪ್ಪಿಸದಂತೆ ಎಚ್ಚರವಹಿಸಿ, ಒಂದಿಷ್ಟು ಸಂಗ್ರಹಿಸಬಹುದು. ಆದರೆ ಜಾನುವಾರುಗಳಿಗೆ ಮೇವನ್ನಾಗಲೀ, ಬೆಲೆ ಬಾಳುವ ನಾಟಾವನ್ನಾಗಲೀ ಪಡೆಯುವುದನ್ನು ಮರೆಯಬೇಕಾಗುತ್ತದೆ! ಕಾಡಿನ ಅಂಚಿನಲ್ಲಿ

# ಕರ್ನಾಟಕದ ಅರಣ್ಯ ಸಮಸ್ಯೆಗಳು

ಶರಚ್ಚಂದ್ರ ಲೇಲೆ

ಕನ್ನಡಕ್ಕೆ : ಕೆ. ಎಸ್. ಪಾರ್ಥಸಾರಥಿ

## ಅರಣ್ಯ ಮತ್ತು ಅರಣ್ಯೇತರ ಬಳಕೆಗಳಿಂದಾಗಿ ದೊರೆಯುವ ಫಲಗಳಲ್ಲಿನ ವ್ಯತ್ಯಾಸಗಳು

| ಭೂ ಬಳಕೆಯ ಪ್ರಕಾರಗಳು | ಅರಣ್ಯ ಉತ್ಪನ್ನ, ಸೇವೆ ಅಥವಾ ಫಲ | | | | | | | | |
|---|---|---|---|---|---|---|---|---|---|
| | ನಾಟಾ | ಸೌದೆ | ಸೊಪ್ಪು ತರಗೆಲೆ | ಮೇವು | ಕಿರು ಉತ್ಪನ್ನಗಳು | ಜಲ, ಅಂತರ್ಜಲ ವೃದ್ಧಿ / ಪ್ರವಾಹ ನಿಯಂತ್ರಣ ಫಲಗಳು | ಮೇಲ್ಮೈ ಮಣ್ಣಿನ ಸಂರಕ್ಷಣೆ | ಜೀವ ವೈವಿಧ್ಯತೆ | ಇಂಗಾಲದ ಶೇಖರಣೆ |
| ದಟ್ಟವಾದ "ನೈಸರ್ಗಿಕ" ಅರಣ್ಯ | ೦ | + | + | ೦ | +++ | +++? | +++ | +++ | ++ |
| ದಟ್ಟವಾದ ಬಳಕೆಗೊಳಪಟ್ಟ ಅರಣ್ಯ | + | +++ | +++ | + | ++ | +++ | +++ | ++ | ++ |
| ಸವನ್ನ ಅರಣ್ಯ | ೦ | ++ | ++ | ++ | + | ++ | ++ | + | + |
| ಹುಲ್ಲುಗಾವಲು | ೦ | ೦ | ೦ | +++ | ೦ | ++ | ++ | + | + |
| ನಾಟಾದ ಸಲುವಾಗಿ ನೆಡು ತೋಪು | +++ | + | + | ೦ | ೦ | +? | + | + | +++ |
| ಕಾಫಿ ತೋಪು * | + | + | + | ೦ | ೦ | ++? | ++? | + | ++ |
| ಭತ್ತ ಕೃಷಿ * | ೦ | ೦ | ೦ | ++ | ೦ | ++? | ++? | +? | ೦ |
| ಬಂಜರು ಭೂಮಿ * | ೦ | ೦ | ೦ | ೦ | ೦ | – | – | ೦ | ೦ |

ಫಲಾನುಭವದ ಪ್ರಮಾಣ : +++ = ಅಧಿಕ; ++ = ಮಧ್ಯಮ; + = ಕಡಿಮೆ; ೦ = ಶೂನ್ಯ ; – = ನೇತ್ಯಾತ್ಮಕ; ? = ಅನಿಶ್ಚಿತತೆ

ಫಲಾನುಭವಿಗಳ ಸ್ವರೂಪ : ☐ ಸ್ಥಳೀಯ ☐ ಪ್ರಾದೇಶಿಕ ☐ ಜಾಗತಿಕ * ಗುರುತಿನವು ಅರಣ್ಯೇತರ ಭೂ ಬಳಕೆ ತೋರಿಸುತ್ತವೆ.

ವಾಸಿಸುವ ಗ್ರಾಮಸ್ಥರಿಗೆ ಕಾಡಿನ ಪ್ರಯೋಜನವೆಂದರೆ ಸೌದೆ, ಮೇವು, ಗೊಬ್ಬರಕ್ಕೆ ಬೇಕಾದ ತರಗೆಲೆ ಇತ್ಯಾದಿ. ತಮ್ಮ ಈ ಅಗತ್ಯಗಳನ್ನು ಆಧರಿಸಿ ಅವರು ಕಾಡನ್ನು ನಿಭಾಯಿಸುತ್ತಾರೆ. ಅವರು ಮರಗಳ ಎಲೆಗಳನ್ನು ಸವರಿಕೊಳ್ಳುತ್ತಾರೆ. ಅದರಿಂದ ಸೂರ್ಯ ಕಿರಣ ನೆಲಮಟ್ಟಕ್ಕೆ ಹರಿದು ಹುಲ್ಲು ದಟ್ಟವಾಗಿ ಬೆಳೆಯುತ್ತದೆ. ಅಡ್ಡಸಾಲು ೨ ಮತ್ತು ೩ರಲ್ಲಿ ಕಾಣಿಸಿರುವಂತೆ ಈ ತರಹದ ಸಮರ್ಥವಾಗಿ ನಿಭಾಯಿಸಿದ ''ಸೊಪ್ಪಿನ ಬೆಟ್ಟ''ಗಳು ಬೇಕಾದಷ್ಟು ಲಭ್ಯವಿವೆ. ಆದರೆ ಸೊಪ್ಪಿಗಾಗಿ ಸವರಿದಾಗ ಆಗುವ ಆಘಾತವನ್ನು ಕೆಲವು ಜಾತಿಯ ಮರಗಳು ಮಾತ್ರ ಸಹಿಸಿಕೊಳ್ಳಬಲ್ಲವು. ಅಡ್ಡ ಸಾಲು ೨ ಮತ್ತು ೩ರಲ್ಲಿ ಕಾಣಿಸಿದ ಪ್ರಕಾರ ಜೀವ ವೈವಿಧ್ಯತೆ, ನೀರಿನ ಇಂಗುವಿಕೆ ಹಾಗೂ ಮಣ್ಣು ಸಂರಕ್ಷಣೆಯ ಪ್ರಮಾಣ ಕುಂಠಿತಗೊಳ್ಳಬಹುದು.

ಒಮ್ಮೊಮ್ಮೆ ಗ್ರಾಮಸ್ಥರು ಇಡೀ ಕಾಡಿನ ಪ್ರದೇಶವನ್ನೇ ಹುಲ್ಲು ಬನ್ನಿಯಂಥ ಹುಲ್ಲುಗಾವಲಾಗಿಸಿ ಬಿಡುತ್ತಾರೆ. ಅಥವಾ ಇನ್ನು ಕೆಲವೆಡೆ ಅಂಥ ಹುಲ್ಲುಗಾವಲು ಪ್ರಾಕೃತಿಕವಾಗಿಯೇ ಸೃಷ್ಟಿಯಾಗಿದ್ದಿರಬಹುದು. ಇಂಥ ಹುಲ್ಲುಗಾವಲುಗಳನ್ನು ಎಚ್ಚರಿಕೆ ವಹಿಸಿ ನಿರ್ವಹಿಸಿದರೆ ಅವುಗಳನ್ನು ನಿರಂತರವಾಗಿ ಬೆಳೆಸಬಹುದು. ಮೇವನ್ನು ಸಂಗ್ರಹಿಸಿಕೊಂಡು, ಮಣ್ಣು ಕೊಚ್ಚಿಕೊಂಡು ಹೋಗುವುದನ್ನು ತಪ್ಪಿಸಿ, ನೀರು ಶೇಖರಣೆ ಕುಂಠಿತಗೊಳ್ಳದಂತೆ ನಿಭಾಯಿಸಬಹುದು. ಆದರೂ ಇಲ್ಲಿ ಅಡ್ಡಸಾಲು ೪ರಲ್ಲಿ ನಮೂದಿಸಿರುವಂತೆ ಇತರ ಪ್ರಯೋಜನಗಳನ್ನು ಪಡೆಯಲು ಆಗುವುದಿಲ್ಲ.

ಅರಣ್ಯದಿಂದ ನಮಗೆ ನಾಟಾದ ಪ್ರಯೋಜನವೇ ಮುಖ್ಯವೆಂದರೆ, ಈಗಾಗಲೇ ಕಾಡಿನಲ್ಲಿ ಪ್ರಾಕೃತಿಕವಾಗಿ ನಾಟಾದ ಮರಗಳೊಡನೆ ಒಂದುಗೂಡಿ ಬೆಳೆದಿರುವ ಇತರ ಜಾತಿಯ ಮರಗಳನ್ನು ಕಡಿದು ಅವುಗಳ ಸ್ಥಾನದಲ್ಲೂ ತೇಗದಂಥ ಮರಗಳನ್ನೇ ನೆಡಬೇಕಾಗುತ್ತದೆ. (ಅಡ್ಡಸಾಲು ೫ನ್ನು ಗಮನಿಸಿ). ಬ್ರಿಟಿಷರ ಸರ್ಕಾರವಿದ್ದಾಗ ಅವರು ಇದನ್ನೇ ಮಾಡಿದ್ದು. ಸುಮಾರು ೧೯೮೦ರ ವರೆಗೂ ನಮ್ಮ ಸರ್ಕಾರವೂ ಇದೇ ಕೆಲಸವನ್ನು ಮುಂದುವರಿಸಿತು. ಕಾರಣ, ನಗರ ಪ್ರದೇಶದ ಗ್ರಾಹಕರಿಗೆ, ಕೈಗಾರಿಕೆಗಳಿಗೆ ಅಗತ್ಯವಾದ ಪೀಠೋಪಕರಣ, ಕಟ್ಟಡ, ಗೃಹವಸ್ತು, ಕಾಗದದ ತಯಾರಿಕೆಗೆ ಬೇಕಾದ ಮೆದು ತಿರುಳು ಮುಂತಾದುವುಗಳನ್ನು ನೀಡುವ ಮರದ ಉತ್ಪನ್ನಕ್ಕೇ ಸರ್ಕಾರ ಆದ್ಯತೆ ನೀಡಿತ್ತು. ಹೆಚ್ಚುವರಿ ಮಳೆ ಬೀಳುವ ಪ್ರದೇಶಗಳು ತೇಗಿನ ಮರಗಳನ್ನು ಬೆಳೆಸಲು ಅಷ್ಟು ಯೋಗ್ಯವಲ್ಲವೆಂದು ತಿಳಿದಾಗ, ಮೆದು ತಿರುಳನ್ನು ನೀಡಬಲ್ಲ (ಅಕೇಶಿಯಾ ಆರಿಕ್ಯುಲಿಫಾರ್ಮಿಸ್ ಅಂತಹ) ಮರಗಳನ್ನು ಇಂಥ ಕಡೆ ಬೆಳೆಸಿತು. ಆದರೆ ಎಲ್ಲಿ ಒಂದೇ ಜಾತಿಯ ಮರಗಳಿರುತ್ತವೋ ಅಲ್ಲಿ ಜೀವ ವೈವಿಧ್ಯತೆ ನಷ್ಟವಾಗುತ್ತದೆ. ಹಾಗೂ ಇಂತಹ ನೆಡು ತೋಪುಗಳಲ್ಲಿ ನೀರನ್ನು ಭೂಮಿಯಲ್ಲಿ ಹಿಡಿದಿಡುವುದು ಅನೇಕ ವೇಳೆ ಸಾಧ್ಯವಾಗದು. ಒಂದಿಷ್ಟು ಅಲ್ಪ ಪ್ರಮಾಣದ ಸೌದೆ ಸೊಪ್ಪು ಸಿಕ್ಕೀತು, ಮೇವು ಉತ್ಪನ್ನವಂತೂ ಇಲ್ಲವೇ ಇಲ್ಲವೆನ್ನುವಷ್ಟು.

ಮತ್ತೊಂದು ರೀತಿಯಲ್ಲಿ ಹೇಳುವುದಾದರೆ ನಗರ ಪ್ರದೇಶದವನಾದ, ವನ್ಯ ಪ್ರಾಣಿಗಳನ್ನು ರಕ್ಷಿಸುವ ಹವ್ಯಾಸ ಹಂಬಲವುಳ್ಳವನಿಗೆ ''ಒಳ್ಳೆಯ ಕಾಡು'' ಎಂದರೆ ಮಾನವನ ಹಸ್ತಕ್ಷೇಪ ಒಂದಿಷ್ಟೂ ಇಲ್ಲದ ಪ್ರಾಕೃತಿಕ ಅಭಯಾರಣ್ಯ ಎಂದು ಎನಿಸುತ್ತದೆ. ಗ್ರಾಮಸ್ಥನಿಗೆ, ಸರಿಯಾಗಿ ನಿರ್ವಹಿಸಿದ, ಆದರೆ ಚೆನ್ನಾಗಿ ಸೊಪ್ಪನ್ನು ಸವರಿಕೊಳ್ಳಬಹುದಾದ ಸೊಪ್ಪಿನ ಬೆಟ್ಟ ಅಥವಾ ಹುಲ್ಲು ಬನ್ನಿ ತರಹದ ಕಾಡು ಒಳ್ಳೆಯ ಕಾಡು ಎಂದೆನಿಸುತ್ತದೆ. ಮರಮುಟ್ಟುಗಳ ವ್ಯಾಪಾರಿಗೆ ಹಾಗೂ ಕಾಗದ ಉದ್ಯಮದಾರರಿಗೆ ತೇಗ, ಸಾಗುವಾನಿ ಅಥವಾ ನೀಲಗಿರಿಯ ನೆಡು ತೋಪು ಒಳ್ಳೆಯ ಕಾಡು. ತಮಗೆ ಕಾಡಿನಿಂದ ಏನು ಅಗತ್ಯ ಪೂರೈಸಬೇಕೋ ಅದನ್ನು ಗಮನದಲ್ಲಿಟ್ಟುಕೊಂಡು ಒಬ್ಬೊಬ್ಬರೂ ಒಂದೊಂದು ರೀತಿ 'ಒಳ್ಳೆಯ ಕಾಡಿನ' ವ್ಯಾಖ್ಯಾನ ನೀಡುತ್ತಾರೆ ! ಹೀಗಾಗಿ ಒಂದು ಪ್ರಾಕೃತಿಕ ಕಾಡನ್ನು ಕಡಿದುಹಾಕಿ, ಅದರ ಜಾಗದಲ್ಲಿ ತೇಗದ ನೆಡು ತೋಪು ಬೆಳೆಸಿದರೆ ವನ್ಯಜೀವಿ ಪ್ರೇಮಿ ಕಾಡು ಹಾಳಾಗಿದೆ ಎಂದು ಮರುಗುತ್ತಾನೆ. ಅದನ್ನೇ ಮರದ ವ್ಯಾಪಾರಿ ಹಾಗೂ ಸಾಂಪ್ರದಾಯಿಕ ಮನೋಭಾವದ ಅರಣ್ಯಾಧಿಕಾರಿ ಕಾಡು ಅಭಿವೃದ್ಧಿಯಾಗಿದೆ ಎಂದು ಸಂತೋಷಿಸುತ್ತಾನೆ. ಗ್ರಾಮಸ್ಥರು ಎಲೆ ಸವರಿಕೊಂಡು, ಎಲೆ-ಕೊಂಬೆ-ರೆಂಬೆಗಳ, ಮೇವಿನ, ಸೌದೆಯ ಸಂಗ್ರಹವನ್ನು ಒಂದಿಷ್ಟು ಹೆಚ್ಚಿಸಿಕೊಂಡರೆ, ಈ ಕುರಿತು ಅರಣ್ಯಾಧಿಕಾರಿಗಳು ಕಾಡು ಹಾಳಾಯಿತು ಎಂಬ ಕೂಗೆಬ್ಬಿಸುತ್ತಾರೆ. ಅಭಯಾರಣ್ಯಗಳನ್ನು ಸೃಷ್ಟಿಸಿದರೆ ಅದು ಗ್ರಾಮಸ್ಥರ ಹಿತಕ್ಕೆ ಧಕ್ಕೆ ತರುತ್ತದೆ; ಅವರಿಗೆ ಇಷ್ಟು ದಿನ ಉಪಯೋಗವಾಗುತ್ತಿದ್ದ ಕಾಡು ಇನ್ನು ಅವರ ಪಾಲಿಗೆ ಇಲ್ಲವಾಗುತ್ತದೆ ಎಂಬ ಕಾರಣಕ್ಕಾಗಿ ಅವರು ಹೋರಾಟಕ್ಕೇ ಇಳಿಯುತ್ತಾರೆ. ಆದರೆ ಕಾವೇರಿ ನದಿಯ ಉಗಮ ಸ್ಥಾನದಲ್ಲಿ ಅಭಯಾರಣ್ಯ ಸೃಷ್ಟಿಯಾದರೆ (ನಾಗರಹೊಳೆ, ಬ್ರಹ್ಮಗಿರಿಯಂಥವು) ನದಿಯ ಕೆಳಗಿನ ಹರಿವಿನಲ್ಲಿ ವಾಸಿಸುವವರಿಗೆ ನದಿಯಲ್ಲಿ ನೀರಿನ ಪ್ರಮಾಣ ಹೆಚ್ಚಿ ಸಂತಸ ತರುತ್ತದೆ. ಇವರೆಲ್ಲರೂ ಬಹುಶಃ ಒಂದು ವಿಷಯದಲ್ಲಿ ಮಾತ್ರ ಒಮ್ಮತ ವ್ಯಕ್ತಪಡಿಸಿಯಾರು. ಅದೇನೆಂದರೆ ಪಾಳುಬಿದ್ದ ಬಂಜರು ಭೂ ಪ್ರದೇಶ ಯಾರಿಗೂ ಒಳ್ಳೆಯದಲ್ಲ ಎಂಬುದು !

ವಾಸ್ತವದಲ್ಲಿ ಸಮಸ್ಯೆ ಇದಕ್ಕಿಂತಲೂ ಗಹನವಾದುದು. ಇಲ್ಲಿಯವರೆಗೆ ನಾವು ಗಮನಿಸಿದ್ದು ವಿವಿಧ ಮಾದರಿಯ ಅರಣ್ಯಗಳು ಹಾಗೂ ಅವು ಹೇಗೆ ಮಾನವನಿಗೆ ಪ್ರಯೋಜನಕಾರಿ ಎಂಬುದನ್ನಷ್ಟೆ. ಹೀಗೆಂದ ಮಾತ್ರಕ್ಕೆ ಇವಕ್ಕಿಂತ ಭಿನ್ನವಾದ ಎಲ್ಲಾ ಇತರ ಭೂ ಬಳಕೆಗಳೂ ಹಾನಿಕಾರಕವೇ ಎಂದು ಹೇಳಲಾಗದು. ಕಾಫಿ ತೋಟಗಳು ವೈವಿಧ್ಯತೆಯನ್ನು ಹೊಂದಿಲ್ಲ ನಿಜ. ಅದರಿಂದ ಮೇವು ಮತ್ತು ಎಲೆ ಗೊಬ್ಬರದ ಉತ್ಪನ್ನವೂ ಅತಿ ಕಡಮೆ. ಆದರೆ ಅದು ನೀರನ್ನು ಭೂಗರ್ಭಕ್ಕೆ ಇಳಿಸುವುದರಲ್ಲಿ, ಮೇಲ್ಮೈ ಮಣ್ಣನ್ನು ರಕ್ಷಿಸುವುದರಲ್ಲಿ ಪ್ರಾಕೃತಿಕ ಕಾಡುಗಳಷ್ಟೇ ಸಮರ್ಥವಾಗಿರಬಹುದು (ಅಡ್ಡಸಾಲು ೬ನ್ನು ಗಮನಿಸಿ). ಭತ್ತದ ಬೆಳೆಸನ್ನು ಸಮರ್ಥವಾಗಿ ನಿಭಾಯಿಸಿದರೆ ಅದು ಮಣ್ಣನ್ನು ಸಾಕಷ್ಟು ರಕ್ಷಿಸಬಲ್ಲದು. ಹಾಗೂ, ಭತ್ತದ ಹುಲ್ಲನ್ನು ಮೇವಿಗಾಗಿ ಬಳಸಬಹುದು. (ಅಡ್ಡಸಾಲು ೭ನ್ನು ಗಮನಿಸಿ). ಕಾಫಿ ಬೆಳೆ ಹಾಗೂ ಭತ್ತದ ಕೃಷಿ ಎರಡೂ ಆಹಾರವನ್ನೂ, ರೈತನಿಗೆ ಆದಾಯವನ್ನೂ ಕೊಡುವುದರಿಂದ ಅವು ಅಗತ್ಯವಾದ ಭೂ ಬಳಕೆಗಳು. ಹೀಗಾಗಿ ಇವಕ್ಕಾಗಿ ಕಾಡನ್ನು ಒತ್ತರಿಸುವುದು ನ್ಯಾಯ ಸಮ್ಮತವಾಗಬಹುದು. ಒಂದು ಫಲಕ್ಕಾಗಿ ಇನ್ನೊಂದನ್ನು ಸ್ವಲ್ಪ ಮಟ್ಟಿಗಾದರೂ ತ್ಯಾಗ ಮಾಡಬೇಕಾಗುತ್ತದೆ. ಹೀಗೆ ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸಿದರೆ ಕಾಡು ಒಳ್ಳೆಯದೋ ಕೆಟ್ಟದ್ದೋ ಎಂದು ಏಕಾಏಕಿ ಹೇಳಿಬಿಡಲಾಗುವುದಿಲ್ಲ. ತಾತ್ಪರ್ಯವೆಂದರೆ, ಅರಣ್ಯನೀತಿಯೊಂದನ್ನು ರಚಿಸುವ ಮುನ್ನ ಈ ಕೆಲವು ಪ್ರಶ್ನೆಗಳನ್ನು ಉತ್ತರಿಸಿಕೊಳ್ಳಬೇಕಾಗುತ್ತದೆ :

(ಅ) ಒಂದು ಕಾಡು ಪ್ರದೇಶದಲ್ಲಿ ವಿವಿಧ ಮಾದರಿಯ ಕಾಡುಗಳು ಯಾವ್ಯಾವ ಪರಿಮಾಣದಲ್ಲಿ ಇರಬೇಕು ? ಅಂದರೆ ಎಷ್ಟು ಭಾಗ ಕಾಡನ್ನು ಅತಿ ಕಡಿಮೆ ಉಪಯೋಗಕ್ಕೆ ಬಳಸಿ ಎಷ್ಟನ್ನು ಮೀಸಲಾಗಿಟ್ಟುಕೊಳ್ಳಬೇಕು ? ಸೌದೆಗೆ ಎಷ್ಟು, ಎಲೆ ಗೊಬ್ಬರಕ್ಕೆ ಎಷ್ಟು, ಮೇವಿಗೆ ಎಷ್ಟು ಹಾಗೂ ಇವುಗಳ ಮಿಶ್ರ ಉಪಯೋಗಕ್ಕೆ ಒಳಪಡಿಸಬೇಕಾದ ಪರಿಮಾಣ ವೆಷ್ಟು? ನಾಟಾಕ್ಕೆ, ಮೆದು ತಿರುಳಿನ ಮರಕ್ಕೆ ಎಷ್ಟು? ಇವುಗಳನ್ನು ಬೆಳೆಯುವ ಪ್ರದೇಶಗಳ

ಪ್ರಮಾಣ ಮತ್ತು ಸ್ಥಾನವನ್ನು ನಿಗದಿಪಡಿಸಿ, ಅವನ್ನು ಹೇಗೆ ನಿರ್ವಹಿಸಬೇಕು ಎಂಬುದನ್ನು ತೀರ್ಮಾನಿಸಿಕೊಳ್ಳಬೇಕು.

(ಆ) ''ಅರಣ್ಯ'' ಮತ್ತು ''ಅರಣ್ಯೇತರ'' ಪ್ರದೇಶಗಳ ನಡುವೆ, ಯಾವ ಸಮತೋಲನವನ್ನು ಕಾಪಾಡಿಕೊಳ್ಳಬೇಕು ? ಈ ಅರ್ಥದಲ್ಲೂ ಅಂಥ ವಿವಿಧ ಮಾದರಿ ಪ್ರದೇಶಗಳ ಯಾವ ಸ್ಥಳದಲ್ಲಿ ಸ್ಥಾಪಿಸಿಕೊಳ್ಳಬೇಕು, ಎಷ್ಟಿರಬೇಕು ಎಂಬುದನ್ನು ನಿಗದಿಪಡಿಸಿಕೊಳ್ಳಬೇಕು.

ಆದರೆ ಕಾಡುಗಳೂ, ಕಾಡಲ್ಲದ ಭೂ ಪ್ರದೇಶಗಳೂ ಹಲವರಿಗೆ ಹಲವು ರೀತಿಯ ಭಿನ್ನ ಭಿನ್ನವಾದ ಪ್ರಯೋಜನಗಳನ್ನು ಕೊಡುತ್ತವೆಯಾದ್ದರಿಂದ, ಇದಕ್ಕೆ ಸಂಬಂಧಪಟ್ಟ ಪ್ರಶ್ನೆಗಳನ್ನು ಕಾಡಿನ ತಜ್ಞರೋ, ವಿಜ್ಞಾನಿಗಳೋ ಮಾತ್ರ ಉತ್ತರಿಸಲಾಗುವುದಿಲ್ಲ. ಇವೆಲ್ಲಾ ಸಾಮಾಜಿಕ ಪ್ರಶ್ನೆಗಳು. ಅವಕ್ಕೆ ಸಮಾಜ, ಸಾಮಾಜಿಕ ಪ್ರಕ್ರಿಯೆಯ ಮೂಲಕ ಉತ್ತರಿಸಬೇಕು. ನಮ್ಮ ಭೂ ಪ್ರದೇಶದ ಮೂಲೆ ಮೂಲೆಯಲ್ಲೂ ದಟ್ಟವಾಗಿ ನಮ್ಮ ಜನಸಂಖ್ಯೆ ಹರಡಿರುವುದರಿಂದ, ಹಾಗೂ ಇವರು ಹಲವು ಹತ್ತು ರೀತಿಯಲ್ಲಿ ತಲೆತಲಾಂತರದಿಂದ ಅರಣ್ಯವನ್ನು ಬಳಸುತ್ತಿರುವುದರಿಂದ, ಒಂದೇ ಗ್ರಾಮದಲ್ಲೂ ಅರಣ್ಯದ ಮೇಲಿನ ಅವಲಂಬನೆ, ಅಲ್ಲಿ ವಾಸ ಮಾಡುವವರೆಲ್ಲರಿಗೂ ಏಕರೂಪದ್ದಾಗಿರದೆ ಇರುವುದರಿಂದ, ಸಮಸ್ಯೆ ಕ್ಲಿಷ್ಟವಾಗಿದೆ. ಇಂಥ ಪ್ರಶ್ನೆಗಳಿಗೆ ಉತ್ತರವನ್ನು ನೀತಿ ನಿರೂಪಕರು ಅಂದಾಜಾಗಿ ಮಾತ್ರ ನಿರೂಪಿಸಬಲ್ಲರು. ಪ್ರತ್ಯೇಕ ಪ್ರದೇಶಗಳೊಂದೊಂದಕ್ಕೂ ಸ್ಥಳೀಯವಾಗಿ ಪರಿಹಾರವನ್ನು ಕಂಡುಕೊಳ್ಳಬೇಕಾಗುತ್ತದೆ ಹೀಗಾಗಿ ಅರಣ್ಯನೀತಿ ಮತ್ತೊಂದು ಪ್ರಶ್ನೆಯನ್ನು ಉತ್ತರಿಸಬೇಕಾಗುತ್ತದೆ :

(ಇ) ಮೇಲ್ಕಂಡ ಎರಡು ಪ್ರಶ್ನೆಗಳನ್ನು ಉತ್ತರಿಸಲು ಸೂಕ್ತವಾದ ಸಾಮಾಜಿಕ ಪ್ರಕ್ರಿಯೆ ಯಾವುದು ? ಅರ್ಥಾತ್, ಅರಣ್ಯ ಮತ್ತು ಅರಣ್ಯೇತರ ಭೂ ಬಳಕೆಯನ್ನು ನ್ಯಾಯವಾದ, ಉತ್ತಮವಾದ ಹಾಗೂ ನಿರಂತರವಾದ ರೀತಿಯಲ್ಲಿ ಅನುಭವಿಸುವಂತೆ ಒಂದೇ ಭೂ ಪ್ರದೇಶದ ವಿವಿಧ ಫಲಾನುಭವಿಗಳ ನಡುವೆ ಅವರವರ ಹಕ್ಕು ಮತ್ತು ಬಾಧ್ಯತೆಗಳನ್ನು ನಿಗದಿಪಡಿಸುವುದು ಹೇಗೆ ?

ಇದೇ ಭಾರತದಲ್ಲಿ ಅರಣ್ಯ ನಿರ್ವಹಣೆಯ ಮುಂದಿರುವ ಮೂಲಭೂತ ಸವಾಲು.

ಸುಮಾರು ೧೯೮೦ರವರೆಗೂ ಅನುಸರಿಸಿದ ನಮ್ಮ ನೀತಿ ಮತ್ತು ಆಡಳಿತ ನಿರ್ವಹಣೆಯಲ್ಲಿ ಮೂರು ದೋಷಗಳಿದ್ದುವು. ಒಂದು, ಆದ್ಯತೆಗಳನ್ನು ಗುರುತಿಸುವಲ್ಲಿ ತಪ್ಪುಗಳು ಆಗಿದ್ದುವು. ಅವು ಕೇವಲ ಆದಾಯ ಉತ್ಪತ್ತಿ ಮತ್ತು ಕೈಗಾರಿಕಾ ಆಗತ್ಯಗಳಿಗೆ ಮಾತ್ರ ಗಮನ ನೀಡಿದ್ದವು. ಎರಡು, ಕಾಡಿನ ಮತ್ತು ಕಾಡಲ್ಲದ ಭೂ ಪ್ರದೇಶಗಳ ನಡುವಿನ ಗಡಿಯನ್ನು ನಿರ್ಧರಿಸುವಲ್ಲಿ ಯಾವುದೇ ವ್ಯವಸ್ಥಿತ ದೃಷ್ಟಿಕೋನವಿರಲಿಲ್ಲ. ಮೂರನೆಯದು ಕಾಡಿನ ನಿರ್ವಹಣೆ ಸರ್ಕಾರದಲ್ಲಿ ಕೇಂದ್ರಿತವಾಗಿತ್ತು : ಅಂದರೆ, ಕಾಡಿನ ಉತ್ತಮ ಬಳಕೆಯ ವಿಧಾನ ಸರ್ಕಾರಕ್ಕೇ ತಿಳಿದಿದೆ, ಎಲ್ಲವನ್ನೂ ಅದರ ಸ್ವಾಧೀನತೆಗೆ ಒಳಪಡಿಸಿ ಸರ್ಕಾರ ಎಲ್ಲರಿಗೂ ಅವರವರಿಗೆ ಬೇಕಾದುದನ್ನು ಒದಗಿಸುತ್ತದೆ ಎಂಬ ದೃಷ್ಟಿಕೋನವಾಗಿತ್ತು. ಸಂಪದ್ಭರಿತ ಅರಣ್ಯಗಳನ್ನು ಸರ್ಕಾರದ ಕಟು ನಿಯಂತ್ರಣದಲ್ಲಿ ಇಟ್ಟುಕೊಳ್ಳಲಾಯಿತು. ಕಾಡಿನ ಒಳಗೆ ಅಥವಾ ಅದರ ಅಂಚಿನಲ್ಲಿ ವಾಸಿಸುವವರಿಗೆ ಕೆಲವು ಅರಣ್ಯ ಉತ್ಪನ್ನಗಳನ್ನು ಆರಿಸಿಕೊಳ್ಳುವ ಸೀಮಿತ ಹಕ್ಕನ್ನು ಮಾತ್ರ ನೀಡಲಾಯ್ತು. ಆದರೆ ನಿಗದಿತವಾದ ಕಾಡಿನ ಮೇಲೆ ನಿಯಂತ್ರಣವನ್ನು, ಅವುಗಳ ಸಮರ್ಥ ನಿರ್ವಹಣೆಯ ಜವಾಬ್ದಾರಿಯನ್ನು ವಿಧಿಸಲಿಲ್ಲ. ಪಶ್ಚಿಮ ಘಟ್ಟದ ಹಳ್ಳಿಗಳಲ್ಲಿ, ಒಂದೇ ಊರಿನಲ್ಲಿ ಕೆಲವು ಕುಟುಂಬಗಳಿಗೆ ಮಾತ್ರ ಸೊಪ್ಪಿನ ಬೆಟ್ಟ, ಕುಮ್ಕಿ, ಹಾಡಿ, ಬಾಣೆ ಮುಂತಾದುವುಗಳ ಮೇಲೆ ವೈಯಕ್ತಿಕ ಪ್ರತ್ಯೇಕ ಹಕ್ಕುಗಳನ್ನು ಕೊಡಲಾಯಿತು. ಅಲ್ಲಿನ ಇತರ ಕುಟುಂಬಗಳು ತಮ್ಮ ಅಗತ್ಯಗಳನ್ನು ಸಾರ್ವಜನಿಕ ಭೂ ಪ್ರದೇಶದಿಂದ ನೀಗಿಸಿಕೊಳ್ಳಬೇಕಾಯಿತು. ಇದರಿಂದಾಗಿ, ಒಂದು ಕಡೆ ಏರುತ್ತಿದ್ದ ಗ್ರಾಮೀಣ ಜನಸಂಖ್ಯೆಯ ಒತ್ತಡ, ಮತ್ತೊಂದು ಕಡೆ ಸಣ್ಣ ನಗರ ಪ್ರದೇಶಗಳಿಂದ ಸೌದೆ ಬೇಡಿಕೆಯ ಏರುತ್ತಿದ್ದ ಒತ್ತಡಗಳನ್ನು ತಡೆಯಲಾಗದೆ ಕಾಡುಗಳು ಬಹಳಷ್ಟು ಅವನತಿಗೀಡಾಗಿ ಪಾಳುಬಿದ್ದದ್ದು ಆಶ್ಚರ್ಯವೇನಲ್ಲ. ಆದೇ ಕಾಲದಲ್ಲಿ ವಿಸ್ತಾರವಾದ ಕಾಡಿನ ಪ್ರದೇಶಗಳನ್ನು ಕಾಡಲ್ಲದ ಪ್ರದೇಶಗಳಾಗಿ, ಭೂರಹಿತರಿಗೆ ಕೃಷಿ ಭೂಮಿಯಾಗಿ, ಕಾಫಿ ಕೃಷಿಗಾಗಿ, ಜಲಾಶಯ, ಗಣಿಗಾರಿಕೆ, ಪುನರ್ವಸತಿಗಾಗಿ, ಅಭಿವೃದ್ಧಿಯ ಹೆಸರಿನಲ್ಲಿ ಪರಿವರ್ತಿಸಲಾಯಿತು.

೧೯೮೮ರ ಹೊಸ ರಾಷ್ಟ್ರೀಯ ಅರಣ್ಯ ನೀತಿ ಈ ಎಲ್ಲ ಸಮಸ್ಯೆಗಳಿಗೆ ಸ್ವಲ್ಪಮಟ್ಟಿಗೆ ಪರಿಹಾರ ನೀಡಲು ಪ್ರಯತ್ನಿಸಿತು. ವಿವಿಧ ಪ್ರಯೋಜನಗಳ ನಡುವೆ ಆದ್ಯತೆಯನ್ನು ನಿರ್ಧರಿಸುವ ಸಂದರ್ಭದಲ್ಲಿ ಮೊದಲ ಆದ್ಯತೆ ಪರಿಸರ ರಕ್ಷಣಾತ್ಮಕ ಉಪಯೋಗಗಳಿಗೆ, ಮುಂದುವರಿದು ಗ್ರಾಮೀಣ ಜನರ ಅಗತ್ಯಗಳ ಪೂರೈಕೆಗೆ ನಾಟಾ, ಮೃದು ತಿರುಳಿನ ಮರಗಳಂಥ ಕೈಗಾರಿಕೆಗೆ ಅಗತ್ಯವಾದ ಉತ್ಪನ್ನಗಳಿಗೆ ಕನಿಷ್ಠ ಆದ್ಯತೆ ನೀಡಬೇಕು ಎಂಬುದೇ ಈ ನೀತಿಯ ತಿರುಳು. ಎಷ್ಟು ''ಕಾಡು'' ಇರಬೇಕು, ಎಷ್ಟು 'ಕಾಡಲ್ಲ'ದ ಭಾಗ ಎಂಬ ಬಗ್ಗೆ ಅದು ಹೀಗೆ ಹೇಳುತ್ತದೆ : ಬಯಲು ಮತ್ತು



ಪ್ರಸ್ಥಭೂಮಿ ಪ್ರದೇಶಗಳಲ್ಲಿ ಕಾಡಿನ ಪ್ರಮಾಣ ಶೇ. ೩೩ರಷ್ಟಿರಬೇಕು. ಬೆಟ್ಟಗುಡ್ಡದ ಪ್ರದೇಶದಲ್ಲಿ ಇದು ಶೇ. ೬೬ರಷ್ಟಿರಬೇಕು. ಈ ಪ್ರಮಾಣಗಳಿಗೆ ಯಾವ ವೈಜ್ಞಾನಿಕ ಆಧಾರವೂ ಇಲ್ಲ. ಅವನ್ನು ಸೂಚಕಗಳೆಂದು ಪರಿಗಣಿಸಿ ಪ್ರತಿಯೊಂದು ರಾಜ್ಯವೂ, ಪ್ರದೇಶವೂ ತನ್ನದೇ ಆದ ನೀತಿಯನ್ನು ಸ್ಥಳೀಯ ಪರಿಸ್ಥಿತಿ, ಅಗತ್ಯಗಳನ್ನು ಪರಿಗಣಿಸಿ ನಿಗದಿಪಡಿಸಿಕೊಳ್ಳಬೇಕಾಗುತ್ತದೆ. ಈ ಕೆಲಸ ಆಗಿಲ್ಲ. ಯಾವ ಭೂಮಿಯನ್ನು, ಯಾವ ತರಹದ ಕಾಡಲ್ಲದ ಬಳಕೆಗೆ ಉಪಯೋಗಿಸ ಬಹುದೆಂದು, ಯಾರು ನಿರ್ಧಾರ ಮಾಡಲು ಅಧಿಕಾರ ಪಡೆದಿದ್ದಾರೆಂದು ನಿರ್ಧರಿಸಲು ಒಂದು ವ್ಯವಸ್ಥಿತ ನಿಯಮಾನುಸಾರದ ಪಾರದರ್ಶಕ ಪದ್ಧತಿಯನ್ನು ಕಾರ್ಯರೂಪಕ್ಕೆ ತರಬೇಕಾದ್ದು ಅಗತ್ಯ. ಇದು ಆಗಿಲ್ಲ.

ಅರಣ್ಯದ ಆಡಳಿತದ ಪ್ರಕ್ರಿಯೆ ಹೇಗಿರಬೇಕು ಎಂಬ ವಿಷಯ ಕುರಿತು ಇದೇ ೧೯೮೮ರ ನೀತಿ ಸ್ಥಳೀಯ ಸಮುದಾಯಗಳನ್ನು ಅದರಲ್ಲಿ ತೊಡಗಿಸಬೇಕೆಂದು ಹೇಳುತ್ತದೆ. ಇದರನ್ವಯ ಕೇಂದ್ರ ಸರ್ಕಾರ ೧೯೯೦ರಲ್ಲಿ ರಾಜ್ಯ ಸರ್ಕಾರಗಳಿಗೆ ಸ್ಥಳೀಯ ಜನತೆಯನ್ನು ಪಾಲುದಾರರಾಗಿಸುವ ನೀತಿಯನ್ನು ಕಾರ್ಯಗತಗೊಳಿಸಬೇಕೆಂದು ಹೇಳುವ ಸುತ್ತೋಲೆಯನ್ನು ಹೊರಡಿಸಿತು. ಕಾಡಿನ ಜಂಟೀ ನಿರ್ವಹಣೆ ಯೋಜನೆಗಳ ಮೂಲಕ ಈ ನೀತಿಗೆ ಚಾಲನೆಯನ್ನು ಕೊಡಲಾಗಿದೆ. ಈ ಕಲ್ಪನೆ ಸ್ತುತ್ಯರ್ಹವಾದುದು : ''ಪಾಲಿಸಿದರೆ ಪಾಲು'' ಎಂಬುದೇ ಇದರ ಕರೆ. ದುರದೃಷ್ಟವೆಂದರೆ ಕರ್ನಾಟಕದಲ್ಲಿ ಈ ಕುರಿತ ಹೆಜ್ಜೆಗಳು ಅಸಮರ್ಪಕ ಹಾಗೂ ಅರೆ ಮನಸ್ಸಿನ, ಪ್ರಾಮಾಣಿಕ ಲಕ್ಷ್ಯವಿಲ್ಲದುದಾಗಿವೆ. ಇದರನ್ವಯ ಸಂಬಂಧಪಟ್ಟ ಸಮುದಾಯಕ್ಕೆ ಕಾಡಿನ ಉತ್ಪನ್ನದಲ್ಲಿನ ಪಾಲುಗಾರಿಕೆ ತೀರ ಮಿತಿಯಾದುದಾಗಿದೆ. ಗ್ರಾಮದ ಸಮುದಾಯ ಯಾವ ಪ್ರದೇಶವನ್ನು ನಿಭಾಯಿಸಬಲ್ಲುದು ಎಂದು ಗುರುತಿಸುವ ಕ್ರಮವೂ ಯಾವುದೇ ತಾತ್ವಿಕ ಆಧಾರವಿಲ್ಲದೆ ಸರ್ಕಾರದ ಮನಸ್ಸಿಗೆ ಬಂದಂತೆ ಮಾಡಬಹುದಾಗಿದೆ ಹಾಗೂ ಅನೇಕ ಸಂದರ್ಭಗಳಲ್ಲಿ ಹಾಗೆ ವಹಿಸಿದ ಕ್ಷೇತ್ರ ಪ್ರಮಾಣವೂ ಸಾಲದೆನ್ನುವಷ್ಟು ಅಲ್ಪವಾಗಿರುತ್ತದೆ. ಅದಲ್ಲದೆ ಗ್ರಾಮಾರಣ್ಯ ಸಮಿತಿಗಳಿಗೆ ಸ್ವಾಯತ್ತತೆಯೇ ಇಲ್ಲ. ದೈನಂದಿನ ಪ್ರಕ್ರಿಯೆಯಲ್ಲೂ ಅರಣ್ಯ ಇಲಾಖಾಧಿಕಾರಿಗಳಿಂದ ನಿಯಂತ್ರಣಕ್ಕೊಳಗಾಗಿದೆ. ಎಷ್ಟೋ ಕಡೆ ಈಗಲೂ ಅರಣ್ಯ ಇಲಾಖೆಯ ಧೋರಣೆ ''ಮೊದಲು ನೆಡು ತೋಪುಗಳ ಸ್ಥಾಪನೆ, ನಂತರ ಸ್ಥಳೀಯರೊಡನೆ ಸಮಾಲೋಚನೆ'' ಎಂಬಂತಾಗಿದೆ. ಹಿಂದೆ ಸಾಮಾಜಿಕ ವನೀಕರಣ ಯೋಜನೆಗಳನ್ನು ಕಾರ್ಯಗತಗೊಳಿಸುವಾಗಿನ ಅನುಭವಗಳಿಂದ ತಿಳಿದುಬರುವ ವಿಷಯವೆಂದರೆ, ಈ ನಿಲುವು ಕೆಲಸಕ್ಕೆ ಬರುವಂಥಾದ್ದಲ್ಲ. ಈ ಯೋಜನೆಗಳಿಗಾಗಿ ಅಪಾರ ಸಾರ್ವಜನಿಕ ಹಣ ವೆಚ್ಚವಾಗುತ್ತದೆ. ಆದರೆ ಫಲ ಮಾತ್ರ ತೀರಾ ಕಡಿಮೆ. ಅದಕ್ಕಿಂತಲೂ ಮುಖ್ಯವಾಗಿ, ಈ ರೀತಿ ಸೃಷ್ಟಿಸಿದ ನೆಡು ತೋಪುಗಳು ಬಹಳ ಕಾಲ ಊರ್ಜಿತವಾಗುವುದಿಲ್ಲ; ಕಾರಣ ಅವುಗಳ ನಿರ್ವಹಣೆಯಲ್ಲಿ ಸಮುದಾಯದ ಹೊಣೆಗಾರಿಕೆಯ ಪಾತ್ರವೇ ಇಲ್ಲ. ಏಕೆಂದರೆ, ಅರಣ್ಯ ಇಲಾಖಾಧಿಕಾರಿಗಳು ಕಾಡನ್ನು ತಮ್ಮ ನಿಯಂತ್ರಣದಲ್ಲೇ ಉಳಿಸಿಕೊಳ್ಳುವ ಪಟ್ಟಭದ್ರ ಹಿತಾಸಕ್ತಿಯನ್ನು ಬೆಳೆಸಿಕೊಂಡಿದ್ದಾರೆ.

ಹಾಗೆಂದ ಮಾತ್ರಕ್ಕೆ ಸ್ಥಳೀಯ ಸಮುದಾಯವನ್ನು ಈ ಕೆಲಸದಲ್ಲಿ ತೊಡಗಿಸಿಕೊಳ್ಳುವುದು ಸುಲಭವೆಂದೇನಲ್ಲ. ಅಥವಾ ಅವರು ಕಾಡನ್ನು ನ್ಯಾಯಯುತವಾಗಿ ಉಳಿಸಿ ಬೆಳಸುವ ರೀತಿಯಲ್ಲಿ ನಿರ್ವಹಿಸುವರೆಂಬ ಖಾತ್ರಿಯೇನೂ ಇಲ್ಲ. ಮೊದಲಿಗೆ ಸರ್ಕಾರವನ್ನೇ ಎಲ್ಲಕ್ಕೂ ಅವಲಂಬಿಸುವ ಅಹಿತಕರ ಮಾನಸಿಕ ಅಭ್ಯಾಸಗಳನ್ನು ಕೈಬಿಡಿಸುವುದು ಸುಲಭವೇನಲ್ಲ. ಎರಡನೇದಾಗಿ ಸ್ಥಳೀಯ ಶ್ರೀಮಂತರೇ ಕಾಡನ್ನೂ ಅದರ ಉತ್ಪನ್ನವನ್ನೂ ವಶಪಡಿಸಿಕೊಳ್ಳುವುದನ್ನು ತಪ್ಪಿಸುವುದು ಸುಲಭವಲ್ಲ. ಮೂರನೆಯದಾಗಿ ಭೂರಹಿತ ಬಡ ಕುಟುಂಬಗಳಿಗೆ ಈ ''ಕಾಡನ್ನು ಕಡಿದು ಬೇಸಾಯ ಮಾಡುವುದರಲ್ಲಿಯೇ ತಮ್ಮ ಉದ್ಧಾರ'' ಎಂಬ ಭಾವನೆಯನ್ನು ತಪ್ಪಿಸುವುದಕ್ಕಾಗಿ ಕಾಡಿನಿಂದ ಸಾಕಷ್ಟು ಆದಾಯ ಉಂಟುಮಾಡುವುದೂ ಸುಲಭವಲ್ಲ. ಕರ್ನಾಟಕದಲ್ಲಿ ಅರಣ್ಯದ ಸಮಸ್ಯೆಗಳನ್ನು ಪರಿಹರಿಸುವುದೆಂದರೆ ಈ ಎಲ್ಲ ಕ್ಲಿಷ್ಟವಾದ ಸಾಮಾಜಿಕ ಸಮಸ್ಯೆಗಳ ಬಗೆಗೂ ವಿಸ್ತಾರವಾದ ತಿಳಿವಳಿಕೆಯನ್ನು ಪಡೆಯಬೇಕು. ಸಾಮಾಜಿಕವಾಗಿ ನ್ಯಾಯಯುತವಾದ, ಬಹುಕಾಲೀನ ಧೋರಣೆಯುಳ್ಳ ಪಾರದರ್ಶಿಕ ಅರಣ್ಯ ನೀತಿಯ ನಿರೂಪಣೆಯನ್ನು ಸಾಧಿಸಲು ಪ್ರಬಲ ಜನಾಂದೋಲನದ ಬೆಂಬಲ ಹಿಂದೆಂದಿಗಿಂತಲೂ ಇಂದು ಅತ್ಯಗತ್ಯವಾಗಿದೆ.

**ಡಾ|| ಶರಚ್ಚಂದ್ರ ಲೇಲೆ**
ಸೆಂಟರ್ ಫಾರ್ ಇನ್‌ಟರ್‌ಡಿಸಿಪ್ಲಿನರಿ ಸ್ಟಡೀಸ್
ಇನ್ ಎನ್‌ವಿರಾನ್‌ಮೆಂಟ್ ಅಂಡ್ ಡೆವಲಪ್‌ಮೆಂಟ್, ಐಎಸ್‌ಇಸಿ ಕ್ಯಾಂಪಸ್
ನಾಗರಬಾವಿ, ಬೆಂಗಳೂರು - ೫೬೦ ೦೭೨

ಜಗತ್ತಿನ ಜೀವನದ ಸುತ್ತ - ಮುತ್ತ ಒಂದು ವಿಹಂಗಮ ನೋಟ ಬೀರಿದಾಗ 'ಅರ್ಥಗಳು' ಅಡಗಿಕೊಂಡಿವೆ; ಮಲಗಿ ಕೊಂಡಿವೆ. ಒಂದೇ ಒಂದು ಸಮಾಧಾನಕರ ಸಂಗತಿ ಎಂದರೆ 'ಅರ್ಥಗಳು' ಇನ್ನೂ ಉಳಿದುಕೊಂಡಿವೆ, ಮರೆಯಾಗದೇ ಮಣ್ಣುಗೂಡದೆ, ಅಲ್ಲವೇ?

ಮನುಷ್ಯ ಬಾಳನ್ನು ಅರ್ಥೈಸಿಕೊಳ್ಳಲು ಶತ ಶತಮಾನ ಗಳು ಹಿಡಿದಿವೆ. ಗುಂಪು - ಗುಂಪಾಗಿ ಜೀವಿಸುತ್ತ ಸಮಾಜ ಕಟ್ಟಿಕೊಂಡು ಜೀವನದ ರೀತಿನೀತಿಗಳನ್ನು ಹಿಗ್ಗಿಸುತ್ತಲೇ ನಡೆದಿರುವ ಮಾನವ ಇದರಲ್ಲಿ ಇನ್ನೂ ದಣಿದಂತೆ ಕಾಣುವುದಿಲ್ಲ. ಅಂಜಿಕೆ ಭಯಗಳನ್ನು ನಿವಾರಿಸಿಕೊಳ್ಳಲು ಹಲವಾರು ವ್ಯಕ್ತ - ಅವ್ಯಕ್ತ ಮಾರ್ಗಗಳನ್ನು ಪ್ರಚಲಿತಕ್ಕೆ ತಂದುಕೊಂಡು, ಇಹದ ಈ ಬದುಕನ್ನು ಗೆಲ್ಲಲು ಹೊರಟ ಮಾನವ ಇಂದು ಭಯೋತ್ಪಾದಕ ಹಿಂಸಕ ಸ್ಥಾನದಲ್ಲಿ ನಿಂತುಕೊಂಡಿರುವುದು ಆಶ್ಚರ್ಯವೇನಲ್ಲ.

ಮನುಷ್ಯ ತನ್ನ ಸುತ್ತ ಬೆಳೆಸಿಕೊಂಡ ಸಂಗತಿಗಳಲ್ಲಿ 'ದೇವರು' ಅತ್ಯಂತ ಪ್ರಮುಖವಾದುದು. ದೇವರ ಸಂತೃಪ್ತಿಯೇ ಎಲ್ಲಕ್ಕೂ ಮಿಗಿಲಾದುದು ಎಂಬ ಭ್ರಮೆ ಸಾರ್ವತ್ರಿಕವಾಗಿರು ವಂತೆ ಎಲ್ಲ ಕಾಲದ ಕಲೆಗಾರಿಕೆಯೇ ಆಗಿದೆ. ಜೀವನಕ್ಕೆ ಅರ್ಥವಂತಿಕೆ, ಶ್ರೇಯಸ್ಸು, ಪ್ರಗತಿ ಎಲ್ಲ ದೇವರಿಂದ, ದೇವರ ಕೃಪೆಯಿಂದ ಎಂಬುದು ನಿತ್ಯದ ಮಾತಾಗುವಂತೆ ಮಾಡ ಲಾಯಿತು. ದೇವರ ಕಲ್ಪನೆ ಅತ್ಯಂತ ಪುರಾತನ ಸತ್ಯ ಶೋಧನೆಯೇ ಆಗಿದೆ. ದೇವರು ಯಾವ ಯಾವ ರೂಪವನ್ನು ತಾಳಿದ, ದೇವತೆಗಳು ಯಾವ ಯಾವ ಸ್ವರೂಪಗಳನ್ನು ಪಡೆದುಕೊಂಡರು ಎಂಬ ವಿಷಯಗಳತ್ತ ನಾವು ಗಮನ ಹರಿಸಿದಾಗ ದಂಗೆ ಏಳುತ್ತೇವೆ. ಅದಕ್ಕಿಂತಲೂ ಇಂದು ದೇವರ ಹೆಸರಿನಲ್ಲಿ ದಂಗೆಗಳು ಸಂಭವಿಸುತ್ತಿವೆ. ದೇವರು ದೇವತೆಗಳ



# ದೇವರು : ದೈವ ಮತ್ತು ನಮ್ಮೂರು

ಸುತ್ತಲು ಜೀವನ ಬೆಳೆಯಬೇಕು, ಅವುಗಳಿಂದ ಬಲಾಢ್ಯ ತನವನ್ನು ಹೊಂದಬೇಕು, ಇಹದ ಬಾಳನ್ನು ಗೆದ್ದು, ಪರಲೋಕದ ಸ್ವರ್ಗವನ್ನು ಗಳಿಸಬೇಕೆಂಬ ಹಂಬಲವೇ ಜೀವನವಾಯಿತು. ತಮ್ಮ ಪೂರ್ಣ ಜೀವನವನ್ನೇ ದೇವರನ್ನು ಕಾಣಲು, ಸಾಕ್ಷಾತ್ಕಾರವನ್ನು ಮಾಡಿಕೊಳ್ಳಲು, ಪಣ ತೊಟ್ಟವರ ಹಿಂಡೇ ನಮ್ಮ ಮುಂದಿದೆ. ದೇವರನ್ನು ಕಾಣದ ಬಾಳ್ವೆಗೆ ಅರ್ಥವಿಲ್ಲವೆಂಬ ಪಾವನ ಪ್ರತೀತಿ ಮೂರು ಲೋಕ ಹರಡಿಕೊಂಡಿದೆ. ದೇವ – ದೇವತೆಗಳಿಂದ ಶಕ್ತಿ - ಶಸ್ತ್ರ ಪಡೆದುಕೊಂಡು ರಾಕ್ಷಸರೆಂಬ ಜೀವ ಕಂಟಕರ ಸಂಹಾರವೇ ಪರಮ ಪುರುಷಾರ್ಥವಾದ ಈ ನಾಡಿನಲ್ಲಿ ಮನಕ್ಕೊಂದು, ಮನೆಗೊಂದು, ಕೇರಿಗೆ ಹನ್ನೊಂದು, ಊರಿಗೆ ಹತ್ತಕ್ಕೆ ಮತ್ತೊಂದು ದೇವ-ದೇವತೆಗಳು ಹುಟ್ಟುತ್ತ ಹರಡಿಕೊಂಡಿವೆ. ನಮ್ಮೂರು ಇಂದು ಅನೇಕ ದೇವರುಗಳ ತಾಣವಾಗಿ, ಮೊನ್ನೆ- ಮೊನ್ನೆ ಅನೇಕ ಚಲ್ಲಾಟ ಮಾಡಿ - ಆಡಿ ಹರಿದಾಡಿದ ಮಂಗಣ್ಣ ; ಕೊನೆಯ ಉಸಿರು ಎಳೆದ ಜಾಗದಲ್ಲೊಂದು 'ದೇವರು' ಸ್ಥಾಪಿತಗೊಂಡಿದೆ. ಈ ಮೊದಲಿನ ದೇವರುಗಳಿಗಂತೂ ಲೆಕ್ಕವಿಲ್ಲ. ಊರಿನ ದೇವರು, ಅಗಸಿ ದೇವರು, ಅಗಸಿ ಒಳಗಿನ ದೇವರು, ಊರ ಮುಂದಿನ ದೇವರು, ನಡುವಿನ - ಹೊರಗಿನ ದೇವರು... ದೇವರು... ದೇವರು - ತುಂಬಿದ ಈ ಊರಿಗೆ ಮರಿದೇವರೊಬ್ಬರು ಬಂದಿದ್ದಾರೆ; ಊರಿಗೊಂದು ಹೊಸ ಕಳೆ - ಬೆಳೆ ತರುವೆನೆಂದು ನಂಬಿಸಿ ಖಾತ್ರಿ ಮಾಡಿ - ಮಾಡಿ ಕತ್ತರಿ ಹಚ್ಚುತ್ತ ನಡೆದಿದ್ದಾರೆ. ನಮ್ಮ ಊರಿನ 'ದೇವರ ಜಾತ್ರೆ' ಒಂದೊಂದು ಹಂಗಾಮಿನಂತೆ ಕಂತು ಕಂತಾಗಿ ನಡೆಯುತ್ತಿದೆ. ದೇವರ ಜಾತ್ರೆಗಾಗಿಯೇ ನಮ್ಮೂರಿನಲ್ಲಿ ಪ್ರತ್ಯೇಕ ಪ್ರತ್ಯೇಕ ಕಮಿಟಿ ಗುಂಪುಗಾರಿಕೆ ಬೆಳೆದು ಆಗಾಗ ಮಾರಾಮಾರಿಗಳು ನಡೆಯುತ್ತಿವೆ. ಪೋಲೀಸ ಇಲಾಖೆಯವರಿಗೆ ಸಾಕಷ್ಟು ಕೆಲಸ ಕೊಟ್ಟಿರುವ ದೇವರ ಜಾತ್ರೆ ಗಳು ಪೊಲೀಸರಿಲ್ಲದೇ ಎಂದೂ ನಡೆದೇ ಇಲ್ಲ. ಇನ್ನು ದೇವರ ಹರಕೆ ಹೊತ್ತವರು, ಪೂಜಾರಿಗಳು ಮಂತ್ರ ತಂತ್ರ ಪ್ರಭಾವ ಸಿದ್ಧಿ ಮುಂತಾಗಿ ದೇವರನ್ನು ಒಲಿಸಿಕೊಂಡವರು, ಬಲಿಸಿ ಕೊಂಡವರು, ಸಮೀಪ ಇದ್ದವರು, ಆಪ್ತ ವಲಯದವರು ಸಿಕ್ಕಾಪಟ್ಟೆ ಬೆಳೆದು ಬೇಳೆ ಕುದಿಸಿಕೊಳ್ಳುತ್ತಿದ್ದಾರೆ. ನಮ್ಮೂರಿನ ರೈತಾಪಿ ಕೂಲಿಗಾರರು ದೇವರನ್ನೇ ನಂಬಿ ಬದುಕುವುದರ ಜೊತೆಗೆ ಯಾರು ಕೇಳಿದರೂ ದೇವರ ಜಾತ್ರೆ ಪಟ್ಟಿ ಕೊಡಲು ಮುಂದಾಗದೇ ಇರಲಾಗದು. ದೇವರ ಕೃಪೆಯಿಂದಲೇ, ಜಾತ್ರೆ ಮಾಡುವವರ ಜಾತ್ರೆಯಿಂದಲೇ ಬದುಕಬೇಕಾಗುತ್ತದೆಂಬ ದೃಢ ನಂಬಿಕೆ ಅವರಲ್ಲಿದೆ. ನಮ್ಮೂರಿನಲ್ಲಿ ಸಾರಾಯ ಎಂದರೆ ಗೊತ್ತಿಲ್ಲದ ದಿನವೊಂದು ಇತ್ತು; ಆದರೆ ದೇವರು, ದೇವರ ಜಾತ್ರೆಯಿಂದ ಇವು ಇಮ್ಮಡಿ ಮುಮ್ಮಡಿಗೊಳ್ಳುತ್ತಲೇ ಸಾಗಿವೆ. ಮನೆ - ಮನೆ ಗಳಲ್ಲಿ ದೇವರುಗಳೊಂದಿಗೆ ಸರಾಯಿ ಬಾಟ್ಲಗಳೂ ರಾರಾಜಿಸುತ್ತಲಿವೆ. ಎಷ್ಟೊಂದು ದೇವರುಗಳು ನಮ್ಮೂರಿಗೆ ಬಂದರೂ ದೇವರ ಮುತ್ಯೆದಿತನಕ್ಕೆ ಮುಂದಿನ ಊರಿನ ಹೆಣ್ಣು ಮಕ್ಕಳನ್ನು ಕರೆತರಬೇಕಾಗಿದೆ. ದೇವರ ಸಾಮೀಪ್ಯವಿರುವವರ ಚಾಪಲ್ಯ ಅವರ ಚಲ್ಲಾಟಗಳು ದೇವರಿಗೂ ಪ್ರಿಯವೆಂದು ನಮ್ಮೂರಿನ ಜನ ಸಹನೆಯನ್ನು ಬೆಳೆಸಿಕೊಂಡು ಬಹಳ ದಿನಗಳಾಗಿವೆ. ನಮ್ಮೂರಿನ ಹಿಂದಿನ ದಿನಗಳ ದೇವರು, ದೇವರ ಪ್ರತಿನಿಧಿ ಪೂಜಾರಿಗಳನ್ನು ನೆನಪಿಸಿಕೊಂಡರೆ ಒಂದಿಷ್ಟು ನೆಮ್ಮದಿಯ ಉಸಿರು ಸಿಕ್ಕಂತಾಗುತ್ತದೆ. ವ್ಯಾಪಾರೀಕರಣದ ವ್ಯವಹಾರದ ಗತ್ತು ಗೊತ್ತಿಲ್ಲದ ಅವರು ಇದ್ದುದರಲ್ಲಿಯೇ ಸಂತೃಪ್ತರಾಗಿದ್ದರಲ್ಲವೇ ?

ಸಹಾಯ, ಸಹಕಾರ, ಸಹಬಾಳ್ವೆಗಳೆಲ್ಲವೂ ಕನಸಿನ ಮಾತುಗಳಾಗಿಹೋಗಿವೆ. ಏಕೆಂದರೆ ನಮ್ಮೂರಿನ ದೇವ- ದೇವತೆಗಳಲ್ಲಿ ಹರಿದು ಹಂಚಿ ಹೋದ ಜನ ನಮ್ಮದು ಹೆಚ್ಚು ನಿಮ್ಮದು ಕಡಿಮೆ ಎಂಬ ಪೈಪೋಟಿ ಎದ್ದು ನಿಂತಿದೆ. ಇದಲ್ಲದೆ ಇಂದು ಮರಿ ದೇವರುಗಳು ಧರ್ಮ ಧರ್ಮ ಎಂದು ಗೊಂದಲವನ್ನು ಎಬ್ಬಿಸಿದ್ದಾರೆ; ದೇವರ ಕಾಟ, ಧರ್ಮದ ಕಾಟ, ಜಾತಿಯ ದೊಡ್ಡಾಟ, ಪರಂಪರೆಯ ಕಿತ್ತಾಟ.

ಸ. ರಾ. ಸುಳಕೂಡೆ

ಮನೆತನದ ಹರತಾಟ, ಮನುಜ ಏನೆಂದು ಬಾಳ್ವೆ ಮಾಡುವುದೋ ತಿಳಿಯದ ಸ್ಥಿತಿಯಾಗಿದೆ. ಉತ್ಸವ ಉತ್ಸಾಹ, ಪ್ರೀತಿ ಆದರ - ಆತಿಥ್ಯ ಕರಕೊಂಡು ಉಣ್ಣುವ ಆತ್ಮೀಯತೆ ಹಬ್ಬದ ವಾತಾವರಣ ಎಲ್ಲವನ್ನು ಕಳಕೊಂಡು ನಿಂತಿರುವ ನಾವು ನಿಸರ್ಗದ ಅಭಾವಕ್ಕೆ ಪ್ರಕೃತಿಯ ಹರಣದ ಎಲ್ಲ ಛಾಯಗಳಿಗೆ, ಬರದ ಎಲ್ಲ ರೂಪಗಳಿಗೆ ಪ್ರತೀಕಗಳಾಗಿ ಬಿಟ್ಟಿದ್ದೇವೆ ! ಮುಗ್ಧತೆ ಪ್ರಾಮಾಣಿಕತೆಗಳಂತೂ ಲವಲೇಶವೂ ಇಲ್ಲದಾಗಿದೆ. ಸಂಶಯ, ಅಪನಂಬಿಕೆ, ಬೆಳೆದು ದೇವ - ದೇವತೆಗಳ ಪ್ರತೀಕಗಳನ್ನೇ ಅವಹೇಳನ ಮಾಡುತ್ತಿವೆ.

ನಮ್ಮೂರಿಗೆ ದೇವರುಗಳು ಮೊದಲು ಬಂದವೋ ಅಥವಾ ದೆವ್ವಗಳು ಮೊದಲಿಗೆ ಬಂದವೋ ಎಂಬ ಬಗ್ಗೆ ನಿಶ್ಚಿತವಾದ ಗುರುತಿಲ್ಲ. ದೇವರುಗಳ ಮುಂಚೆಯೇ ದೆವ್ವಗಳು ನಮ್ಮೂರಿಗೆ ಬಂದಿರಬೇಕೆಂಬ ಊಹೆಗೆ ಸಾಕಷ್ಟು ಆಧಾರಗಳಿವೆ. ಏಕೆಂದರೆ ದೇವರ ಹುಟ್ಟು ದೆವ್ವಗಳನ್ನು ಬಿಡಿಸುವುದಕ್ಕಾಗಿಯೇ ಅಲ್ಲವೇ ? ನಮ್ಮೂರ ದೆವ್ವಗಳ ಬಗ್ಗೆ ಯೋಚಿಸುತ್ತಿದ್ದಾಗ 'ನಮ್ಮ ಊರಿನ ರಸಿಕರು' ಎಂಬ ಪುಸ್ತಕದಲ್ಲಿ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಹೇಳಿರುವ ದೆವ್ವಗಳ ವಿವರಣೆ ನೆನಪಿಗೆ ಬಂತು; ಅವರ ಊರಿನ ದೆವ್ವ ಮತ್ತು ನಮ್ಮ ಊರಿನ ದೆವ್ವಗಳಲ್ಲಿ ಸಾಮ್ಯತೆ ಇಲ್ಲದಿದ್ರೂ ಸಹ, ಅದನ್ನೂ ಇಲ್ಲಿ ಉಲ್ಲೇಖಿಸದೇ ಮುಂದೆ ಹೋಗದಂತೆ ನಮ್ಮೂರು ದೆವ್ವಗಳೇ ತಡೆ ಹಾಕಿವೆ. ಆ ವಿವರಣೆ ನೋಡಿ ದೆವ್ವ ದೆವ್ವ ಎಂದು ಗಾಬರಿಯಾಗಬೇಡಿ - ''ನಮ್ಮ ಊರಿನಲ್ಲಿ ಬಗೆ ಬಗೆಯ ಸ್ವಭಾವದ ಜನರಿರುವಂತೆ ಬಗೆ ಬಗೆಯ ದೆವ್ವಗಳಿವೆ. ಕೆಲ ಕೆಲವು ದೆವ್ವಗಳು ಕೆಲಕೆಲವರಿಗೆ ಮಾತ್ರ ಕಾಣುತ್ತವೆ. ಕೆಲವು ದೆವ್ವಗಳು ತಮಗೆ ಪರಿಚಿತವಾದ ಸ್ಥಳಗಳಲ್ಲಿ ಮಾತ್ರ ತಿರುಗಾಡುತ್ತವೆ: ನಮ್ಮ ಊರಿನಲ್ಲಿರುವ ದಟ್ಟವಾದ ತೋಪುಗಳು, ಗುತ್ತಿ ಗುತ್ತಿಯಾಗಿ ಬೆಳೆದಿರುವ ಪೊದೆಗಳು; ನಿರ್ಜನವಾಗಿ ಪಾಚಿ ಬೆಳೆದು ನಿಂತಿರುವ ಕೊಳಗಳು, ಊರಿಗೆ ಸ್ವಲ್ಪ ದೂರವಾಗಿರುವ ನದಿ, ನದಿಯ ತೀರದ ದೇವಾಲಯ, ದೇವಾಲಯದ ಹಿಂದಿನ ಸ್ಮಶಾನ, ಕೋಟೆಯ ಕಂದಕದ ಗುಂಡಿಗಳು, ಊರಿನ ಸುತ್ತ ಇರುವ ಚಿಕ್ಕ ಚಿಕ್ಕ ಕಾಡು. ಈ ಸ್ಥಳಗಳಲ್ಲೆಲ್ಲಾ ದೆವ್ವಗಳು ಹಗಲು ಹೊತ್ತು ಅಡಗಿದ್ದು ರಾತ್ರಿ ಹೊತ್ತು ಕಣ್ಣಿಗೆ ಕಾಣಿಸಿಕೊಳ್ಳಲು ಅನುಕೂಲವಾಗಿವೆ.''

ದೇವರು - ದೆವ್ವಗಳ ಕಾಟದಲ್ಲಿ ಬಡಬಗ್ಗರು ಮಗ್ಗುಲು ಮುರಿದುಕೊಳ್ಳುತ್ತ, ಆಗಾಗ ಆವೇಶ-ರೋಷಕ್ಕೆ ಒಳಗಾಗಿ ತಮ್ಮ ತಮ್ಮಲ್ಲಿ ಹೊಡೆದಾಡಿ ದೆವ್ವಗಳ ಅವತಾರಗಳನ್ನು ತಾವೇ ತಾಳುತ್ತಿದ್ದಾರೆ. ಅರಿಯದ ಮಕ್ಕಳ ತಲೆಯೊಳಗೆ ಪ್ರತಿ ಮನೆ - ಮನೆಯ ದ್ವೇಷ ಅಸೂಯೆ ತುಂಬಿ ದೆವ್ವಗಳಾಗಿಯೇ ಬೆಳೆಯಲು ಪ್ರೋತ್ಸಾಹಿಸುತ್ತಿದ್ದಾರೆ. ನಮ್ಮ ಮೇಲೆ ಮತ್ಯಾರೋ ಕಣ್ಣಿಟ್ಟು ಕೊಲ್ಲಲು ಸದಾ ಸಂಚು ಮಾಡುತ್ತಿದ್ದಾರೆಂಬ ಭೀತಿಯನ್ನು ಹಬ್ಬಿಸಿ ಸದಾ ಅಪನಂಬಿಕೆಯನ್ನೇ ಉಣಬಡಿಸುತ್ತಿದ್ದಾರೆ. ನಮ್ಮೂರಿನ ಪಂಡಿತ ಪುರೋಹಿತ ಮುಲ್ಲಾ ಎಲ್ಲರೂ ಅವರಿವರ ಮೇಲೆ ದೇವರು - ದೆವ್ವಗಳನ್ನು ತರಿಸಿ ತಮಗಿಷ್ಟ ಬಂದಂತೆ ದೇವರು - ದೆವ್ವನ ಮಹಿಮೆ ಮತ್ತು ತಮ್ಮಲ್ಲಿರುವ ದೈವಿ ಶಕ್ತಿಯನ್ನು ಖಾತ್ರಿ ಮಾಡಿಸುತ್ತಿದ್ದಾರೆ. ಊರಿನ ಪುಢಾರಿಗಳಂತೂ ದೇವರು - ದೆವ್ವದ ಅಮಲಿನೊಳಗೆ ಸಾರಾಯಿಯ ದಾಸರಾಗಿ ಚರಿತ್ರೆಗೆ ತಮ್ಮ ಪಾಲನ್ನು ಕೊಡುತ್ತ ಜನರ ಅಭಿವೃದ್ಧಿಗಿಂತ ತಮ್ಮ ಅಭಿವೃದ್ಧಿಗೆ ಸದಾ ಗುದ್ದಾಡುತ್ತ ಪರದೇಶಿಗಳಿಗೆ, ಗಂಡ ಸತ್ತವರಿಗೆಲ್ಲ ಒಂದು ಗತಿ ತೋರಿಸುತ್ತಿದ್ದಾರೆ. ಪಂಡಿತ, ಪುರೋಹಿತ, ಮುಲ್ಲಾಗಳನ್ನು ತಮ್ಮ ಹಿತಾಸಕ್ತಿಗೆ ಬಳಸಿಕೊಂಡು ಎಲ್ಲ ಬಾಬುಗಳಿಂದ ಮಾಮೂಲು ಬರುವಂತೆ ನೋಡಿಕೊಳ್ಳುವಲ್ಲಿ ನೈಪುಣ್ಯತೆ ಸಾಧಿಸಿದ ಮುಖಂಡರು ಸದಾ ತಮ್ಮ ಸುತ್ತ ಚಾಡಿಕೋರರ ದಂಡನ್ನು ಇಟ್ಟುಕೊಂಡು ಮೆರೆಯುತ್ತಿದ್ದಾರೆ.

ದೇವರು - ದೆವ್ವ ಮತ್ತು ನನ್ನೂರು ಒಂದಕ್ಕೊಂದು ಅರ್ಥವಿಲ್ಲದಂತಾಗುತ್ತಿದೆ. ದೇವರು ಯಾವುದು ? ದೆವ್ವ ಯಾವುದು ? ಮಿಗಿಲಾಗಿ ಊರೆಂದು ನನ್ನೂರನ್ನು ಈಗ ಗುರುತಿಸಬಹುದೇ ? ಇದೆಲ್ಲ ಜಟಿಲ; ಒಂದಕ್ಕಿಂತ ಒಂದು ಕುಟಿಲ.

ದೇವರ ಬೆನ್ನು ಹತ್ತಿದವರು ಸುಲಿದುಕೊಳ್ಳುತ್ತಿದ್ದಾರೆ; ದೆವ್ವದ ಗೂಢವನ್ನು ಕಟ್ಟಿ ಬೆಳೆಸಿದವರಂತೂ ಸಾಕಷ್ಟು ಬಲಗೊಳ್ಳುತ್ತಿದ್ದಾರೆ, ಅದು ಇದು ಏನೆಲ್ಲವನ್ನು ಸುಧಾರಿಸಿ ಸೇವೆ ಮಾಡುವುವೆಂದು ನಂಬಿಸಿದವರು ಹರಿದು ಕೊಳ್ಳುತ್ತಿದ್ದಾರೆ. ನನ್ನೂರು ಒಂದು ರೀತಿಯ ಶೋಷಣೆಯ ನೆಲವೀಡಾಗಿ ಕನಿಕರ, ಅಸಹಾಯಕ ಸ್ಥಿತಿಯ ಗೂಡಾಗಿದೆ, ನಿಗೂಢವಾಗಿದೆ. ನನ್ನೂರಿನ ಭವಿಷ್ಯ ಇಷ್ಟೊಂದು ಅಂಧಕಾರ ಕತ್ತಲಮಯವಾಗಿದ್ದರೂ ಮತ್ತೊಂದು ಕಡೆ ಉಜ್ವಲ ಪ್ರಗತಿ ತರುವ ಭರವಸೆಯ ಆಶ್ವಾಸನೆಗಳ ಸುರಿಮಳೆಯೇ ಕೇಳಿಬರುತ್ತಿವೆ. ಇವನ್ನು ನಂಬದಿರಲಾದೀತೇ ?

ದೇವರು - ದೆವ್ವ ಮತ್ತು ನನ್ನೂರು ಎಷ್ಟೊಂದು ಬದಲಾಗಿವೆ, ಬದಲಾಗಲು ಹವಣಿಸುತ್ತಿವೆ ಎಂಬುದನ್ನು ಗಣನೆ ಮಾಡಲು ಹೊರಟವನೂ ಸಹ ತಾನೇ ಬದಲಾಗಿ ಹೌಹಾರಿ ಕೇಳುತ್ತಿದ್ದಾನೆ – ಇದೆಲ್ಲ ಏನು ? ಒಂದೊಂದು ನಿಟ್ಟಿನಿಂದ ಅಬ್ಬರದಲ್ಲಿರುವ ತಮ್ಮ ತಮ್ಮ ಅಸ್ತಿತ್ವವನ್ನು ಅಲುಗಾಡದಂತೆ ನಿಲ್ಲಿಸಿರುವ ದೇವರು ದೆವ್ವ ಮತ್ತು ನನ್ನೂರು ಪ್ರಸಿದ್ಧಿಯ ಸಿದ್ದಿಯ ಸ್ಥಳವೆಂದು ಬಹುಮಾನಕ್ಕೆ ಆಯ್ಕೆಯಾದದ್ದು ಜಗತ್ತಿನ ಅಚ್ಚರಿಗಳಲ್ಲಿಯೇ ಇತ್ತೀಚಿನ ಚಮತ್ಕಾರ.

ನಮ್ಮ ಪ್ರಜಾಪ್ರಭುತ್ವದ ಸಂವಿಧಾನ ವೈಚಾರಿಕ ವೈಜ್ಞಾನಿಕ ಹಂಬಲ ಹೊಂದಿದ್ದರೂ ದೇವರು, ದೆವ್ವಗಳೆಂಬ ಮೂಢ ನಂಬಿಕೆ, ಮೂಢ ಆಚಾರ ತಡೆಯುವ ಯಾವುದೇ ಕಾರ್ಯ ಯಶಸ್ಸು ಸಾಧಿಸದಂತೆ ತಡೆಯುವ ಪರಿಸರ ನಮ್ಮ ಊರಲ್ಲಿ ಇರುವುದಕ್ಕೆ ಕಾರಣ, ವಿನಾಕಾರಣ ರಾಜಕಾರಣ ಎಂಬುದೇ ವಿರೋಧಿಗಳ ಅಂಬೋಣ. ವೈಜ್ಞಾನಿಕ, ವೈಚಾರಿಕ ಸ್ಥಿತಿಗತಿಯೊಳಗೆ ಒಂದಿಷ್ಟು ಎದುರು ಮುಖ ಮಾಡಿಕೊಳ್ಳಲು ತಯಾರಿಲ್ಲದ ಜನ, ತಮ್ಮ ಮೂಲ ನಂಬಿಕೆಯನ್ನು ಕಿಂಚಿತ್ ಬದಲಾಯಿಸಿಕೊಳ್ಳಲು ಎಂದಿಗೂ ಸಾಧ್ಯವಿಲ್ಲ. ನನ್ನೂರಿನ ಜನರಿಗೆ ದಟ್ಟವಾದ ಅಂಧಕಾರ ಕಣ್ಣಂಚಿನಲ್ಲಿ ತುಂಬಿಕೊಂಡಿದೆ. ಈ ಮಾತುಗಳು ನನ್ನೂರನ್ನೇ ಧ್ಯಾನಿಸಿಕೊಂಡು ಹೇಳಿದಂತಿವೆ : ''ದೇವರು ದೆವ್ವಗಳ ಮಧ್ಯೆ ನನ್ನೂರು ಅನಾಥ ಪ್ರಜ್ಞೆಯ ವಾರಸುದಾರ ಆಗಲು ಎಲ್ಲ ವ್ಯವಸ್ಥೆ ಮಾಡಿಕೊಂಡಿದೆ. ಜನರ ಜನರ ನಡುವೆ ಎದ್ದಿರುವ ಅಪನಂಬಿಕೆ ಅವಿಶ್ವಾಸಕ್ಕೆ ಪೂರಕವಾಗಿ ದೇವರು - ದೆವ್ವಗಳು ಆಗಾಗ ಎದ್ದು ಕುಣಿಯುತ್ತಿವೆ.''

'ಬದುಕು' ದಿಕ್ಕೆಟ್ಟಿದೆ ; ಭಯಾನಕ, ಭಯಂಕರ, ತಾಮಸ ಉತ್ತುಂಗಗೊಂಡಿದೆ. ಎಲ್ಲ ಮೃಗೀಯ ಲಕ್ಷಣಗಳನ್ನೂ ಮೈಗೂಡಿಸಿಕೊಂಡಿರುವ ನನ್ನೂರಿನ ಜನಕ್ಕೆ ಇನ್ನು ಹಾಳುಗೆಡುವ ಯಾವ ತಾನವೂ ಉಳಿದಿಲ್ಲ. ನನ್ನೂರು, ದೇವರು, ದೆವ್ವ ಪಕ್ಷಾಂತರವಾಗುವ ಕಾಲ ಯಾವುದು ? ಇವನ್ನೆಲ್ಲಾ ನೋಡುತ್ತಾ ಕಾಲ ಸ್ತಬ್ಧಗೊಂಡು ನಿಂತಿದೆ.

ಸ. ರಾ. ಸುಳಕೂಡೆ
೧೩೮೯, ರಾಮತೀರ್ಥನಗರ, ಬೆಳಗಾವಿ - ೫೯೦ ೦೧೫




ಸರಳವೂ ಸುಂದರವೂ ಆದ ಗೋವಿನ ಗೀತ ಅನೇಕ ರೀತಿಯ ಚಿಂತನೆಗಳಿಗೆ ದಾರಿ ಮಾಡಿಕೊಡಬಲ್ಲದೆಂಬುದು ಶ್ರೀ ಎಸ್. ಎಸ್. ಹಿರೇಮಠ ಅವರ ಲೇಖನದಿಂದ ಸ್ಪಷ್ಟ. ಸ್ವಂತ ಜೀವವನ್ನು ಕಾಪಾಡಿಕೊಳ್ಳುವುದು ಪ್ರತಿಯೊಂದು ಪ್ರಾಣಿಯ ಪ್ರಕೃತಿ ಧರ್ಮ. ಇದರಲ್ಲಿ ಕೆಲವು ಬಗೆಯ ಭೇದಗಳಿವೆ. ಮೊದಲನೆಯದು, ಜೀವಿ ತನ್ನ ಸ್ವಂತ ದೈಹಿಕ ಅವಶ್ಯಕತೆಗಳಾದ ಆಹಾರ, ನೀರು, ವಸತಿ ಮುಂತಾದವುಗಳನ್ನು ಒದಗಿಸಿಕೊಳ್ಳುವುದು. ಎರಡನೆಯದು, ತನ್ನ ಸಂತತಿಯನ್ನು ಪೋಷಿಸುವುದು. ಮೂರನೆಯದು, ತನ್ನನ್ನು ಮತ್ತು ತನ್ನ ಸಂತತಿಯನ್ನು ಪ್ರಾಣಾಂತಿಕ ಅಪಾಯಗಳಿಂದ ರಕ್ಷಿಸಿಕೊಳ್ಳುವುದು. ಪ್ರಕೃತಿಯ ನಿಯಮ (ಅಥವಾ ಧರ್ಮ) ಇಷ್ಟೇ ಎಂದು ಹೇಳಿದರೆ ತಪ್ಪಾಗಲಾರದು. ಗೋವಿನ ಗೀತೆಯಲ್ಲಿ ಹಸು ತನ್ನ ಕರುವಿಗೆ ಹಾಲುಣಿಸಲು ಬಯಸುವುದು, ಹುಲಿ ಹಸುವನ್ನು ಹಿಡಿದು ತಿನ್ನುವುದು, ಕರು ಹಸುವಿಗೆ ಪುನಃ ಹುಲಿಯ ಬಳಿಗೆ ಹೋಗದಿರಲು ಹೇಳುವುದು – ಇವೆಲ್ಲ ಪ್ರಕೃತಿಧರ್ಮ. ತನ್ನ ಜೀವಕ್ಕೆ ಕಂಟಕವಾಗಿರುವ ಹುಲಿಯನ್ನು ಹಸು ದುಷ್ಟ, ಖೂಳ... ಎಂದು ಕರೆಯುವುದೂ ಪ್ರಕೃತಿಧರ್ಮವೇ. ಆದರೆ ಹುಲಿ ಹಸುವಿನ ಪ್ರಾರ್ಥನೆಯನ್ನು ಮನ್ನಿಸಿ, ದೊಡ್ಡಿಗೆ ಹೋಗಿ ಕರುವಿಗೆ ಹಾಲು ಕೊಟ್ಟು ಹಿಂತಿರುಗಿ ಬರಲು ಅದಕ್ಕೆ ಅನುಮತಿ ಕೊಟ್ಟದ್ದು ಪ್ರಕೃತಿಧರ್ಮಕ್ಕೆ ವಿರುದ್ಧ. ಹಾಗೆಯೇ ಪುಣ್ಯಕೋಟಿ ಹುಲಿಯ ಬಳಿಗೆ ಹಿಂತಿರುಗಿದುದು, ಅರ್ಬುದ ಹಸುವನ್ನು ತಿನ್ನದೇ ಬೆಟ್ಟದ ಮೇಲಿಂದ ಜಿಗಿದು ಪ್ರಾಣ ತ್ಯಾಗ ಮಾಡಿದುದೂ ಪ್ರಕೃತಿಧರ್ಮಕ್ಕೆ ವಿರುದ್ಧ. ಆದರೂ ಸಹ ಕವಿ ಎತ್ತಿ ಹಿಡಿಯುವುದು, ಶ್ಲಾಘಿಸುವುದು ಪುಣ್ಯಕೋಟಿ ಮತ್ತು ಅರ್ಬುದರ ಪ್ರಕೃತಿ ಧರ್ಮಕ್ಕೆ ವಿರುದ್ಧವಾದ ನಡವಳಿಕೆಯನ್ನು. ಕವಿಗೆ ಮುಖ್ಯವಾದುದು ಮಾನವ ಧರ್ಮ, ಪ್ರಕೃತಿಧರ್ಮವಲ್ಲ. ಸತ್ಯ, ಅಹಿಂಸೆ ಮುಂತಾದವುಗಳು ಮನುಷ್ಯರು ಸೃಷ್ಟಿಸಿಕೊಂಡಿರುವ ಧರ್ಮಗಳು. ಪ್ರಕೃತಿಯಲ್ಲಿ ಇಂತಹ ತತ್ತ್ವಗಳಾವುವೂ ಇಲ್ಲ. ಮನುಷ್ಯರನ್ನುಳಿದು ಬೇರೆ ಯಾವುದೇ ಪ್ರಾಣಿಪ್ರಪಂಚದಲ್ಲಿ ಇವು ಇಲ್ಲ. ಪ್ರಕೃತಿ ಧರ್ಮಕ್ಕೆ ಹೊರತಾಗಿ ಮಾನವ ಸೃಷ್ಟಿಸಿಕೊಂಡ ಸತ್ಯ, ಅಹಿಂಸೆ, ಜಾತಿ, ಮತ, ದೇವರು, ಮೇಲ್ವರ್ಗ, ಕೆಳವರ್ಗ, (ಅ)ಸಮಾನತೆ ಇತ್ಯಾದಿಗಳ ಸಮಷ್ಟಿಯೇ ಮಾನವಧರ್ಮ.

ಗೋವಿನ ಗೀತೆಯಲ್ಲಿ ಕವಿ ವರ್ಣಿಸುತ್ತಿರುವುದು ಪ್ರಕೃತಿಧರ್ಮ ಮತ್ತು ಮಾನವಧರ್ಮಗಳ ಸಂಘರ್ಷಣೆ ಮತ್ತು ಮಾನವಧರ್ಮದ ಜಯ. ಹುಲಿ ಮತ್ತು ಹಸು ಕೇವಲ ಸಂಕೇತಗಳು. ಸಂಘಜೀವಿಯಾದ ಮನುಷ್ಯ ತನ್ನ ಉಳಿವಿಗಾಗಿ ಮತ್ತು ಏಳಿಗೆಗಾಗಿ ಸಾವಿರಾರು ವರ್ಷಗಳ ಅನುಭವದಿಂದ ನಿರ್ಮಿಸಿಕೊಂಡ ನಿಯಮಗಳೇ ಮಾನವಧರ್ಮ. ಸಮಾಜದಿಂದ ದೂರವಿದ್ದು, ಕಾಡಿನಲ್ಲೋ, ಬೆಟ್ಟದಲ್ಲೋ ಏಕಾಂತ ಜೀವನವನ್ನು ನಡೆಸುವವರಿಗೆ ಮಾನವಧರ್ಮದ ಅವಶ್ಯಕತೆ ಇರದು. ಆದರೆ ಸಮಾಜದಲ್ಲಿ ಜೀವನ ನಡೆಸುವವರು ಮಾನವಧರ್ಮವನ್ನು ಗೌರವಿಸಬೇಕಾಗುತ್ತದೆ.

ಮೇಲೆ ಹೇಳಿದ ಪ್ರಕೃತಿಧರ್ಮ (ಅಥವಾ ನಿಯಮ) ಪ್ರಾಣಿ ಜಗತ್ತಿಗೆ ಸಂಬಂಧಿಸಿದುದು. ಇದು ಮಾನವನಿಗೂ ಅನ್ವಯಿಸುತ್ತದೆ. ಆನುವಂಶಿಕವಾಗಿ ಬಂದಿರುವ ಈ ಧರ್ಮ ಸ್ವಯಂ ಪ್ರೇರಣೆ ಇಲ್ಲದೆ ವ್ಯಕ್ತವಾಗುತ್ತದೆ. ಆದರೆ ಮಾನವಧರ್ಮ ಆನುವಂಶಿಕವಾಗಿ ಬರುವುದಿಲ್ಲ; ಇದನ್ನು ಪ್ರಯತ್ನಪೂರ್ವಕವಾಗಿ ಅರಿತು ರೂಢಿಸಿಕೊಳ್ಳಬೇಕು. ಪ್ರಕೃತಿಧರ್ಮಕ್ಕೂ ಮತ್ತು ಮಾನವಧರ್ಮಕ್ಕೂ ಸಂಘರ್ಷ ಸರ್ವೇಸಾಮಾನ್ಯ. ಇದು ಸ್ವಹಿತ ಮತ್ತು ಸಮಾಜದ ಹಿತಗಳ ತಿಕ್ಕಾಟದಿಂದ ಬೇರೆಯಲ್ಲ. ಅನೇಕ ವೇಳೆ ಇಂತಹ ಘರ್ಷಣೆ ದೂರದೃಷ್ಟಿಯ ಅಭಾವದಿಂದ ಮೂಡುತ್ತದೆ. ಆದರೆ ಕೆಲವು ವೇಳೆ ಈ ಘರ್ಷಣೆ ಸ್ವಜ. ಆಗ ವ್ಯಕ್ತಿ ಅಥವಾ ಸಮಾಜ ಹಾನಿಯನ್ನು ಅನುಭವಿಸಬೇಕಾಗುತ್ತದೆ.

ಮಾನವಧರ್ಮವನ್ನು ಸ್ಥಾಪಿಸಲು ಸಮಾಜ ಅನೇಕ ವಿಧಾನಗಳನ್ನು ರೂಪಿಸಿಕೊಂಡಿದೆ. ಇವುಗಳಲ್ಲಿ ಮುಖ್ಯವಾದುದು ದೇವರು ಮತ್ತು ಧರ್ಮ ಅಥವಾ ಮತ. ದೇವರ ಹೆಸರಿನಲ್ಲಿ ಮಾನವಧರ್ಮದ ಸ್ಥಾಪನೆ ಅನಾದಿಕಾಲದಿಂದಲೂ ನಡೆದುಬಂದಿದೆ. ದೇವರು ಹೀಗೆ ಹೇಳಿದ್ದಾನೆ, ಹಾಗೆ ಹೇಳಿದ್ದಾನೆ, ಅದರಂತೆ ನಡೆಯದಿದ್ದರೆ ಈ ಲೋಕದಲ್ಲಿಯೋ ಅಥವಾ ಪರಲೋಕದಲ್ಲಿಯೋ ದೇವರು ನಮ್ಮನ್ನು ದಂಡಿಸುವನು. ಆದ್ದರಿಂದ ಮಾನವಧರ್ಮವನ್ನು ಪಾಲಿಸಿ. ಹಾಗೆಯೇ ರಾಜರು (ಅಥವಾ ಸರ್ಕಾರ) ಅನೇಕ ಕಾನೂನುಗಳನ್ನು ಚಲಾವಣೆಗೆ ತರುವರು. ಕಾನೂನನ್ನು ಪಾಲಿಸದಿದ್ದರೆ ಶಿಕ್ಷೆಗೆ ಗುರಿಯಾಗುವ ಹೆದರಿಕೆ ಸದಾ ಇರುತ್ತದೆ. ಅನೇಕ ಬಾರಿ ರಾಜ, ಸರ್ಕಾರ, ಮತ, ಧರ್ಮ ಎಲ್ಲವೂ ಒಂದೇ ಆಗಿರಬಹುದು ಅಥವಾ ಒಂದಕ್ಕೊಂದು ಪೂರಕವಾಗಿರಬಹುದು. ಮೂರನೆಯ ಮತ್ತು ಅತ್ಯುತ್ತಮವಾದ ವಿಧಾನ ಶಿಕ್ಷಣ ಅಥವಾ ವಿದ್ಯಾಭ್ಯಾಸ. ಸಮಾಜ ಸುಧಾರಕರು ಮತ್ತು ತಾಯಿ ತಂದೆಯರು ಜನಗಳಿಗೆ ಮತ್ತು ಮಕ್ಕಳಿಗೆ ತಪ್ಪು-ಸರಿ, ಹಿತ-ಅಹಿತ, ನ್ಯಾಯ-ಅನ್ಯಾಯ ಮುಂತಾದ ವಿಷಯಗಳನ್ನು ಬೋಧಿಸುವರು. ಚಿಕ್ಕಂದಿನಿಂದಲೇ ರೂಢಿಸಿಕೊಂಡ ಇಂತಹ ಮೌಲ್ಯಗಳು ಅನೇಕ ಬಾರಿ ಆನುವಂಶಿಕ ಗುಣಗಳಂತೆಯೇ ಕಾಣುತ್ತವೆ. ಬಹುಶಃ ಇದನ್ನೇ ಸಂಸ್ಕಾರ ಎಂದು ಕರೆಯುವರೇನೋ! ಕೆಲವು ವೇಳೆ ಸಮಾಜದ ಕೆಲವು ವ್ಯಕ್ತಿಗಳು ಸ್ವಂತ ಅನುಭವ ಮತ್ತು ಬುದ್ಧಿಶಕ್ತಿಗಳಿಂದ ಚಿಂತಿಸಿ ಯಾವುದು ''ಸರಿ'' ಎಂಬುದನ್ನು ಕಂಡುಕೊಂಡು ಅದನ್ನು ಇತರರಿಗೂ ಬೋಧಿಸುವರು. ಇಲ್ಲವೇ ಸಮಾಜದ ಮೇಲೆ ಬಲವಂತವಾಗಿ ಹೇರುವರು. ಇದರಿಂದ ಒಳಿತೂ ಆಗಬಹುದು, ಕೆಡಕೂ ಆಗಬಹುದು. ಶಿಕ್ಷಿಸುವ ಅಧಿಕಾರವುಳ್ಳ ದೇವರು ಮತ್ತು ರಾಜರಿಗೆ (ಅಥವಾ ಸರ್ಕಾರಕ್ಕೆ) ರಕ್ಷಿಸುವ ಬಲವೂ ಇರುತ್ತದೆ. ದಂಡಿಸುವವರು ವರವನ್ನೂ ಕೊಡಬಲ್ಲರು. ಮಾನವಧರ್ಮ ರೂಢಿಗೆ ಬರುವುದು ಹೀಗೆ. ಇದರ ಮೂಲ ಉದ್ದೇಶ ಸಮಾಜದ ಹಿತ.

ಜೈವಿಕ ಪ್ರಪಂಚದ ನಿಯಮಗಳು ಹೀಗಾದರೆ ಭೌತಿಕ ಪ್ರಪಂಚದ ನಿಯಮಗಳು ಬೇರೆ ಜಾತಿಯವು. ಇಲ್ಲಿ ಒಳ್ಳೆಯದು - ಕೆಟ್ಟದ್ದು, ಉಳಿವು - ಅಳಿವು, ಸ್ವಾರ್ಥ - ಪರಾರ್ಥ ಮುಂತಾದ ಭೇದಭಾವಗಳಿಲ್ಲ. ಗುರುತ್ವಾಕರ್ಷಣ ನಿಯಮ ಎಲ್ಲರಿಗೂ ಎಲ್ಲೆಡೆಯೂ ಒಂದೇ. ಮೇಲಿನಿಂದ ಕೆಳಗೆ ಬೀಳುವ ವ್ಯಕ್ತಿ ಒಳ್ಳೆಯವನಿರಲಿ ಕೆಟ್ಟವನಿರಲಿ ಆಗುವ ಅಪಾಯ ಒಂದೇ. ಚಾಕುವಿನಿಂದ ಹಣ್ಣನ್ನಾದರೂ ಹೆಚ್ಚಬಹುದು ಇಲ್ಲವೇ ಕತ್ತನ್ನಾದರೂ ಕುಯ್ಯಬಹುದು – ಚಾಕುವಿಗೆ ಏನೂ ತೊಂದರೆ ಇಲ್ಲ. ರಾಸಾಯನಿಕ ಕ್ರಿಯೆಗಳು, ಪರಮಾಣು ಶಕ್ತಿ, ಮಳೆ, ಬೆಳೆ ಎಲ್ಲವೂ ಭೌತಿಕ ಪ್ರಪಂಚದ ನಿಯಮಗಳಿಗೆ ಅನುಸಾರವಾಗಿ ನಡೆಯುವುವು. ಮಾನವ ತನ್ನ ಬುದ್ಧಿ ಸಾಮರ್ಥ್ಯ, ವೀಕ್ಷಣೆ ಮತ್ತು ಪ್ರಯೋಗಗಳಿಂದ ಈ ನಿಯಮಗಳನ್ನು ತಿಳಿಯಬಹುದು ಮತ್ತು ಅವುಗಳನ್ನು ತನ್ನ ಅನುಕೂಲಕ್ಕೆ (ಅಥವಾ ವಿನಾಶಕ್ಕೆ) ಬಳಸಬಹುದು. ಈ ರೀತಿ ಮಾನವ ಭೌತಿಕ ಪ್ರಪಂಚದ ಅನೇಕ ನಿಯಮಗಳನ್ನು ಅರಿತಿರುವನು. ತಿಳಿಯದೇ ಇರುವ ವಿಷಯಗಳೂ, ನಿಯಮಗಳೂ ಸಾಕಷ್ಟಿವೆ. ನಿಯಮಗಳನ್ನು ಬದಲಾಯಿಸುವ ಶಕ್ತಿ ಯಾರಿಗೂ ಇಲ್ಲ. ಆದರೆ ತಪ್ಪು ಗ್ರಹಿಕೆಯನ್ನು ಸರಿಪಡಿಸಲು ಅವಕಾಶವುಂಟು. ಇವುಗಳನ್ನು ತೆರೆದ ಮನಸ್ಸಿನಿಂದ, ಪೂರ್ವಾಗ್ರಹ ಪೀಡಿತರಾಗದೆ ಪರಿಶೀಲಿಸಲು ಮತ್ತು ಚರ್ಚಿಸಲು ವಿಜ್ಞಾನದಲ್ಲಿ ಅವಕಾಶವುಂಟು. ಆದರೆ ಮಾನವಧರ್ಮ ಹೀಗಲ್ಲ. ಇದನ್ನು ಪಾಲಿಸುವವರಿಗಿಂತ ಬೋಧಿಸುವವರೇ ಹೆಚ್ಚೆನ್ನುವುದು ಅತಿಶಯೋಕ್ತಿಯಾದರೂ ವಾಸ್ತವದಿಂದ ದೂರವಲ್ಲ. ಮಾನವಧರ್ಮ ದೇಶ ಕಾಲಕ್ಕೆ ತಕ್ಕಂತೆ ಬದಲಾಗಬಹುದು. ಉದಾಹರಣೆಗೆ ''...ನ ಬ್ರೂಯಾತ್ ಸತ್ಯಮಪ್ರಿಯಂ'', ''ಅಶ್ವತ್ಥಾಮೋ ಹತಃ ಕುಂಜರಃ'' ಇತ್ಯಾದಿ. ಗುರುಹಿರಿಯರನ್ನು ಯುದ್ಧದಲ್ಲಿ ಕೊಲ್ಲುವುದು ಧರ್ಮವೇ ಎಂಬ ಅರ್ಜುನನ ಪ್ರಶ್ನೆಗೆ ಶ್ರೀ ಕೃಷ್ಣ ನೇರವಾದ ಉತ್ತರವನ್ನು ಕೊಟ್ಟಿಲ್ಲ. ಮಾನವಧರ್ಮಕ್ಕೆ ನಾನಾ ಮುಖಗಳಿರುತ್ತವೆ. ಭೀಷ್ಮ, ದ್ರೋಣ ಮುಂತಾದ ಹಿರಿಯರು ''ಉಪ್ಪುಂಡ ಋಣ''ಕ್ಕಾಗಿ ದುರ್ಯೋಧನನ ಅಸಭ್ಯ ಮತ್ತು ಅಧಾರ್ಮಿಕ ನಡವಳಿಕೆಯನ್ನು ನೋಡಿಯೂ ನೋಡದವರಂತಿದ್ದರು. ಇಲ್ಲದಿದ್ದಲ್ಲಿ ಮಹಾಭಾರತದ ಯುದ್ಧ ತಪ್ಪಿಸಬಹುದಿತ್ತೇನೋ. ಅವರ ಧರ್ಮ ಸಮಾಜಕ್ಕೆ ಒಳಿತನ್ನು ಮಾಡಿತೇ? ಧರ್ಮ ಅಧರ್ಮಗಳ ಇತ್ಯರ್ಥ ಸುಲಭವಲ್ಲ.

ಭೌತಿಕ ನಿಯಮಗಳು ಎಲ್ಲರಿಗೂ ಒಂದೇ ರೀತಿ ಅನ್ವಯವಾಗುತ್ತವೆ. ಆದರೆ ಮಾನವಧರ್ಮ ಹಾಗಲ್ಲ. ನಿಯಮಗಳನ್ನು ಉಲ್ಲಂಘಿಸಿದ ಪ್ರಾಯಶ್ಚಿತ್ತಕ್ಕಾಗಿ ದೇವರಿಗೋ,

**ಎಚ್. ಆರ್. ಪ್ರಭಾಕರ**

ಪೂಜಾರಿಗೋ, ಸರ್ಕಾರಕ್ಕೋ ಅಥವಾ ಸರ್ಕಾರಿ ಅಧಿಕಾರಿಗಳಿಗೋ (ಅಥವಾ ಎಲ್ಲರಿಗೂ) ಲಂಚವನ್ನು ಕೊಟ್ಟಲ್ಲಿ ತಪ್ಪುಗಳೆಲ್ಲ ಸರಿಯೆಂದು ಪರಿಗಣಿಸಲ್ಪಡುವುವು. ಆದರೆ ಭೌತಿಕ ಜಗತ್ತಿನಲ್ಲಿ ಇಂತಹ ಚೇಷ್ಟೆಗಳಿಗೆ ಅವಕಾಶವಿಲ್ಲ.

ಸಮಾಜಕ್ಕೆ ನಿರ್ದಿಷ್ಟ ರೂಪರೇಖೆಗಳಿಲ್ಲ. ಒಂದರೊಳಗೊಂದು ಸಿಕ್ಕಿ ಗೋಜಿಹೋದ ದಾರದ ಉಂಡೆಯಂತೆ ನಮ್ಮ ಸಮಾಜ. ಒಂದೇ ವ್ಯಕ್ತಿ ಏಕಕಾಲದಲ್ಲಿ ಅನೇಕ ಸಮಾಜಗಳಿಗೆ ಸೇರಿರಬಹುದು. ಈ ಎಲ್ಲ ಸಮಾಜಗಳ ಧರ್ಮಗಳೂ ಒಂದೇ ಆಗಿರಬೇಕೆಂದಿಲ್ಲ. ಉದಾಹರಣೆಗೆ, ಅಹಿಂಸೆಯನ್ನು ಬೋಧಿಸುವ ಜೈನಮತದ ಅನುಯಾಯಿಗಳು ದೇಶದ ಸೈನ್ಯವನ್ನು ಸೇರಬಹುದೇ ? ಭಾಷೆಗಳ ಆಧಾರದ ಮೇಲೆ ನಮ್ಮ ದೇಶದ ರಾಜ್ಯಗಳನ್ನು ವಿಂಗಡಿಸಲಾಗಿದೆ. ಇದಕ್ಕೆ ಬದಲಾಗಿ ಒಂದು ನದಿಯ ಆಯಕಟ್ಟಿನ ಪ್ರದೇಶವನ್ನೆಲ್ಲ ಒಂದೇ ರಾಜ್ಯವನ್ನಾಗಿ ಮಾಡಿದರೆ ಹೇಗೆ ? ಒಬ್ಬ ವಿಜ್ಞಾನಿ, ತತ್ತ್ವಶಾಸ್ತ್ರ ಪರಿಣತ ಅಥವಾ ಸನ್ಯಾಸಿ ಮತಾಂಧನಾಗಿರಬಹುದೆ? ಅನೇಕ ವಿರೋಧಾಭಾಸಗಳಿರುವ ಸಮಾಜದಲ್ಲಿ ಮಾನವಧರ್ಮ ಯಾವುದು ? ಹಿಂದಿನ ಧರ್ಮ ಇಂದಿಗೂ, ಇಂದಿನ ಧರ್ಮ ನಾಳೆಗೂ ಸರಿಯೆ ?

ನಮಗೆ ತಿಳಿದಂತೆ ಮಾನವಧರ್ಮದ ರೂವಾರಿಗಳು ಮಾನವರೆ. ಅಂತಹವರು ನಿಷ್ಪಕ್ಷಪಾತಿಗಳೇ ? ಅವರು ತಮಗೆ ಮತ್ತು ತಮ್ಮವರಿಗೆ ಅನುಕೂಲವಾಗುವಂತೆ ಧರ್ಮವನ್ನು ರೂಪಿಸರೆ ? ಒಂದು ಕಾಲದಲ್ಲಿ ನಮ್ಮ ದೇಶದಲ್ಲಿ ಕೆಲವು ವರ್ಗದವರು ವಿದ್ಯೆಗೆ ಅರ್ಹರಾಗಿರಲಿಲ್ಲ. ನಮ್ಮ ಇಂದಿನ ಉದಾರೀಕರಣ ಯುಗದಲ್ಲಿ ಐಶ್ವರ್ಯವಂತರಿಗೆ ಮಾತ್ರ ವಿದ್ಯೆ ಎಂಬ ಪರಿಸ್ಥಿತಿ ಬರುತ್ತಿದೆ. ವಿಧ್ವಂಸಕ ಅಣ್ವಸ್ತ್ರಗಳನ್ನು ಕೆಲವು ಬಲಶಾಲೀ ರಾಷ್ಟ್ರಗಳು ಉತ್ಪಾದಿಸಬಹುದು. ಆದರೆ ಉಳಿದ ರಾಷ್ಟ್ರಗಳಿಗೆ ಇವು ನಿಷಿದ್ಧ. ಪ್ರಪಂಚದ ಐದು ರಾಷ್ಟ್ರಗಳು ಒಂದುಗೂಡಿ ಏನನ್ನಾದರೂ ಮಾಡಬಹುದು. ಅಲ್ಲಿಯೂ ಸಹ ಬಲಿಷ್ಠ ಶಕ್ತಿ ಉಳಿದವುಗಳನ್ನು ಕೊಳ್ಳುವ ಮತ್ತು ಹೆದರಿಸುವ ಆಟ ನಡೆಯುತ್ತಲೇ ಇದೆ. ಒಟ್ಟಿನಲ್ಲಿ ಮಾನವ ಧರ್ಮಕ್ಕೆ ಸ್ಥಿರತೆ ಇಲ್ಲ. ಪ್ರಬಲರು ಅದನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಬದಲಾಯಿಸಬಹುದು. ಅನುಕೂಲ ಸಿಂಧುಗಳು ಧರ್ಮವನ್ನು ತಮ್ಮ ಮೂಗಿನ ನೇರಕ್ಕೆ ಅರ್ಥೈಸಬಹುದು. ಆದರೆ ಪ್ರಕೃತಿಧರ್ಮ ಹಾಗಲ್ಲ. ಅದು ಅವಿನಾಶಿ, ಯಾರ ಮಾತನ್ನೂ ಕೇಳುವುದಿಲ್ಲ. ಅದನ್ನು ಅರ್ಥಮಾಡಿಕೊಂಡು ಲಾಭವನ್ನು ಪಡೆಯಬಹುದು. ಪ್ರಕೃತಿಧರ್ಮವನ್ನು ಅರ್ಥಮಾಡಿ ಕೊಳ್ಳುವುದೇ ವಿಜ್ಞಾನದ ಗುರಿ. ಇಂದಿನ ವಿಜ್ಞಾನ ಪರಮಾಣುವನ್ನು ಭೇದಿಸಿ ಅದರ ಅಂತರ್ರಚನೆಯನ್ನು ಕಂಡುಹಿಡಿದಿದೆ. ಕೋಟ್ಯನುಕೋಟಿ ಮೈಲಿಗಳ ದೂರದಲ್ಲಿರುವ ನಕ್ಷತ್ರಗಳ ಸ್ವರೂಪವನ್ನು ಕಂಡು ಕೊಂಡಿದೆ. ಜೈವಿಕ ತಂತ್ರಜ್ಞಾನ ಹೊಸರೀತಿಯ ಜೀವಿಗಳನ್ನು ಸೃಷ್ಟಿಸಲು ಹೊರಟಿದೆ. ಹೀಗೆ ಅರಿತ ಪ್ರಕೃತಿ ನಿಯಮಗಳ ಸಹಾಯದಿಂದ ಮಾನವರ ಜೀವನ ಮಟ್ಟ ಉತ್ತಮಗೊಂಡಿದೆ (ಅಂದರೆ ಹೆಚ್ಚು ದೈಹಿಕ ಪರಿಶ್ರಮ ಇಲ್ಲದೆ ಜೀವನದ ಅವಶ್ಯಕತೆಗಳನ್ನು ಪೂರೈಸಿಕೊಳ್ಳ ಬಹುದು, ಆರೋಗ್ಯವಂತರಾಗಿ ಹೆಚ್ಚುಕಾಲ ಬದುಕ ಬಹುದು). ಆದರೂ ನಾವು ಪ್ರಕೃತಿ ನಿಯಮಗಳನ್ನು ಪೂರ್ಣವಾಗಿ ಅರಿತಿದ್ದೇವೆ ಎಂದು ಹೇಳಲಾಗುವುದಿಲ್ಲ. ಉದಾಹರಣೆಗೆ, ಮುಂದಿನ ವರ್ಷ ಎಲ್ಲೆಲ್ಲಿ ಎಷ್ಟೆಷ್ಟು ಮಳೆ ಬೀಳುತ್ತದೆ ಎಂದು ನಿಖರವಾಗಿ ಹೇಳಲು ಸಾಧ್ಯವಿಲ್ಲ. ಆದರೆ ಮುಂದಿನ ವರ್ಷ ಸೂರ್ಯಗ್ರಹಣ ಎಲ್ಲೆಲ್ಲಿ, ಯಾವ ಸಮಯಗಳಲ್ಲಿ ಕಾಣಿಸುತ್ತದೆ ಎಂಬುದನ್ನು ಕರಾರುವಾಕ್ಕಾಗಿ ಹೇಳಬಹುದು. ಒಂದು ಬಟ್ಟಲು ನೀರಿಗೆ ಒಂದು ಹನಿ ಹಾಲನ್ನು ಹಾಕಿದರೆ ಐದು ನಿಮಿಷಗಳ ನಂತರ ಹಾಲಿನಲ್ಲಿದ್ದ ಯಾವ ಅಣು ಬಟ್ಟಲಿನ ಯಾವ ಭಾಗದಲ್ಲಿದೆ ಎಂದು ಹೇಳಲು ಅಸಾಧ್ಯ (ಒಂದು ಅಣುವನ್ನು ಗುರುತಿಸಿ ಹಿಂಬಾಲಿಸುವುದೂ ಸಾಧ್ಯವಿಲ್ಲ). ಆದರೆ ಬಟ್ಟಲಿನ ಯಾವ ಭಾಗದಲ್ಲಿ ಹಾಲಿನ ಎಷ್ಟು ಅಣುಗಳಿರಬಹುದು ಎಂದು ಅಂದಾಜು ಮಾಡಬಹುದು. ಮತ್ತೊಂದು ಉದಾಹರಣೆ: ಒಂದು ಪರಮಾಣುವಿನಲ್ಲಿ ಅನೇಕ ಎಲೆಕ್ಟ್ರಾನ್‌ಗಳು ಇರುತ್ತವೆ. ಅವು ಪರಮಾಣು ಬೀಜದ ಸುತ್ತಲೂ ಸೂರ್ಯನ ಗ್ರಹಗಳಂತೆ ಸುತ್ತುತ್ತಿರುತ್ತವೆ ಎಂದು ನಮಗೆ ಶಾಲಾ ಕಾಲೇಜುಗಳಲ್ಲಿ ಬೋಧಿಸುತ್ತಾರೆ. ಆದರೆ ಒಂದು ಎಲೆಕ್ಟ್ರಾನ್ ಯಾವುದೇ ಕ್ಷಣದಲ್ಲಿ ಪರಮಾಣುವಿನಲ್ಲಿ ಎಲ್ಲಿ ಇರುತ್ತದೆ ಮತ್ತು ಎಷ್ಟು ವೇಗದಿಂದ ಸುತ್ತುತ್ತಿರುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ಈ ರೀತಿಯ ಅನಿರ್ದಿಷ್ಟತೆಗಳು ಕೆಲವು ಪ್ರಕೃತಿ ನಿಯಮಗಳ ಮೂಲ ಸ್ವರೂಪವೋ ಅಥವಾ ನಮ್ಮ ತಿಳುವಳಿಕೆಯ ಮಿತಿಯೋ ಹೇಳಲು ಕಷ್ಟ. ಆದರೆ ಇಲ್ಲಿ ಪ್ರಸ್ತುತವಾದ ವಿಷಯ – ಮಾನವಧರ್ಮದ ಅಸ್ಥಿರತೆಗೂ ಮತ್ತು ಪ್ರಕೃತಿ ಧರ್ಮದ ಅನಿರ್ದಿಷ್ಟತೆಗೂ ಏನಾದರೂ ಸಾಮ್ಯವಿದೆಯೇ ಎಂಬುದು. ಇದು ಮೇಲ್ನೋಟಕ್ಕೆ ಕಾಣುವಷ್ಟು ಅಸಂಬದ್ಧವಲ್ಲದಿರ ಬಹುದು. ಹವಾಮಾನ ಮುನ್ಸೂಚನೆ ಸುಲಭ ಸಾಧ್ಯವಲ್ಲ. ಇದಕ್ಕೆ ಕಾರಣ ಪ್ರಕೃತಿಯ ಅನೇಕ ಅಂಶಗಳು – ಸೂರ್ಯನಿಂದ ಬರುವ ಬಿಸಿಲು, ಸಮುದ್ರಗಳ ಉಷ್ಣಾಂಶ, ಧ್ರುವ ಪ್ರದೇಶಗಳಲ್ಲಿನ ಹಿಮ, ಭೂಗರ್ಭದ ಶಾಖ, ಇತ್ಯಾದಿ – ಒಂದನ್ನೊಂದು ಅವಲಂಬಿಸಿರುತ್ತವೆ ಮತ್ತು ಪರಿವರ್ತಿಸುತ್ತವೆ. ಇವುಗಳನ್ನೆಲ್ಲ ಗಣನೆಗೆ ತೆಗೆದುಕೊಂಡು ಸಮೀಕರಣಗಳನ್ನು ರಚಿಸಿ ಬಿಡಿಸುವುದು ಅಸಾಧ್ಯ. ಆದರೆ ಈಚೆಗೆ ಸೂಪರ್ ಕಂಪ್ಯೂಟರ್‌ಗಳ ಸಹಾಯದಿಂದ ಇಂತಹ ಕ್ಲಿಷ್ಟ ಸಮಸ್ಯೆಗಳಿಗೆ ಉತ್ತರವನ್ನು ಹುಡುಕುವ (ಅಷ್ಟೇ ಅಲ್ಲ, ಹವಾಮಾನವನ್ನು ನಿಯಂತ್ರಿಸುವ) ಪ್ರಯತ್ನಗಳು ನಡೆಯುತ್ತಿವೆ. ಷೇರು ಮಾರುಕಟ್ಟೆಯ ಏರಿಳಿತಗಳನ್ನು ಮುನ್ಸೂಚಿಸುವ ಪ್ರಯತ್ನಗಳೂ ಈ ದಿಸೆಯಲ್ಲೇ ಸಾಗುತ್ತಿವೆ. ಅನೇಕ ಅಂಶಗಳ ಸಂಕೀರ್ಣ ಪ್ರಭಾವಗಳಿಂದ ನಿಷ್ಕರ್ಷಿಸ ಲ್ಪಡುವ ವಿಷಯಗಳನ್ನು ಅರ್ಥ ಮಾಡಿಕೊಳ್ಳಲು ಕಂಪ್ಯೂಟರ್‌ಗಳು ಸಹಾಯ ಮಾಡುತ್ತಿವೆ. ಮಾನವ ಧರ್ಮವೂ ಹೀಗೆಯೇ ಏಕಿರಬಾರದು ? ಮೂಲ ಭೌತಿಕ ನಿಯಮಗಳಂತೆ ಮಾನವಧರ್ಮದ ಮೂಲ ನಿಯಮಗಳಾದ ಸತ್ಯ, ಅಹಿಂಸೆ, ಸಮಾನತೆ ಮುಂತಾದವು ಸರಳವಾದ ನಿಯಮಗಳೇ. ಆದರೆ ಅನೇಕ ಅಂಶಗಳು– ಉದಾಹರಣೆಗೆ ದುರಾಸೆ, ಹಸಿವು, ಅಧಿಕಾರ ಇತ್ಯಾದಿಗಳು ಸಂಕ್ಲಿಷ್ಟ ರೀತಿಯಲ್ಲಿ ಕಾರ್ಯರೂಪಕ್ಕೆ ಬಂದು ಮಾನವನ ವರ್ತನೆಯನ್ನು ಅರ್ಥಮಾಡಿ ಕೊಳ್ಳಲು ಸಾಧ್ಯವಾಗದಂತೆ ಮಾಡುತ್ತವೆ. ಭೌತಿಕ ಪ್ರಪಂಚದಲ್ಲಿ ಉಷ್ಣಾಂಶ, ವೇಗ, ಶಕ್ತಿ ಮುಂತಾದವು ಗಳನ್ನು ಅಳೆದು ಅಂಕಿಗಳ ರೂಪದಲ್ಲಿ ಕಂಪ್ಯೂಟರ್‌ಗೆ ಕೊಡಬಹುದು. ಆದರೆ ಮಾನವನ ವರ್ತನೆಯನ್ನು ನಿಯಂತ್ರಿಸುವ ಅಂಶಗಳನ್ನಾಗಲೀ, ನಿಯಮಗಳನ್ನಾಗಲೀ ಮಾಪನ ಮಾಡುವುದು ಹೇಗೆ ? ಕಂಪ್ಯೂಟರ್ ಇವುಗಳನ್ನು ಹೇಗೆ ಅರ್ಥಮಾಡಿ ಕೊಳ್ಳುತ್ತದೆ ? ಎಂದಾದರೊಂದು ದಿನ ಈ ಸಮಸ್ಯೆಗಳಿಗೆ ಉತ್ತರ ಸಿಗಬಹುದೇನೋ !

ಎಚ್. ಆರ್. ಪ್ರಭಾಕರ
೧೨೯, ಬ್ಲಾಕ್-೧೪, ಜೀವನ ಮಿತ್ರ ಕಾಲೋನಿ, ಫಸ್ಟ್ ಫೇಸ್
ಜೆ. ಪಿ. ನಗರ, ಬೆಂಗಳೂರು - ೫೬೦ ೦೭೮

## ಗಝಲ



ಎದುರು ಬಿರುಗಾಳಿಯಾಗಿ ನಿಂತೈತಿ
ಮತ್ತೆ ಬರಗಾಲ ತಿರುಗಿ ಬಂದೈತಿ

ಆತ್ಮಹತ್ಯೆಗೆ ಪ್ರೇರೇಪಿಸುವಷ್ಟು
ಸಾಲ ಹನುಮಂತ ಬಾಲದಂತೈತಿ

ಆಶೆ ಅನುರಾಗ ಕನಸುಗಳು ನುಂಗೊ
ಕಾಲ ಅತಳ ವಿತಳ ಪಾತಾಳದಂತೈತಿ

ಇಲ್ಲಿ ಹುಡುಕಾಟ ಕಣ್ಣಲಿ ನಿತ್ಯ
ಯಾವ ದಿಕ್ಕಲ್ಲಿ ಮೋಡ ಸಂತೈತಿ

ನೋವು ಬರಿ ನೋವು ತುಂಬಿದ ಬಾಳು
ಯಾರು ತಿಳಿದಾರೊ ಎಷ್ಟ ಕಂತೈತಿ

ನಂಬಲೆ ಬೇಕು ಆದೆ ಔಚಿತ್ಯ
ಜನರ ಸಂಬಂಧ ಪ್ರಾಣದಂತೈತಿ

ಪ್ರಕಾಶ ಸಿಂಗ ರಜಪೂತ
ವಿಜಾಪುರ

# ಚಕ್ರವ್ಯೂಹದ ನಡುವೆ...

ಡಾ॥ ಸಿ. ಎಸ್. ನಂಜುಂಡಯ್ಯ

ಅಂದು ಬೆಳಿಗ್ಗೆ ಬನಾರಸ್ ವಿಶ್ವವಿದ್ಯಾನಿಲಯದ ಒಂದು ಸಾಹಿತ್ಯ ಗೋಷ್ಠಿಯಲ್ಲಿ ನಾನು ಲೇಖನವನ್ನು ಮಂಡಿಸುವುದಿತ್ತು. ಹತ್ತು ಪುಟಗಳ ಲೇಖನ ಮತ್ತು ಅದರ ಜೆರಾಕ್ಸ್ ಪ್ರತಿಗಳನ್ನು ಒಂದು ಫೈಲ್‌ನಲ್ಲಿ ಹಾಕಿಕೊಂಡು ಸಮಯ ಮೀರುವುದರೊಳಗೆ ಅಲ್ಲಿಗೆ ತಲುಪುವ ಉದ್ದೇಶದಿಂದ ದಡ ಬಡ ಎಂದು ದಾಪುಗಾಲು ಹಾಕುತ್ತಾ ಕಾಶಿಯ ಗಲ್ಲಿಗಳನ್ನು ಕ್ರಾಸ್ ಮಾಡುತ್ತಿದ್ದೆ. ಜೊತೆಗೆ ಧೋಂಡು ಕೂಡ ವೇಗವಾಗಿ ಓಡಿಕೊಂಡು ಅನುಸರಿಸುತ್ತಿದ್ದ. ಶೀತಲ ಮಾತೆಯ ಗುಡಿಯ ಬಳಿ ಬರುವಾಗ ಅಲ್ಲಿ ಲೈಟ್ ಕಂಬದ ಕೆಳಗೆ ಕುಳಿತಿದ್ದ ಭಿಕ್ಷುಕಿಯೊಬ್ಬಳು ನನ್ನನ್ನು ಕಂಡು ಜೋರು ಧ್ವನಿಯಲ್ಲಿ ಬೊಬ್ಬೆ ಹಾಕಲು ಮೊದಲು ಮಾಡಿದಳು. "ರೇ ಬಯ್ಯಾ ಮುಜೆ ದೇಖೋರೇ, ಮೇರಾ ಹಾಲ್ ದೇಖೋರೇ" ಎಂದು ಪ್ರಾರಂಭವಾದ ಅವಳ ವಾಗ್ಝರಿ ಗಂಗೆಯ ನಿರಂತರ ಹರಿವಿನಂತಿತ್ತು. ಪ್ಲಾಸ್ಟರ್ ಹಾಕಿದ್ದ ತನ್ನ ಮುರಿದ ಎಡಗಾಲನ್ನು ಮತ್ತು ನೆತ್ತಿಗೆ ಹಾಕಲಾಗಿದ್ದ ಬ್ಯಾಂಡೇಜನ್ನು ಮತ್ತೆ ಮತ್ತೆ ತೋರಿಸುತ್ತಾ ಹಿಂದಿಯಲ್ಲಿ "ಈ ಜನ ನನ್ನ ಕಾಲು ಮುರಿದು ಹೆಳವಿಯನ್ನಾಗಿ ಮಾಡಿದ್ದಾರೆ. ತಲೆಗೆ ಲಟ್ಟಾದಿಂದ ಹೊಡೆದು ಬುರುಡೆ ಬಿಚ್ಚಿದ್ದಾರೆ. ನನ್ನವರೂ ಯಾರೂ ಇಲ್ಲ. ನೀನೇ ನನ್ನ ಮಗ, ನೀನೇ ನನ್ನ ತಮ್ಮ, ನೀನೇ ನನ್ನ ದಿಕ್ಕು. ನಿನಗೆ ಸಂಪಾದನೆಯಿದೆ. ನೀನು ಸ್ವಲ್ಪ ಭಾಗ ದಾನ ಮಾಡು. ನಿನ್ನ ಹೆಸರಿನಲ್ಲಿ ಈ ದಿನ ಊಟ ಮಾಡ್ತೀನಿ. ಈ ಶೀತಲ ಮಾತೆ ನಿನಗೆ ಒಳ್ಳೆಯದನ್ನು ಮಾಡ್ತಾಳೆ. ನೀನೇ ಇಲ್ಲ ಅಂದ್ರೆ ನಾನು ಎಲ್ಲಿಗೆ ಹೋಗಲಿ ? ಯಾರನ್ನು ಕೇಳಲಿ ?" ಎನ್ನುತ್ತಾ ಕುಳಿತಲ್ಲಿಂದಲೇ ಕೈಯೊಡ್ಡಿದಳು.

ಒಂದು ವಾರ ಅದೇ ರಸ್ತೆಯಲ್ಲಿ ಓಡಾಡಿದ್ದರೂ ಕೂಡ ಇವಳು ಕಂಡಿರಲಿಲ್ಲ. ಇಂದು ಧುತ್ತನೆ ಎಲ್ಲಿಂದ ಬಂದಳು ? ಬೇಗ ಬಿಡಿಸಿಕೊಂಡ್ರೆ ಒಳ್ಳೇದು ಎಂದುಕೊಂಡು ಹಣ ಕೊಡೋಣ ಎಂದು ಜೇಬಿಗೆ ಕೈಹಾಕಿದೆ. ಕಾಶಿಯಲ್ಲಿ ನನ್ನ ಜೊತೆಗಿದ್ದು ದುಬಾಷಿಯಾಗಿ ಕಾರ್ಯ ನಿರ್ವಹಿಸಲು ಹಿರಿಯರಾದ ವೇ॥ ಬ್ರ॥ ಚಿಂತಾಮಣಿ ಶಾಸ್ತ್ರಿಗಳು ಗೊತ್ತುಮಾಡಿದ್ದ ಧೋಂಡು ಬೇಡ ಎನ್ನುತ್ತಾ ಕೈಸನ್ನೆ ಮಾಡಿ ಗಲ್ಲಿಯ ಆ ಕಡೆಗೆ ಎಳೆದ. "ಯಾಕೋ ಧೋಂಡು ಭಯ್ಯಾ ಅಯ್ಯನವರು ದೊಡ್ಡ ಮನಸು ಮಾಡಿದ್ರೆ ನೀನು ಯಾಕೋ ಮಧ್ಯೆ ಬರ್ತೀಯ?" ಎಂದು ಅವನನ್ನು ತರಾಟೆಗೆ ತೆಗೆದುಕೊಂಡಾಗ ಅವನು ಸುಮ್ಮನಾದ. ಜೇಬಿನಿಂದ ಹಣ ತೆಗೆದುಕೊಡಲು ಅವಳ ಬಳಿಗೇ ಹೋಗಿ ಅವಳನ್ನು ನೋಡಿದೆ.

ಆಕೆಗೆ ಸುಮಾರು ನಲವತ್ತು ನಲವತ್ತೈದು ವರ್ಷವಿರಬಹುದು. ಎಡಗಾಲಿಗೆ ಪ್ಲಾಸ್ಟರ್ ಹಾಕಿದ್ದಾರೆ. ಹಳೆಯ ಸೀರೆಯನ್ನುಟ್ಟು ಒಂದು ಕೊಳಕಾದ ಚಾದರ ಹೊದ್ದಿದ್ದಾಳೆ. ಕೇಶ ಮುಂಡನ ಮಾಡಿಸಿದ್ದ ತಲೆಯ ಮೇಲೆ ಕಪ್ಪು ಕೂದಲು ಸ್ವಲ್ಪ ಬಂದಿದೆ. ತಲೆಗೆ ಸುತ್ತಿರುವ ಬ್ಯಾಂಡೇಜ್ ರಕ್ತಸಿಕ್ತವಾಗಿದ್ದು ಧೂಳು ತುಂಬಿದೆ. ಕೈಗಳಲ್ಲಾಗಿದ್ದ ಗಾಯ ಒಣಗಿ ಚರ್ಮ ಕಿತ್ತಿದೆ. ಕಣ್ಣುಗಳಲ್ಲಿ ಇನ್ನೂ ಹೊಳಪಿದೆ. ಕೂಗಿ ಕೂಗಿ ಗಂಟಲು ಕೆಟ್ಟು ಶಬ್ದ ಕೇಳಲು ಹಿಂಸೆಯಾಗುತ್ತಿದೆ. ಮುಂದೆ ಹಾಸಿದ ಹಳೆಯ ಬಟ್ಟೆಯ ಮೇಲೆ ಕೆಲವು ನಾಣ್ಯಗಳು ಹೊಳೆಯುತ್ತಿವೆ. ಪಕ್ಕದಲ್ಲಿ ಬಟ್ಟೆ ಗಂಟು ಜೊತೆಗೆ ನೀರಿನ ಪ್ಲಾಸ್ಟಿಕ್ ಬಾಟಲ್ ಕೂಡ ಇದೆ.

"ಏನಾಯ್ತು ಅವಳಿಗೆ ? ಏನಾದರೂ ಆಕ್ಸಿಡೆಂಟಾಯ್ತಾ ?"

"ಅದೊಂದು ದೊಡ್ಡ ಕತೆ ಸಾರ್... ಹೋದ ವರ್ಷ ಜನವರಿಲೋ ಅಥವಾ ಫೆಬ್ರವರಿಲೋ ಇಲ್ಲಿ ವಾಟರ್ ಸಿನಿಮಾದ ಬಗ್ಗೆ ನಡೆದ ಗಲಾಟೆ ಗೊತ್ತಿರಬೇಕು ನಿಮಗೆ. ಅವ್ಳು ಅದರಲ್ಲಿ ಪಾರ್ಟ್ ಮಾಡಲಿಕ್ಕೆ ಹೋದಾಗ ಇಲ್ಲಿಯ ಜನ ಹೊಡೆದು ಚಚ್ಚಿದ್ದಾರೆ."

"ಅಲ್ಲಪ್ಪಾ ಇಮಾಂಸಾಬ್ರಿಗೂ ಗೋಕುಲಾಷ್ಟಮಿಗೂ ಏನ್ ಸಂಬಂಧ ? ಸಿನಿಮಾದವರೆಲ್ಲಿ ಇವಳೆಲ್ಲಿ, ಯಾರು ಕರೆದು ಇವಳಿಗೆ ಪಾರ್ಟ್ ಕೊಟ್ಟರು. ಶಬಾನಾಗೆ ಮತ್ತು ನಂದಿತಾ ದಾಸ್‌ಗೆ ಏಟು ಬಿದ್ದದ್ದು ಗೊತ್ತಿದೆ. ಇವಳನ್ನು ಕರೆದೋರ‍್ಯಾರು ? ಯಾರು ಹೊಡೆದರು ? ಯಾಕೆ ಹೊಡೆದರು ?"

"ನೀವು ನನಗಿಂತ ನಮ್ಮ ಶಾಸ್ತ್ರಿಗಳನ್ನು ಕೇಳಿದರೆ ಒಳ್ಳೇದು. ಆಗ ನಾನು ಊರಿಗೆ ಹೋಗಿದ್ದೆ. ಹೆಚ್ಚಿನದೇನೂ ನನಗೆ ಗೊತ್ತಿಲ್ಲ. ನೀವು ಅಪರಿಚಿತರು ಎಂದು ಸುಳ್ಳು ಹೇಳಬಾರದು" ಎಂದು ತನ್ನ ಅಸಹಾಯಕತೆಯನ್ನು ಪ್ರಾಮಾಣಿಕವಾಗಿ ಒಪ್ಪಿಕೊಂಡ.

"ಸರಿ" ಎಂದು ಸುಮ್ಮನಾದೆ. ಆಟೋ ಮಂದಗತಿಯಲ್ಲಿ ಸಾಗಿತ್ತು. ಆ ಭಿಕ್ಷುಕಿ ವಾಟರ್ ಚಿತ್ರದಲ್ಲಿ ಪಾತ್ರ ನಿರ್ವಹಿಸಿದ್ದುದರ ವಿಷಯ ಯಾರಿಂದ ಪಡೆಯುವುದು ಎಂದು ಯೋಚಿಸುತ್ತಾ ಸಾಗಿದೆ.

ಮುಂದಿನ ದಿನಗಳಲ್ಲಿ ಶೀತಲ ಮಾತೆಯ ಮಂದಿರದ ಮುಂದೆ ಹೋಗುವಾಗ ಆ ಭಿಕ್ಷುಕಿ ಅದೇ ಧಾಟಿಯಲ್ಲಿ ತನ್ನ ಮನವಿಯನ್ನು ಮುಂದಿಡುತ್ತಿದ್ದಳು. ನಾನೂ ಹಣ ಹಾಕಿ ಮುಂದೆ ಸಾಗುತ್ತಿದ್ದೆನಾದರೂ ಆ ನತದೃಷ್ಟ ಹೆಂಗಸಿನ ಮನಕರಗುವ ಚಿತ್ರ ಆಗಾಗ್ಗೆ ಕಣ್ಮುಂದೆ ಬಂದು ನನ್ನ ಮಾನಸಿಕ ಸ್ಥಿಮಿತವನ್ನು ಕೆಡಿಸುತ್ತಿತ್ತು. ವಾಟರ್ ಚಿತ್ರ - ಆ ಹೆಂಗಸು - ಶೀತಲ ಮಾತೆಯ



ಚಾಚಿದ ಅವಳ ಕೈಗಳಿಗೆ ಜೇಬಿನಿಂದ ತೆಗೆದ ನೋಟನ್ನು ಕೊಟ್ಟೆ. "ದೇವರು ನಿನಗೆ ಒಳ್ಳೆಯದನ್ನು ಮಾಡಲಿ" ಎಂದು ಎರಡೂ ಕೈಯೆತ್ತಿ ಹರಸಿದಳು. ಮನಸ್ಸಿನಲ್ಲಿ ಗೋಷ್ಠಿಯೇ ತುಂಬಿದ್ದರಿಂದ ನನ್ನ ಜೊತೆಯವನೊಡನೆ ಮುಂದೆ ಸಾಗಿದೆ. ಒಂದೆರಡು ಗಲ್ಲಿಗಳನ್ನು ದಾಟಿ ದೊಡ್ಡ ರಸ್ತೆ ಸಿಕ್ಕ ಕೂಡಲೇ ಆಟೋ ಹತ್ತಿದೆವು.

ಸ್ವಾಮಿ ನಾರಾಯಣ್ ಮಂದಿರದಿಂದ ಬನಾರಸ್ ವಿಶ್ವವಿದ್ಯಾನಿಲಯಕ್ಕೆ ಆಟೋದಲ್ಲಿ ಹೋಗಲು ಸುಮಾರು ಅರ್ಧ ಗಂಟೆ ಬೇಕು. ಆಟೋ ಬರ್ ಎಂದು ಹೋಗುತ್ತಿತ್ತು. ಸಹಜ ಕುತೂಹಲದಿಂದ ಧೋಂಡುವನ್ನು ಮಾತಿಗೆಳೆದೆ.

"ನಿನ್ನ ಹೆಸರು ಹಿಡಿದು ಕರೆದಳಲ್ಲ, ಅವ್ಳು ನಿನಗೆ ಗೊತ್ತಾ"?

"ಗೊತ್ತು ಸಾರ್, ಶಾಸ್ತ್ರಿಗಳ ಮನೆಯಲ್ಲೂ ಎಲ್ಲರಿಗೂ ಗೊತ್ತು. ಹೋದ ವರ್ಷದವರೆಗೆ ಅವರ ಮನೆಯಲ್ಲಿ ಕೆಲಸ ಮಾಡಿಕೊಂಡಿದ್ದಳು."

ಮಂದಿರ ಇವುಗಳಿಗಿದ್ದ ಸಂಬಂಧವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದೆ. ಕ್ರೌರ್ಯ, ಅಸಹನೆ, ಹಿಂಸೆ ಹೆಚ್ಚುತ್ತಿರುವ ಈ ಸಮಾಜದಲ್ಲಿ ತಿಳಿದವರು, ಸಂಸ್ಕೃತಿವಂತರು ಏನೂ ಮಾಡಲು ಸಾಧ್ಯವಿಲ್ಲವೇ ಎಂದೆಲ್ಲಾ ಯೋಚಿಸಿದೆ.

ಒಂದು ವಾರದ ನಂತರ ಒಂದು ದಿನ ಊಟಕ್ಕೆ ಕುಳಿತಾಗ ಚಿಂತಾಮಣಿ ಶಾಸ್ತ್ರಿಗಳ ಬಳಿ ಈ ಹೆಂಗಸಿನ ವಿಷಯದಲ್ಲಿ ಕಾಡುತ್ತಿದ್ದ ಪ್ರಶ್ನೆಗಳನ್ನು ಮೆಲ್ಲಗೆ ಕೇಳಿದೆ.

ಈ ಶೀತಲ ಮಾತೆ ಎಂದರೆ ಯಾವ ದೇವತೆ ? ಈ ಹೆಂಗಸು ಅಲ್ಲಿಯೇ ಏಕೆ ಕುಳಿತು ಭಿಕ್ಷೆ ಬೇಡುತ್ತಾಳೆ ? ಅವಳನ್ನು ಹೊಡೆದು ಬಡಿದು ಹಿಂಸಿಸಿ ಕಾಲು ಮುರಿದವರು ಯಾರು ? ಜೊತೆಗೆ ಅವಳು ಕೂಗಿ ಕರೆವ ರೀತಿ, ಅವಳ ಆರ್ತ ಧ್ವನಿ, ಅವಳ ನರಳಾಟದ ಸ್ಥಿತಿ ನನ್ನ ಮನಸ್ಸನ್ನು ಕಲಕಿರುವುದಾಗಿ ಹೇಳಿದೆ. ನಾನು ವಿವರ ನೀಡುವಾಗ ಸುತ್ತಲೂ ಊಟಕ್ಕೆ ಕುಳಿತಿದ್ದ ಇತರರೂ ಒಮ್ಮೆಗೆ ಮೌನಿಗಳಾಗಿಬಿಟ್ಟದ್ದರಿಂದ ನನ್ನ ಮಾತು ಎಲ್ಲರ ಕಿವಿಗೂ ಬಿತ್ತು. ಶಾಸ್ತ್ರಿಗಳ ಪತ್ನಿ ತಮ್ಮ ಸಹಜ ರೀತಿಯಲ್ಲಿ "ಓ ಈ ಸೀತಮ್ಮ ನಿಮ್ಮ ಕಣ್ಣಿಗೂ ಬಿದ್ಲ? ಪಾಪ ಹೇಗಿದ್ದವಳು

ಹೇಗಾದಳು ! ಈ ಪ್ರಪಂಚದಲ್ಲಿ ಹೆಂಗಸಿಗೇ ಎಲ್ಲಾ ಕಷ್ಟ ನೋವು ಬರೋದು ಅಂತ ಕಾಣುತ್ತೆ,'' ಎಂದರು.

ಶಾಸ್ತ್ರಿಗಳ ಮಕ್ಕಳೂ ''ಅಂಕಲ್, ಸೀತಮ್ಮ ನಮಗೂ ಗೊತ್ತು. ಅವಳಿರೋ ಜಾಗಾನೂ ನೋಡಿದೀವಿ. ಅಲ್ಲಿಗೆ ಕರ್‍ಕೊಂಡು ಹೋಗ್ಬೇಕಾ?'' ಎಂದು ಕೇಳಿದರು. ''ಬೇಕಾದಾಗ ನಿಮ್ಮನ್ನೇ ಕೇಳ್ತೀನಿ'' ಎಂದು ಅವರನ್ನು ಸುಮ್ಮನಾಗಿಸಿದೆ. ನನ್ನ ಅವರ ಪರಿಚಯ ಕೆಲವೇ ದಿನಗಳದ್ದಾದರೂ ಕೂಡ ನನ್ನ ಕುತೂಹಲಕ್ಕೆ ಬೆಲೆಕೊಟ್ಟು ಹೆಚ್ಚಿನ ಮಾಹಿತಿ ಒದಗಿಸಲು ಸಹಾಯ ಮಾಡುವ ಉತ್ಸುಕತೆ ತೋರಿಸಿದ್ದು ಮೆಚ್ಚುಗೆಯಾಯಿತು. ಊಟವಾದ ಮೇಲೆ ಟೀವಿಯಲ್ಲಿ ಮಕ್ಕಳು ಮೆಚ್ಚುವ ಸೀರಿಯಲ್ ಬರುತ್ತಿದ್ದರಿಂದ ಅವರೆಲ್ಲಾ ಆ ಕಡೆ ಹೊರಟರು. ಶಾಸ್ತ್ರಿಗಳು ವಿಶಾಲವಾದ ಮೊಗಸಾಲೆಯ ಇನ್ನೊಂದು ಮೂಲೆಯಲ್ಲಿ ವೀಳೇದೆಲೆ ಅಡಿಕೆ (ನಾವು ಶಿವಮೊಗ್ಗೆಯಿಂದ ತೆಗೆದುಕೊಂಡು ಹೋಗಿದ್ದ ವಿಶೇಷ ಬಣ್ಣದ್ದು) ನನಗೂ ಕೊಟ್ಟು ತಾವೂ ಹಾಕಿಕೊಳ್ಳುತ್ತ ನಾನು ಕೇಳಿದ ವಿಷಯದ ಪ್ರಸ್ತಾಪ ಮಾಡಿದರು.




''ಮಿಸ್ಟರ್ ರಾವ್, ನೀವು ಈ ಶೀತಲ ಮಾತೆಯ ಬಗ್ಗೆ ಕೇಳಿದಿರಿ. ಅವಳು ಇಲ್ಲಿನ ಜಾಡಮಾಲಿಗಳು ಮತ್ತು ಇತರ ಕೆಳವರ್ಗದ ಜನ ಪೂಜೆ ಮಾಡುವ ದೇವತೆ. ನಮ್ಮ ಊರುಕಡೆ ಇರುವ ಮಾರಮ್ಮನ ರೀತಿಯ ದೇವತೆ. ಬೆಳಗ್ಗೆ ತಮ್ಮ ಕೆಲಸ ಪ್ರಾರಂಭಿಸುವ ಮೊದಲು ಈ ಜನ ಅವಳಿಗೆ ಪೂಜೆ ಮಾಡಿ ಊದುಬತ್ತಿ ಹಚ್ಚುತ್ತಾರೆ. ಅವಳಿಗಾಗಿಯೇ ಗೋಡೆಯಲ್ಲಿ ದೇವಸ್ಥಾನದ ರೂಪ ಕೊಟ್ಟು ದಿನವೂ ಅರಿಸಿನ ಕುಂಕುಮ ಹಚ್ಚಿ, ಹಣ್ಣು ಕಾಯಿ ನೈವೇದ್ಯ ಮಾಡುತ್ತಾರೆ. ರಸ್ತೆ ರಸ್ತೇಲಿ ವರ್ಷಕ್ಕೊಮ್ಮೆ ಜಾತ್ರೆ ಮಾಡುತ್ತಾರೆ. ನಮಗೆ ವಿಶ್ವನಾಥ, ಅನ್ನಪೂರ್ಣೆಯರು ಇರೋ ಹಾಗೆ ಇವರುಗಳಿಗೆ ಈ ಶೀತಲ ಮಾತೆ. ತುಂಬಾ ಭಯ ಭಕ್ತಿ. ಈ ಸೀತಮ್ಮ ಕಾಲಿಗೆ, ತಲೆಗೆ ಪೆಟ್ಟು ಬಿದ್ದ ಮೇಲೆ ಭಿಕ್ಷೆ ಬೇಡಲಿಕ್ಕೆ ಆ ಜಾಗ ಹುಡುಕಿಕೊಂಡಿರೋದು ಅದಕ್ಕೇ.

''ಎರಡನೆಯದಾಗಿ, ರಾವ್, ಹೋದ ವರ್ಷ ಇಲ್ಲಿಗೆ ವಾಟರ್ ಹೆಸರಿನ ಸಿನಿಮಾ ತೆಗೀತೀವಿ ಅಂತ ಒಬ್ಬಾಕೆ ಬಂದ್ಲು. ಯಾರೋ ಮೀರಾ ನಾಯರ್ ಅಂತೆ. ಆಕೆ ಜೊತೆಗೆ ಮೂರು - ನಾಲ್ಕು ಜನ ಹೆಂಗಸರು ಬಂದ್ರು. ನಾವು ಇದೇನು ನೀರಿನ ಮೇಲೆ ಏನು ಚಿತ್ರ ತೆಗೆಯಕ್ಕಾಗುತ್ತೆ. ಜನ ನೋಡ್ತಾರಾ ? ದುಡ್ಡಿರೋರು ಮಾಡೋ ಸರ್ಕಸ್ ಇದು ಅಂತ ಅಂದ್ಕೊಂಡ್ವಿ. ಆದರೆ ವಿವರ ಕೇಳ್ದಾಗ ಅದೂ ಸರಿಯಿರಬಹುದೇನೋ ಅನ್ನಿಸ್ತು.

''ಈ ಕಾಶೀಲೇ ನಾನು ಹುಟ್ಟಿ ಬೆಳೆದರೂ ಕೂಡ ನನಗೆ ಈ ಊರನ್ನು ಅರ್ಥಮಾಡಿ ಕೊಳ್ಳಕ್ಕೆ ಆಗಿಲ್ಲ. ಎಲ್ಲಾ ನಿಗೂಢ ಇಲ್ಲಿ. ನಿಮಗೆ ನೋಡ್ತಾ ಹೋದರೆ ಅರ್ಥಾನೇ ಆಗೋಲ್ಲ. ಇದೇನು ನೀವು ಒಪ್ಕೋಬೇಕೇ, ಬಿಡಬೇಕೇ ಅಂತಾ ಗೊತ್ತೇ ಆಗಲ್ಲ. ಇಂಗ್ಲೀಷಿನಲ್ಲಿ 'ಮಿಸ್ಟರಿ' ಅಂತಾರೆ ನೋಡಿ ಇದನ್ನು ಹೇಳಲು ಅದೇ ಸರಿಯಾದ ಪದ.''

''ವಾಟರ್ ಚಿತ್ರಕ್ಕೂ ಈ ಮಿಸ್ಟರಿಗೂ ಏನು ಸಂಬಂಧ,'' ನಾನು ಮಧ್ಯೆ ಬಾಯಿ ಹಾಕಿದೆ.

''ಅದನ್ನೇ ನಾನು ಹೇಳ ಹೊರಟಿದ್ದು ನೋಡಿ. ನಾವು ಈ ಕಾಶೀ ಕ್ಷೇತ್ರವು ಶತಶತ ಮಾನಗಳಿಂದ ಪುಣ್ಯಕ್ಷೇತ್ರ ಅಂದ್ಕೊಂಡಿದೀವಿ. ಈ ಗಂಗಾನದಿ ಪವಿತ್ರ ಅಂತೀವಿ. ಇಲ್ಲಿ ಸ್ನಾನ ಮಾಡಿದರೆ ಜೀವನದಲ್ಲಿ ಮಾಡಿದ ಪಾಪ ಎಲ್ಲಾ ಹೋಗಿ ಪುಣ್ಯ ಬರುತ್ತೆ ಅಂತೀವಿ. ಇದು ಒಂದು ಮುಖ ಅಷ್ಟೇ. ಇದಕ್ಕೆ ಹಿಂದೆ ಇನ್ನೊಂದು ಮುಖ ಇದೆ ಅಂತ ಸಿನಿಮಾದವರು ಹೇಳ್ತಾರೆ. ಋಷಿ ಮೂಲ, ನದಿ ಮೂಲ, ಸ್ತ್ರೀ ಮೂಲ ಹುಡುಕಬೇಡ ಅನ್ನೋ ಮಾತನ್ನು ಕೇಳಿದ್ದೀರಲ್ಲವೇ ? ಸರಿ ಇವರು ಒಂದು ಅರ್ಥಕ್ಕೆ ಈ ಮೂಲಕ್ಕೆ ಕೈ ಹಾಕಿದರು, ರಾಡಿನ ಕೆದಕಿದರು. ಸಾವಿರದ ಒಂಬೈನೂರಾ ಮೂವತ್ತರಲ್ಲಿ ನಡೆದ ಯಾವುದೋ ಕತೆ, ಬಾಲವಿಧವೆಯೊಬ್ಬಳನ್ನು ಅವಳ ಮನೆಯವರು ಸಾಕಲಿಕ್ಕೆ ಆಗದ ಮೇಲೆ ಇಲ್ಲಿಗೆ ಕರೆದುಕೊಂಡು ಬಂದು ನೂಕ್ತಾರೆ. ಅವಳ ಯೌವ್ವನ ಕಾಮ ಪಿಶಾಚಿಗಳಿಗೆ ಆಹಾರವಾಗುತ್ತದೆ. ಅವಳನ್ನು ಹತ್ತು ಹಲವು ಮಂದಿ ನಾನಾರೀತಿ ಹಿಂಸಿಸುತ್ತಾರೆ. ಅದರಲ್ಲಿ ಉನ್ನತ ಸ್ಥಾನದಲ್ಲಿರುವವರು, ಅಂಗಡಿ ಮಾಲೀಕರು, ಪೋಲಿ ಪಟಾಲಂಗಳು ಎಲ್ಲರೂ ಶಾಮೀಲು. ಅವಳ ನರಕ ಜೀವನಕ್ಕೆ ಇವರೆಲ್ಲರೂ ಕಾರಣರಾಗ್ತಾರೆ. ಇಷ್ಟಾದರೂ ಅವಳು ಮನಸ್ಸಿನಲ್ಲಿ ಒಬ್ಬ ಯುವಕನನ್ನು ಗೊತ್ತು ಮಾಡಿಕೊಂಡಿರುತ್ತಾಳೆ. ಗಂಗಾನದಿಯಲ್ಲಿ ಸ್ನಾನ ಮಾಡಿದರೆ ಏಳೇಳು ಜನ್ಮದ ಪಾಪ ಕಳೆಯುತ್ತೆಂತ ಜನ ಇಲ್ಲಿಗೆ ಬರುತ್ತಾರೆ. ಆದರೆ ಇಲ್ಲಿರೋರು ಪಾಪ ಮಾಡಿದ್ರೆ ಎಲ್ಲಿಗೆ ಹೋಗಬೇಕು ? ಗಂಗಾ ಜಲ ಪವಿತ್ರವಾದ ಜಲ ಅಲ್ಲ, ಅದು ಬರೀ ನೀರು ಎಂದು ಸಿನಿಮಾದವರು ಹೇಳಿದ್ರು. ಇಲ್ಲಿನವರಿಗೆ ಕೋಪ ಬಂದು ಗಲಾಟೆ ಮಾಡಿ, ದಾಂಧಲೆ ಎಬ್ಬಿಸಿ ಸಿನಿಮಾದವರನ್ನು ಓಡಿಸಿ ಬಿಟ್ರು. 'ನಾವು ಹಾಕಿರೋ ಚಕ್ರವ್ಯೂಹದೊಳಕ್ಕೆ ಬರಲು ಪ್ರಯತ್ನಿಸಿದರೆ... ನೋಡಿ ನಾವು ಏನ್ಮಾಡ್ತೀವಿ' ಎಂದು ಹೇಳಿದ ಹಾಗಿತ್ತು.'' ಹೀಗೆ ಒಂದೇ ಸಮನೆ ಮಾತನಾಡಿದ್ದರಿಂದಲೋ ಏನೋ ಗಂಟಲು ಒಣಗಿ ಶಾಸ್ತ್ರಿಗಳಿಗೆ ಕೆಮ್ಮು ಬಂದಿತು. ನೀರು ಕುಡಿಯಲು ಎದ್ದು ಅಡುಗೆಮನೆ ಕಡೆ ಹೋದರು.

ಶಾಸ್ತ್ರಿಗಳು ಕೊಟ್ಟ ಚಕ್ರವ್ಯೂಹದ ಉದಾಹರಣೆ ನನಗೆ ತುಂಬಾ ಹಿಡಿಸಿತು. ನಾನು ಈ ಪದವನ್ನು ಯೋಚಿಸದೇ ಹೋದರೂ ಕೂಡ ಕಾಶಿಯ ರಸ್ತೆಗಳು ನನಗೆ ಇದೇ ಅನುಭವವನ್ನು ಕೊಟ್ಟಿದ್ದವು. ಇಲ್ಲಿ ಗಲ್ಲಿಗಳೊಳಗೆ ಗಲ್ಲಿಗಳು, ಒಮ್ಮೆಗೇ ಕೊನೆಗೊಳ್ಳುವ ಗಲ್ಲಿಗಳು, ಗುರುತು ಮರೆತರೆ ತಪ್ಪಿಸಿಕೊಂಡು ಅಲ್ಲಲ್ಲೇ ಸುತ್ತು ಹಾಕುತ್ತಾ ಹೊರ ಬರಲು ಹೆಣಗಬೇಕಾದಾಗ ಸಾಕುಸಾಕಾಗಿ ಹೋಗುತ್ತದೆ. ನಾಲ್ಕೈದು ಅಡಿ ಅಗಲದ ಗಲ್ಲಿಗಳು, ಅಕ್ಕ ಪಕ್ಕ ಸಾಮಾನ್ಯವಾಗಿ ಒಂದೇ ರೀತಿ ಕಾಣುವ ಪ್ರಾಚೀನ ಕಾಲದ ಛಾಪು ಹೊಂದಿದ ಮನೆಗಳು, ಕಾಣ ಸಿಗುವ ಎಲ್ಲಾ ಗಲ್ಲಿ ಮೂಲೆಗಳಲ್ಲಿ ಕಸದ ರಾಶಿ ರಾಶಿ, ಜೊತೆಗೆ ಎಲೆ ಅಡಿಕೆ, ಈಗ ಗುಟ್ಕಾ, ಹಾಕಿಕೊಂಡು ಉಗಿದು ಚಿತ್ತಾರ ಮೂಡಿಸಿದ ಗೋಡೆಗಳು, ಅಲ್ಲಲ್ಲಿ ಶೀತಲ ಮಾತೆಯ ಮಂದಿರಗಳು. ಗೂಡಂಗಡಿಗಳು, ರಸ್ತೆ ಬದಿಯ ಕ್ಷೌರಿಕರ ಓಪನ್ ಅಂಗಡಿ ಹೊರಗಿನಿಂದ ಬಂದವರನ್ನು ದಾರಿ ತಪ್ಪಿಸುತ್ತವೆ. ಹಿಂದಿಯ ಈ ಹೃದಯ ಸ್ಥಳದಲ್ಲಿ ನಿಮ್ಮ ಕಸ್ತೂರಿ ಕನ್ನಡವಾಗಲಿ ಮೋಹದ ಬಲೆ ಬೀಸುವ ಇಂಗ್ಲೀಷಾಗಲಿ ಪ್ರಯೋಜನಕ್ಕೆ ಬಾರದೆ ಪರದಾಡುವಂತಾಗುತ್ತದೆ. ಈ ಮನುಷ್ಯ ನಿರ್ಮಿತ ಚಕ್ರವ್ಯೂಹದಿಂದ ಮುಕ್ತಿ ಪಡೆಯಲು ನೀವು ಹೆಣಗಾಡಬೇಕಾಗುತ್ತದೆ. ಶಾಸ್ತ್ರಿಗಳು ಹೇಳಿದ ಚಕ್ರವ್ಯೂಹದ ರೂಪಕಾರ್ಥವನ್ನು ಮನಸ್ಸಿನಲ್ಲೇ ಅರ್ಥಮಾಡಿಕೊಳ್ಳುತ್ತಿರುವಾಗ ಚಿಂತಾಮಣಿಯವರ ಪತ್ನಿ ಅಡಿಗೆಮನೆ ಕೆಲಸ ಮುಗಿಸಿ ನಮ್ಮೊಡನೆ ಮಾತನಾಡಲು ಬಂದರು.

''ನೀವು ಆ ಸೀತಮ್ಮನ್ನ ನೋಡಿದ್ದೀರಲ್ಲ ಅವಳನ್ನು ಕುರಿತೇ ಆ ವಾಟರ್ ಚಿತ್ರ ಇದ್ದಂತಿತ್ತು. ಹಿಂದಿಯವರು ಸೀತಾ ಮಾ ಎಂದರೆ ನಾವು ಸೀತಮ್ಮ ಎನ್ನುತ್ತೀವಿ ಅಷ್ಟೆ. ಗಂಡನನ್ನು ಎಳೇ ವಯಸ್ಸಿನಲ್ಲಿ ಕಳಕೊಂಡರೂ ಧೈರ್ಯವಾಗಿ ಜೀವನ ಮಾಡಿದ್ಲು. ಅಪ್ಪ ಅಮ್ಮ ಸಾಕಕ್ಕಾಗಲ್ಲ ಅಂದ್ರಂತೆ. ಗಂಡನ ಮನೆಯವರೂ ಯಾರೂ ಇವಳನ್ನು ಮೂಸಲಿಲ್ಲ. ಕುಡಿಯೋ ಗಂಡನನ್ನು ಕಟ್ಕೊಂಡು ಅಷ್ಟು ದಿನ ಹೇಗೆ ಏಗಿದಳೋ ಅನ್ನಿಸುತ್ತೆ. ಬದುಕಿರೋವರೆಗೂ ಹೊಡೆದು ಬಡಿದು ಮಾಡ್ದ. ನಮ್ಮನೆ ಹಾಗೇ ನಾಲ್ಕೈದು ಮನೆಗಳಲ್ಲಿ ಕೆಲಸ ಮಾಡಿಕೊಂಡು ಅವನನ್ನು ಸಾಕಿದಳು. ಸಂಸ್ಕೃತಿವಂತರ ಮನೆಗಳಲ್ಲಿ ಇದ್ದುದರಿಂದ ತಾನೂ ಒಳಗೇ ಬದಲಾದಳು. ಸ್ವಲ್ಪ ಅಕ್ಷರ ಜ್ಞಾನ ಪಡೆದು ಓದಲು ಕಲಿತಳು. ಅವರು ಕೊಟ್ಟ ಸಲಹೆಯಂತೆ ಗಂಡನಿಗೆ ಒಳ್ಳೆಯ ಡಾಕ್ಟರ್ ಬಳಿ ಔಷಧಿಗಳನ್ನು ಕೊಡಿಸಿ ಆರೈಕೆ ಮಾಡಿದಳು. ಆದರೆ ಅವನು ಎದೆ ನೋವು ಬಂದು ಸತ್ತೇಹೋದ.''

''ಅಯ್ಯೋ ಪಾಪ, ಆಮೇಲೆ ?'' ನನ್ನ ಪತ್ನಿ ಕೇಳಿದಳು.

''ಆಗ ಅವಳು ಬಹಳ ಲಕ್ಷಣವಾಗಿದ್ದಳು. ಗಂಡನ್ನ ಕಳೆದುಕೊಂಡ ಮೇಲೆ ಅವಳಿಗೆ ಬೇರೆ ಗಂಡಸರ ಕಾಟ ಹೆಚ್ಚಾಯ್ತು. ದೇಹ ಹೊತ್ಕೊಂಡು ಈ ಗಲ್ಲಿಗಳಲ್ಲಿ ಮನೆಯಿಂದ ಮನೆಗೆ ಹೋಗೋದೆ ಕಷ್ಟ ಆಯ್ತು. ನೋಡಕ್ಕೆ ಚೆನ್ನಾಗಿದ್ದು ಮೈಕೈ ತುಂಬಿಕೊಂಡಿದ್ದದ್ದೇ ಅಪರಾಧ ಆಯಿತು ನೋಡಿ. ಉತ್ತಮ ಜಾತಿಯ, ಕೀಳು ಜಾತಿಯ ಹಲವು ಮಂದಿ ಅವಳನ್ನು ಕೆಣಕಿದರು. ಹಣದ ಆಸೆ ತೋರಿಸಿದರು. ಸೂಳೆ ಅಂತ ಪೋಲೀಸ್ಗೆ ಹೇಳ್ತೀವಿ ಅಂತ ಹೆದರಿಸಿದರು. ಈ ಸಮಾಜದಲ್ಲಿ ಮದುವೆ, ಮುಂಜಿಗೆ ಜಾತಿ, ಕುಲ, ಗೋತ್ರ, ಸುಮಂಗಲಿ, ಅಮಂಗಲಿ ಎಲ್ಲಾ ಮುಖ್ಯ ಆಗುತ್ತೆ. ಈ ಕಾಮಕ್ಕೆ ಯಾವ ಜಾತೀನೂ ಇಲ್ಲ, ಬಂಧನವೂ ಇಲ್ಲ. ಹಲವು ಮಂದಿ ಭೂತಗಳಂತೆ ಅವಳನ್ನು ಕಾಡಿಬಿಟ್ಟರು. ಒಂದು ಸಲ ತನ್ನ ದೇಹದ ಮೇಲೇನೇ ಅವಳಿಗೆ ಹೇಸಿಗೆಯಾಗಿ ಹೋಗಿ ಗಂಗೇಲಿ ಬಿದ್ಲು. ಆದರೆ ಅಲ್ಲಿ ದೋಣಿ ನಡೆಸೋನು ಬದುಕ್ಸಿದ.''

ಶಾಸ್ತ್ರಿಗಳು ಗಂಟಲು ಸರಿಮಾಡಿಕೊಂಡು ಮತ್ತೇನನ್ನೋ ಹೇಳಲು ರೆಡಿಯಾಗ್ತಿರುವಾಗ ಪಕ್ಕದ ಗಲ್ಲಿಯಲ್ಲಿ ಇದ್ದಕ್ಕಿದ್ದಂತೆ ಜನರು ಕಿರುಚಿಕೊಂಡು ಓಡುವ ಶಬ್ದ ಕೇಳಿಸಿತು. ''ಅವನೇ ಮಾಡಿದ್ದು ಹಿಡೀರಿ, ಹೊಡೀರಿ'' ಎಂದು ಹಿಂದಿಯಲ್ಲಿ ಕೂಗಿಕೊಂಡು ಜನ ಸುತ್ತಲೂ ಓಡಲು ತೊಡಗಿದರು. ಹತ್ತಿರದ ಲೈಟ್ ಕಂಬದಲ್ಲಿ ಯಾರೋ ಕರೆಂಟ್ ತೆಗೆದರು. ಎಲ್ಲೆಲ್ಲೂ ಕತ್ತಲಾವರಿಸಿದ್ದರಿಂದ ನಮ್ಮ ಮಾತುಕತೆಗೂ ತೆರೆಬಿದ್ದಿತು.

ಮುಂದಿನ ದಿನಗಳಲ್ಲಿ ಶಾಸ್ತ್ರಿಗಳು ಮತ್ತು ಅವರ ಪತ್ನಿ ರಜೆಯಲ್ಲಿ ಬರಲಿದ್ದ ತಮ್ಮ ಸಂಬಂಧಿಕರಿಗಾಗಿ ಕಾದರು. ಸೀತಾಮಾ ಹಿಂದಕ್ಕೆ ಸರಿದಳು. ನನಗೂ ಅನ್ಯ ಕೆಲಸಗಳು ಬಂದವು. ಹೋಗುತ್ತಾ ಬರುತ್ತಾ, ಸೀತಾಮಾಳನ್ನು ಅದೇ ಗುಡಿಯ ಮೇಲೆ ದಿನವೂ ನೋಡುತ್ತಿದ್ದೆ. ಅವಳಿಂದ ಹೇಳಿಸಿಕೊಳ್ಳದೆಯೇ ಒಂದೆರಡು ರೂಗಳನ್ನು ಅವಳ ಕೈಗಿಡುತ್ತಿದ್ದೆ. ಅವಳು ''ನಿನಗೆ ಒಳ್ಳೇದಾಗಲಪ್ಪ'' ಎಂದು ಕೈ ಎತ್ತಿ ಹರಸುತ್ತಿದ್ದಳು. ಭಿಕ್ಷುಕರ ಬಾಯಿ ಮಾತಿನ ಆಶೀರ್ವಾದಗಳಿಗೆ ನಾವು ಕೊಡುವ ಕಿಮ್ಮತ್ತು ಗೊತ್ತೇ ಇದೆಯಲ್ಲ.

ಸೀತಾಮಾಳ ಕತೆಯ ಬಗ್ಗೆ ಇನ್ನಷ್ಟು ವಿವರಗಳಿಗಾಗಿ ಪ್ರಯತ್ನಿಸು ಎಂದು ಧೋಂಡುಗೆ ಹೇಳಿಟ್ಟಿದ್ದೆ. ಮುಂದೊಂದು ಭಾನುವಾರ ಸಂಜೆ ವಿಶೇಷವೊಂದನ್ನು ತೋರಿಸುತ್ತೇನೆಂದು ನನ್ನನ್ನು ಕರೆದುಕೊಂಡು ಹೊರಟ. ಮನೆಗೆ ಬಂದಿದ್ದ ಅತಿಥಿಗಳೊಂದಿಗೆ, ಶಾಸ್ತ್ರಿಗಳು, ಅವರ

ಪತ್ನಿ ಮತ್ತು ನನ್ನಾಕೆ ಶಾಪಿಂಗ್‌ಗೆ ಹೊರಟದ್ದು ನನಗೆ ಸಹಕಾರಿಯಾಯಿತು. ಗಲ್ಲಿಗಳನ್ನು ದಾಟಿ ಎರಡು ರಸ್ತೆಗಳನ್ನು ಹಾಯ್ದು ಒಂದು ವಿಶಾಲವಾದ ನಿರ್ಜನ ಸ್ಥಳಕ್ಕೆ ಬಂದೆವು. ಅದು ಪಾರ್ಕೋ ಅಥವಾ ಉದ್ಯಾನವನವೋ ಇರಬೇಕು. ಅಲ್ಲಿ ಮುರಿದ ಗೋಡೆಗೆ ಒರಗಿ ಸೀತಾಮಾ ಹಳೆ ಪೇಪರ್‌ನಲ್ಲಿ ಗಾಳಿ ಬೀಸಿಕೊಳ್ಳುತ್ತಿದ್ದಳು. ಭಿಕ್ಷೆ ಬೇಡುವಂತೆ ಮಾಡಿದ ಸಮಾಜದ ಬಗ್ಗೆ ಆಕೆಗೆ ಎಷ್ಟು ಕೋಪ ಇರುತ್ತದೆ. ಜೊತೆಗೆ ಅವಳನ್ನು ಹಲವು ಗಂಡಸರು ಹಿಂಸಿಸಿರುವುದರಿಂದ ಈಗ ನನ್ನ ಬಗ್ಗೆ ಏನೆಂದುಕೊಂಡಾಳು. ನನ್ನನ್ನು ಮಾತನಾಡಿಸಿಯಾಳೇ ? ಅಥವಾ ಬೈದು ಓಡಿಸಿಯಾಳೇ ಎಂದು ಒಳಗೇ ಚಿಂತಿಸುತ್ತಾ ನಡೆದು ಅವಳ ಮುಂದೆ ನಿಂತೆ.

ಆಕೆ 'ಭಯ್ಯಾ ಆವೊ' ಎಂದಳು.

ಹಿಂದಿಯಲ್ಲಿ, ''ಸೀತಾಮಾ ಹೇಗಿದ್ದೀಯಾ ? ಗಾಯ ಎಲ್ಲಾ ವಾಸಿಯಾಯ್ತಾ? ಈಗ ಹೇಗಿದೆ?'' ಎಂದು ಮಾತು ಪ್ರಾರಂಭಿಸಿದೆ. ನನ್ನ ಹಿಂದಿ ಕೇಳಿ ಥೋಂಡು ಮಂದಸ್ಮಿತನಾದ.

'ಎಲ್ಲಾ ನನ್ನ ಪ್ರಾರಬ್ಧ ಕರ್ಮ ಕಣಪ್ಪ. ಈ ನರಕದಲ್ಲಿ ನಾನು ಇನ್ನೂ ಎಷ್ಟು ದಿನ ಹೆಳವಿಯಾಗಿ ಬಿದ್ದಿರಬೇಕೋ ಏನೊ' ಎಂದು ಹೇಳಿಕೊಳ್ಳುತ್ತಾ ನನ್ನೆಡೆಗೆ ತಿರುಗಿ 'ನೀನು ದಕ್ಷಿಣದವನಂತೆ. ಬಾ ಕುಳಿತುಕೋ' ಎಂದಳು. ಅಲ್ಲೇ ಬಿದ್ದಿದ್ದ ಹಳೇ ಪೇಪರ್ ಚೂರುಗಳನ್ನು ಸೇರಿಸಿ ಅದರ ಮೇಲೆ ಕುಳಿತೆ. ''ನಿನ್ನ ಸ್ಥಿತಿ ನೋಡಿದಾಗಿನಿಂದ ನನ್ನ ಮನಸ್ಸಿಗೆ ನೋವಾಗಿದೆ. ವಿಷಯ ತಿಳಿದುಕೊಳ್ಳಕ್ಕೆ ಅಂತ ಕೇಳ್ತಿದೀನಿ. ಇದೆಲ್ಲಾ ಹೇಗಾಯಿತು ? ನಿನ್ನ ನೋವಿಗೆ ಯಾರು ಕಾರಣ ?'' ಎಂದು ಮೆಲ್ಲಗೆ ಪ್ರಸ್ತಾಪಿಸಿದೆ.

ಅವಳು ಒಮ್ಮೆಗೇ ಅಳಲು ಪ್ರಾರಂಭಿಸಿದಳು. ಎಷ್ಟೋ ದಿನಗಳ ಕಾಲ ಅನುಭವಿಸಿದ್ದ ಅವಮಾನ, ಕಾಲಿಗೆ ಮತ್ತು ತಲೆಗೆ ಬಿದ್ದ ಪೆಟ್ಟಿನ ಯಮಯಾತನೆ, ಅವಳ ಮನಸ್ಸಿನಲ್ಲಿ, ಹೆಪ್ಪುಗಟ್ಟಿತ್ತು. ಸಮಾಜದಿಂದ ತಿರಸ್ಕೃತಳಾದೆನೆಂಬ ನೋವು ಅದರಲ್ಲಿತ್ತೆಂದು ಕಾಣುತ್ತೆ. ನಕ್ಕು ಮನಸನ್ನು ಹಗುರಗೊಳಿಸಿಕೊಳ್ಳುವುದು ಒಂದು ಬಗೆಯಾದರೆ ಅತ್ತು ಕಣ್ಣೀರು ಸುರಿಸಿ ದುಗುಡವನ್ನು ಕಡಿಮೆ ಮಾಡಿಕೊಳ್ಳುವುದು ಇನ್ನೊಂದು ಬಗೆಯದು. ನಾನು ಮೆಲ್ಲನೆ ''ಮಾ ರೋ ಮತ್'' ಎಂದೆ. ಕಣ್ಣೀರೊರೆಸಿಕೊಂಡು ಸೀತಾಮಾ ಹೇಳಿದಳು: ''ಇದು ನನ್ನ ದುರಾಸೆಗೆ ಸಿಕ್ಕ ಫಲ. ಸಮಾಜ ಮಾಡುವ ತಪ್ಪನ್ನು ಎತ್ತಿ ತೋರಿಸಲು ಹೋದವರೊಂದಿಗೆ ಕೈ ಜೋಡಿಸಿದ್ದಕ್ಕೆ ಆ ಶೀತಲ ಮಾತೆ ಕೊಟ್ಟ ಶಿಕ್ಷೆಯಿದು. ಹೊರಗಿನವರ ತಾಳಕ್ಕೆ ನಾನು ಕುಣಿದೆ. ಅದಕ್ಕೆ ಈ ಕಾಲು ಮುರಿಯಿತು. ನಾನು ಅವರಂತೆ ಯೋಚಿಸಿದ್ದಕ್ಕಾಗಿ ಈ ತಲೆಗೆ ಏಟು ಬಿದ್ದಿತು. ಎಲ್ಲಕ್ಕೂ ನಾನು, ನನ್ನ ದೇಹ ಮತ್ತು ಮನಸ್ಸೇ ಕಾರಣ. ನನ್ನ ಪ್ರಾರಬ್ಧ ಕರ್ಮಕ್ಕೆ ಯಾರನ್ನು ಯಾಕೆ ಬಯ್ಯಲಿ ? ಎಲ್ಲಾ ನನ್ನ ಗ್ರಹಚಾರ'' ಎಂದು ಹೇಳಿ ಒಂದು ಕ್ಷಣ ಮೌನಿಯಾದಳು.

ಈ ದೇಶದ ಹೆಂಗಸರಿಗೆ ತಾತ್ವಿಕವಾಗಿ ಮಾತನಾಡುವುದು ತುಂಬಾ ಸುಲಭದ ಕೆಲಸ. ಹೊಡೆದು, ಬಡಿದು, ಹಿಂಸಿಸಿದರೂ ಗಂಡನೇ ದೇವರು. ಇವಳನ್ನು ಹಿಂಸಿಸಿದ್ದು, ನರಳು ವಂತೆ ಮಾಡಿದ್ದು ಗಂಡಸರು. ಆದರೂ ತನ್ನನ್ನೇ ತಾನು ಹಳಿದುಕೊಳ್ಳುತ್ತಿದ್ದಾಳಲ್ಲ. 'ಸೀತಾ' ಎನ್ನುವ ಹೆಸರು ಅನ್ವರ್ಥವಾಯಿತೆ ಈಕೆಗೆ ಎಂದುಕೊಳ್ಳುತ್ತಿರುವಾಗಲೇ ಮಾತು ಮುಂದುವರೆಸಿದಳು.

''ನೋಡಪ್ಪ, ಹೋದ ವರ್ಷ ಈ ಊರಿಗೆ ಸಿನಿಮಾ ತೆಗೆಯುವವರು ಬಂದರು. ನಾನು ಕೆಲಸ ಮಾಡುತ್ತಿದ್ದ ಮನೆಯೊಂದಕ್ಕೆ ಬಂದ ಆ ಹೆಂಗಸು ಮನೆಯಾಕೆಯ ಶಿಫಾರಸಿನ ಮೇಲೆ ನನ್ನನ್ನು ಸಿನಿಮಾಕ್ಕೆ ಸೇರಿಸಿಕೊಳ್ಳುವುದಾಗಿ ಹೇಳಿದಳು. ಸದ್ಯ ನನ್ನ ಕಷ್ಟದ ದಿನಗಳು ಕಳೆದರೆ ಸಾಕೆಂದುಕೊಂಡು ಬರುತ್ತೇನೆಂದೆ. ಇನ್ನು ಎರಡು ಹೊತ್ತಿನ ಊಟಕ್ಕೆ ತೊಂದರೆಯಾಗುವುದಿಲ್ಲ ಎಂದು ಲೆಕ್ಕಾಚಾರ ಹಾಕಿದೆ. ನನ್ನಂಥ ಇತರ ಹತ್ತಾರು ಹೆಂಗಸರನ್ನು ಕರೆದುಕೊಂಡು ಬರಲು ಆ ಸಿನಿಮಾದವಳು ಹೇಳಿದಳು. ಅದರಂತೆ ನಾನು ಊರೆಲ್ಲಾ ಸುತ್ತಿ ಹನ್ನೆರಡು ಮಂದಿ ಮಧ್ಯವಯಸ್ಸಿನ ಹೆಂಗಸರನ್ನು ಕರೆತಂದೆ.

''ಆಕೆ ನಮ್ಮೆಲ್ಲರನ್ನೂ ಒಂದೆಡೆ ಕೂಡಿಸಿ ಸಿನಿಮಾದ ಕತೆ ಹೇಳಿದಳು. ಸ್ವಾತಂತ್ರ್ಯಕ್ಕಾಗಿ ಗಾಂಧೀ ಹೋರಾಡುತ್ತಿದ್ದ ಕಾಲದಲ್ಲಿ ಈ ಸಿನಿಮಾ ಕತೇನೂ ನಡೆಯುತ್ತೆ. ಬಾಲ ವಿಧವೆಯ ಕತೆಯಲ್ಲಿ ನಮ್ಮದು ಸೇವಾದಾಸಿಯರ ಪಾತ್ರ. ನಾವುಗಳೂ ಕೇಶ ಮುಂಡನ ಮಾಡಿಸಿ ಕೊಂಡು ಆಶ್ರಮದಲ್ಲಿರಬೇಕು. ಬಾಲವಿಧವೆಯ ಸುತ್ತಲಿನ ಗಂಡಸರು ಪಿಶಾಚಿಗಳಂತೆ ಕಾಡಿ ತಮ್ಮ ತೀಟೆ ತೀರಿಸಿಕೊಳ್ಳುತ್ತಾರೆ. ಅವಳು ಇಂಥ ನರಕ ಕೂಪದಲ್ಲಿ ಬಿದ್ದು ನರಳುತ್ತಿರುವಾಗಲೂ ಅವಳ ಮನಸ್ಸು ಯುವಕನೊಬ್ಬನ ಮೇಲಿರುತ್ತದೆ. ಜನಸಾಮಾನ್ಯರು ಪಾಪಗಳನ್ನು ತೊಳೆಯುವ ಗಂಗೆಯ ದಡದಲ್ಲಿಯೇ ಇವೆಲ್ಲಾ ನಡೆದು ಹೋಗುತ್ತದೆ... ಇದೇ ನನ್ನ ಕತೆ. ನಿನಗೂ ಗೊತ್ತಿರಬೇಕಲ್ಲವೆ?'' ನಾನು ಹೂ ಗುಟ್ಟಿದೆ. ''ಆದರೆ ನೋಡು ಈ ಗಂಡು ಜಾತಿ ತನ್ನ ವಿರುದ್ಧ ಯಾರಾದರೂ ಸೆಟೆದು ನಿಂತರೆ ಏನ್ಮಾಡ್ತಾರೇಂತ. ಸಿನಿಮಾದವರು ಗಂಗೆಗೆ ಅಪಪ್ರಚಾರ ಮಾಡಿ ದೇಶದ ಸಂಸ್ಕೃತಿಗೇ ಮಸಿ ಬಳೀತಾರೆ ಅಂತ ಗಲಾಟೆ ಎಬ್ಬಿಸಿದರು. ಆ ಗಲಾಟೆಯ ಹಿಂದೆ ಒಂದು ದೊಡ್ಡ ಪಿತೂರಿಯೇ ಇತ್ತು ಅಂತ ಕಾಣುತ್ತೆ. ಒಂದು ದಿನ ಒಂದು ಚಿತ್ರೀಕರಣಕ್ಕಾಗಿ ನಿರ್ಮಿಸಿದ್ದ ಇಡೀ ಸೆಟ್ಟನ್ನು ಈ ಜನ ಧ್ವಂಸ ಮಾಡಿದರು. ಅಲ್ಲಿ ಸೇರಿದ್ದ ನಮ್ಮ ಮೇಲೆ ಹಲ್ಲೆ ಮಾಡಿ ಅಲ್ಲಿಂದ ಓಡಿಸಿದರು. ಆಗ ನಡೆದ ಗಲಾಟೆಯಲ್ಲಿ ಯಾವನೋ ನನ್ನ ಕಾಲಿಗೆ ಮತ್ತು ತಲೆಗೆ ಲಟ್ಟಾದಿಂದ ಹೊಡೆದ. ನನ್ನ ಜೊತೆಗೆ ಬಂದಿದ್ದ ಹಲವು ಹೆಂಗಸರಿಗೂ ಇದೇ ಗತಿಯಾಗಿದೆ. ಮನೆಗಳಿದ್ದವರು ಮನೆಗಳಲ್ಲಿ, ನನ್ನಂಥ ನಿರ್ಗತಿಕರು ಹೀಗೆ ಬೀದಿಯಲ್ಲಿ ಬಿದ್ದು ನರಳ್ತಾಯಿದೀವಿ. ನನಗೆ ಯಾವತ್ತು ಸಾವು ಬರುತ್ತೋ ಗೊತ್ತಿಲ್ಲ, ಅಲ್ಲಿಯವರೆಗೂ ಹೀಗೆ ನರಳ ಬೇಕೆಂದು ಹಣೇಲಿ ಬರೆದಿದೆ ಅಂತ ಕಾಣುತ್ತೆ. ಈಗ ಔಷಧಿ ತೆಗೆದುಕೊಳ್ಳಲೂ ಹಣ ಇಲ್ಲ.''

''ಸಿನಿಮಾ ನಟಿಯರಿಗೆ ಏನೂ ಆಗಲಿಲ್ಲವೇ ?''

''ಅವರಿಗೂ ಏಟು ಬಿತ್ತು. ಅವರಿಗಾದರೋ ಎಲ್ಲರೂ ಇದಾರೆ. ದೊಡ್ಡ ಡಾಕ್ಟರುಗಳ ಹತ್ತಿರ ಚಿಕಿತ್ಸೆ ಪಡೀತಾರೆ. ಆದರೆ ನಾವು ಬೀದೀಲಿ ಬಿದ್ದು ಒದ್ದಾಡಬೇಕಿದೆ. ನಾನು ಕೆಲಸ ಮಾಡುತ್ತಿದ್ದ ಮನೆಗಳವರು ಬಂದು ಹೋದರು. ಕೆಲವರು ಸ್ವಲ್ಪ ಹಣಾನೂ ಕೊಟ್ಟರು. ಶಾಸ್ತ್ರಿಗಳೂ ಅವರ ಹೆಂಡತಿ ಇಲ್ಲಿಗೆ ಬಂದು ಹಣ್ಣು ಔಷಧಿ ಎಲ್ಲಾನೂ ತಂದುಕೊಟ್ಟರು. ಅಂಥ ಒಳ್ಳೆ ಬುದ್ಧಿ ಎಷ್ಟು ಜನರಿಗೆ ಇರುತ್ತೆ ನೀನೇ ಹೇಳು ? ಆದರೆ ಅವರೂ ಎಷ್ಟು ದಿನ ಅಂತ ಮಾಡ್ತಾರೆ'' ಎಂದು ಅಳಲು ಪ್ರಾರಂಭಿಸಿದಳು. ಸ್ವಲ್ಪ ಸಮಾಧಾನ ಆದ ಮೇಲೆ ಶೀತಲ ಮಾತೆಯ ದೇವಸ್ಥಾನ ಇರುವ ಕಡೆಗೆ ತಿರುಗಿ ಕೈ ಮುಗಿದು ಮುಂದುವರೆಸಿದಳು. ''ಶಾಸ್ತ್ರಿಗಳು ಹೇಳಿದ ಮೇಲೆ ಮಲ್ಲಿಕಾರ್ಜುನ ಅನ್ನೋ ಟಾಂಗಾದವನು ನನ್ನನ್ನು ಕೆಲವು ದಿನ ಆ ಶೀತಲ ಮಾತೆಯ ಮಂದಿರದ ಬಳಿ ಬಿಡ್ತಾನೆ. ದೊಡ್ಡ ದೊಡ್ಡ ದೇವಸ್ಥಾನಗಳ ಬಳಿ ಹೋದರೆ ಈ ಜನ ಬಿಡೋಲ್ಲ, ಪೊಲೀಸರೂ ಬಿಡೋಲ್ಲ. ಈ ಶೀತಲ ಮಾತೆ ಬಡವರ ದೇವತೆ. ಜಾಡಮಾಲಿಗಳು ಮತ್ತು ಇತರೆಯವರು ಪೂಜೆ ಮಾಡ್ತಾರೆ. ಅದಕ್ಕೇ ನಾನು ಅಲ್ಲಿಯೇ ಭಿಕ್ಷೆ ಬೇಡ್ತಾ ಬಿದ್ದಿರೋದು. ಯಾವತ್ತಿಗೆ ಇದೆಲ್ಲಾ ವಾಸಿಯಾಗುತ್ತೋ ಗೊತ್ತಿಲ್ಲ ಇದು ಒಂದು ನರಕ'' ಎನ್ನುತ್ತಾ ಜೋರಾಗಿ ಅಳಲು ಮೊದಲುಮಾಡಿದಳು. ಅವಳ ಮುಂದಿನ ಒಂದೆರಡು ವಾಕ್ಯಗಳು ಕೇಳಿಸಲೇ ಇಲ್ಲ. ಮೊದಲು ಧೈರ್ಯ ತೋರಿಸಿದವಳು ಮಾತನಾಡುತ್ತಾ ತೀರ ಅಧೀರಳಾದಂತೆ ಕಂಡಳು. ಮಧ್ಯೆ ಮಧ್ಯೆ ಕಣ್ಣೀರನ್ನು ಒರೆಸಿಕೊಂಡಳು. ಅವಳ ದುಃಖದ ಕಟ್ಟೆ ಒಡೆದಿತ್ತು. ಕ್ಷಣಕಾಲದಲ್ಲಿ ಸಮಾಧಾನ ತಂದುಕೊಂಡಳು. ತಾನು ನಿತ್ಯವೂ ಪೂಜಿಸುತ್ತಿದ್ದ ಶೀತಲ ಮಾತೆಯೇ ತನಗೆ ಈ ವಿಕಾರ ರೂಪ ಕೊಟ್ಟು ರಣಹದ್ದುಗಳಿಂದ ರಕ್ಷಿಸಿದಳೆಂದು .... ಹೇಳುತ್ತಾ ಮತ್ತೆ ಬಿಕ್ಕಿದಳು.

ಅವಳ ಅಳು ಆಚೀಚೆ ಮಲಗಿದ್ದವರನ್ನು ಎಬ್ಬಿಸಿರಬೇಕು. ದೂರದಲ್ಲಿ ಕ್ರಿಕೆಟ್ ಆಡುತ್ತಿದ್ದ ಮಕ್ಕಳು ಬಂದು ಸುತ್ತಲೂ ನಿಂತು ಮಿಕ ಮಿಕ ನೋಡತೊಡಗಿದರು. ನಮ್ಮಿಬ್ಬರಿಗೆ ಅಲ್ಲಿ ಕುಳಿತುಕೊಳ್ಳುವುದಕ್ಕೆ ಮುಜುಗರವಾಯಿತು. ಥೋಂಡು, ''ಸೀತಾಮಾ ಅಳು ನಿಲ್ಲಿಸು. ಈ ಜನ ನಾವು ನಿನಗೆ ಏನೋ ಮಾಡಿದ್ವಿ ಅಂದ್ಕೊಂಡರೆ ಕಷ್ಟ,'' ಎಂದು ಮೆಲ್ಲಗೆ ಹೇಳಿದ. ಅವಳು ಅಳುವನ್ನು ನಿಲ್ಲಿಸಿ ಕಣ್ಣೀರನ್ನು ಒರೆಸಿಕೊಂಡು, ''ಸೂವರ್ ಕೆ ಬಚ್ಚೆ... ಯಹಾ ಕ್ಯಾ ದೇಖ್ ರಹೆ ಹೋ. ನಿಕಲ್ ಜಾವೋ ಯಹಾಸೆ...'' ಎಂದು ಹತ್ತಿರದಲ್ಲಿದ್ದ ತನ್ನ ಕೋಲನ್ನೆತ್ತಿ ನೆಲಕ್ಕೆ ಬಡಿದಳು. ಮಕ್ಕಳಾದಿಯಾಗಿ ಎಲ್ಲರೂ ಕಾಲಿಗೆ ಬುದ್ಧಿ ಹೇಳಿದರು. ಆಕೆಯ ಔಷಧೋಪಚಾರಕ್ಕಾಗಿ ಸ್ವಲ್ಪ ಹಣ ಕೊಟ್ಟೆ. ಅವಳು ಶಾಂತಳಾದ ಮೇಲೆ ಅಲ್ಲಿಂದ ಹೊರಟೆವು. ಹೃದಯ ಭಾರವಾಗಿತ್ತು.

ನಾನು ಮತ್ತು ಶಾಸ್ತ್ರಿಗಳು ಒಂದೆರಡು ಬಾರಿ ಸೀತಾಮಾಳ ಬಗ್ಗೆ ಮಾತನಾಡಿಕೊಂಡೆವು. ವಾಟರ್ ಚಿತ್ರದ ಕತೆಯಾಗಲಿ, ಸೀತಾಮಾಳ ಕತೆಯಾಗಲಿ ಕಾಶಿಯ ಕಾಮಾಂಧರ ಅಟ್ಟಹಾಸಕ್ಕೆ ಕೇವಲ ಉದಾಹರಣೆಗಳು ಮಾತ್ರ. ಅಪರಿಚಿತನನ್ನು ಈ ಊರಿನ ಗಲ್ಲಿಗಳೊಳಗಿನ ಗಲ್ಲಿಗಳ ಚಕ್ರವ್ಯೂಹ ಹೆದರಿಸಿ ದಾರಿ ತಪ್ಪಿಸಿದರೆ ಅತೃಪ್ತ ಕಾಮಾಂಧರು, ಹಣವಂತರು, ಲಂಪಟರು, ಮುಗ್ಧ ಹೆಂಗಸರನ್ನು, ಅಬಲೆಯರನ್ನು ಚಕ್ರವ್ಯೂಹದೊಳಗೆ ಎಳೆದು ಹಿಂಸಿಸಿ ಹೀರಿ ಕಬ್ಬಿನ ಸಿಪ್ಪೆ ಬಿಸಾಕುವಂತೆ ಹೊರದಬ್ಬುತ್ತಾರೆ. ಇದೆಲ್ಲಾ ತೆರೆಯ ಮರೆಯಲ್ಲಿ ನಡೆಯುವ, ಯಾರೂ ವರದಿ ಮಾಡದ, ವರದಿ ಮಾಡಲೊಪ್ಪದ, ಅಂದು ಇಂದು ನಿತ್ಯ ನಡೆಯುವ ಘಟನೆಗಳು. ಇದಕ್ಕೆಲ್ಲಾ ಸಾಕ್ಷಿಯೆಂಬಂತೆ ಗಂಗೆ ಪ್ರಶಾಂತವಾಗಿ ಹರಿಯುತ್ತಿದ್ದಾಳೆ.

ಸಿ. ಎಸ್. ನಂಜುಂಡಯ್ಯ
ಸಿ. ಎಚ್. ೪೩, ''ಅಚ್ಚೋದ'' ಬಸವನಗುಡಿ, ೫ನೇ ಕ್ರಾಸ್
ಶಿವಮೊಗ್ಗ - ೫೭೭ ೨೦೧



# ಇರಾಕ್ ಯುದ್ಧ : ಒಂದು ಪ್ರಣಾಳಿಕೆ

ನಾ. ದಿವಾಕರ

ಪ್ರಸ್ತುತ ಇರಾಕಿನ ಅಮಾಯಕ ಜನತೆಯ ಮೇಲೆ ಅಮೆರಿಕಾದ ಜಂಟಿ ಪಡೆಗಳು ನಡೆಸಿದ ದುರಾಕ್ರಮಣ, ಅಮೆರಿಕಾದ ಸಾಮ್ರಾಜ್ಯಶಾಹಿ ಸ್ವರೂಪಕ್ಕೆ ಕೈಗನ್ನಡಿಯಂತಿದೆ. ಅಮೆರಿಕಾದ ಈ ಯುದ್ಧಕ್ಕೆ ಯಾವುದೇ ಅರ್ಥವಿಲ್ಲ. ತನ್ನ ದುರಾಕ್ರಮಣವನ್ನು ಸಮರ್ಥಿಸಿಕೊಳ್ಳಲು ಅಮೆರಿಕಾ ನೀಡುವ ಎಲ್ಲಾ ಕಾರಣಗಳೂ ಅರ್ಥಹೀನ. ಇರಾಕಿಗೆ ಶಸ್ತ್ರಾಸ್ತ್ರ ತನಿಖಾ ತಂಡವನ್ನು ಕಳುಹಿಸಿದ್ದು ಕೇವಲ ಒಂದು ನಾಟಕವಷ್ಟೆ ಎಂದು ಈಗ ಸಾಬೀತಾಗಿದೆ. ಈ ಶಸ್ತ್ರಾಸ್ತ್ರ ತನಿಖೆ ನಡೆಯುತ್ತಿದ್ದ ಸಮಯದಲ್ಲೇ ಅಮೆರಿಕಾದ ಪಡೆಗಳು ಇರಾಕಿನಲ್ಲಿ ಬೀಡು ಬಿಟ್ಟಿದ್ದವು. ಇರಾಕಿನಲ್ಲಿ ಮಾರಕ ಶಸ್ತ್ರಾಸ್ತ್ರಗಳು (ವೆಪನ್ಸ್ ಆಫ್ ಮಾಸ್ ಡಿಸ್ಟ್ರಕ್ಷನ್) ಇರುವುದು ಇಲ್ಲದಿರುವುದು ಅಪ್ರಸ್ತುತವಾಗಿತ್ತು. ಇರಾಕಿನ ವಿರುದ್ಧ ಯುದ್ಧ ಮಾಡುವುದು ಒಂದು ಪೂರ್ವನಿಯೋಜಿತ ಕಾರ್ಯಕ್ರಮವಾಗಿತ್ತು. ಈ ಶಸ್ತ್ರಾಸ್ತ್ರಗಳ ತನಿಖೆಯ ನಾಟಕ ಈಗ ಬಯಲಾಗಿದೆ. ತನಿಖಾತಂಡಕ್ಕೆ ಮಾರಕ ಶಸ್ತ್ರಾಸ್ತ್ರಗಳ ಬಗ್ಗೆ ಯಾವುದೇ ಮಾಹಿತಿ ದೊರೆತಿಲ್ಲ. ಕಡೆಯದಾಗಿ ಇರಾಕಿಗೆ ತೆರಳಿದ್ದ ಈ ತನಿಖಾ ತಂಡವು ಅಲ್ಲಿನ ಶೇ. ೯೫ರಷ್ಟು ಮಾರಕ ಶಸ್ತ್ರಾಸ್ತ್ರಗಳನ್ನು ನಾಶಪಡಿಸಿರುವುದಾಗಿ ಘೋಷಿಸಿದೆ. ಇನ್ನುಳಿದ ಶಸ್ತ್ರಾಸ್ತ್ರಗಳು ಇರಾಕಿನ ರಕ್ಷಣೆಗೆ ಸಾಲದೆಂದು ಖಾತರಿಯಾದ ನಂತರವೇ ಅಮೆರಿಕಾ ಆಕ್ರಮಣ ಆರಂಭಿಸಿದ್ದು. ಕಳೆದ ಒಂದು ದಶಕದ ಆರ್ಥಿಕ ದಿಗ್ಬಂಧನದಿಂದ ಇರಾಕಿನ ಶಸ್ತ್ರಾಸ್ತ್ರ ಬಲ ಕುಂದಿದ್ದೂ ಸಹಜ. ಹಾಗಾಗಿಯೇ ವಿಶ್ವದಲ್ಲಿಯೇ ಅತ್ಯಂತ ಅಪಾಯಕಾರಿ ವಿನಾಶಕಾರಿ ಮಾರಕ ಶಸ್ತ್ರಾಸ್ತ್ರಗಳನ್ನು ಹೊಂದಿರುವ ಅಮೆರಿಕಾ ಇರಾಕನ್ನು ನಿರ್ನಾಮ ಮಾಡಲು ಸುಲಭ ಸಾಧ್ಯವಾಯಿತು.




ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಇರಾಕ್ ಮೇಲಿನ ಆಕ್ರಮಣದ ಬಗ್ಗೆ ಕಳೆದ ಕ್ರಿಸ್‌ಮಸ್‌ಗೆ ಮುನ್ನವೇ ಪೆಂಟಗನ್‌ನಲ್ಲಿ ನೀಲಿ ನಕ್ಷೆ ತಯಾರಾಗಿತ್ತು. ಹಾಗಾಗಿ ವಿಶ್ವಸಂಸ್ಥೆಯ ತನಿಖಾ ತಂಡ ಕೇವಲ ತೋರಿಕೆಯ ತಂತ್ರವಾಗಿತ್ತು. ಅಮೆರಿಕಾಗೆ ಮುಖ್ಯವಾಗಿ ಬೇಕಿದ್ದುದು ಇರಾಕಿನ ಆಡಳಿತ ವರ್ಗದ ಬದಲಾವಣೆ. ಸದ್ದಾಂ ಹುಸೇನ್ ಬದಲಿಗೆ ಕೈಗೊಂಬೆ ಸರ್ಕಾರವನ್ನು ಕೂರಿಸುವುದೇ ಸಾಮ್ರಾಜ್ಯಶಾಹಿಗಳ ಮುಖ್ಯ ಉದ್ದೇಶವಾಗಿತ್ತು. ಆದರೂ ತಮ್ಮ ಪ್ರಜಾತಾಂತ್ರಿಕ ಮುಖವಾಡವನ್ನು ರಕ್ಷಿಸಿಕೊಳ್ಳಲು ಸಾಮ್ರಾಜ್ಯಶಾಹಿಗಳು, ವಿಶ್ವಸಂಸ್ಥೆಯ ಒಡಂಬಡಿಕೆಯಿಂದ ಈ ನಾಟಕವಾಡುವುದು ಅವಶ್ಯವಾಗಿತ್ತು. ಕಾರಣವಿಲ್ಲದೆ ಅಮೆರಿಕಾ ಯಾವುದೇ ದೇಶದ ವಿರುದ್ಧ ಆಕ್ರಮಣ ಮಾಡುವುದಿಲ್ಲ ಎಂದು ಜಗತ್ತಿಗೆ ನಿರೂಪಿಸುವ ದೃಷ್ಟಿಯಿಂದ ಈ ಕಪಟ ನಾಟಕ ಅಗತ್ಯವಾಗಿತ್ತು. ಆದರೆ ಅಮೆರಿಕಾ ಈ ಯುದ್ಧವನ್ನು ಭಯೋತ್ಪಾದನೆ ವಿರುದ್ಧ ಸಮರ ಎಂದು ಸಾರುವುದು ಹಾಸ್ಯಾಸ್ಪದ. ಇರಾಕ್ ಹಾಗೂ ಆಲ್ ಖೈದಾ ನಡುವೆ ಸಂಬಂಧ ಇದೆ ಎಂದು ಯಾವುದೇ ರೀತಿಯಿಂದಲೂ ನಿರೂಪಿತವಾಗಿಲ್ಲ. ಉತ್ತರ ಇರಾಕ್‌ನಲ್ಲಿ ಸಿ.ಐ.ಎ. ಸೆರೆ ಹಿಡಿದಿರುವ ಆಲ್ ಖೈದಾ ಗುಂಪು ಬಾಗ್ದಾದ್‌ನ ಆಳ್ವಿಕೆಗೆ ಒಳಪಡದ ಪ್ರದೇಶದಲ್ಲಿದೆ. ಗಮನಾರ್ಹ ಅಂಶವೆಂದರೆ ಬಾಗ್ದಾದ್ ಸರ್ಕಾರ ಎಂದೂ ಮೂಲಭೂತವಾದಿಗಳಿಗೆ ಬೆಂಬಲ ನೀಡಿರಲಿಲ್ಲ. ಆದರೂ ಅಮೆರಿಕಾ ಇರಾಕ್ ಮತ್ತು ಆಲ್ ಖೈದಾ ನಡುವೆ ಸಂಬಂಧ ಬೆಸೆಯಲು ಯತ್ನಿಸುತ್ತಿದೆ. ಸೆಪ್ಟೆಂಬರ್ ೧೧ರ ಆಕ್ರಮಣದಲ್ಲಾಗಲೀ ವಿಮಾನ ಅಪಹರಣದಲ್ಲಾಗಲೀ, ಸೌದಿ ಅರೇಬಿಯಾದ ಕೆಲವರು ಇದ್ದರೇ ಹೊರತು ಇರಾಕ್ ನಾಗರಿಕರಿರಲಿಲ್ಲ. ಆದರೂ ಭಯೋತ್ಪಾದನೆಯನ್ನು ಅಳಿಸಿಹಾಕುವ ನೆಪದಲ್ಲಿ ಅಮೆರಿಕಾ ಬಾಗ್ದಾದ್ ಮೇಲೆ ದಾಳಿ ನಡೆಸುವುದೇ ಹೊರತು ರಿಯಾದ್ ಮೇಲಲ್ಲ.

ಅಮೆರಿಕಾ ಈ ದುರಾಕ್ರಮಣವನ್ನು ಸಮರ್ಥಿಸಿಕೊಳ್ಳಲು ನೀಡುವ ಇನ್ನೊಂದು ಕಾರಣ ಎಂದರೆ ಪ್ರಜಾತಾಂತ್ರಿಕ ರಕ್ಷಣೆ. ಇರಾಕಿನಲ್ಲಿ ನಿಜವಾದ ಪ್ರಜಾಸತ್ತಾತ್ಮಕ ಸರ್ಕಾರವನ್ನು ಸ್ಥಾಪಿಸುವುದು ಬುಷ್ ಅಂಡ್ ಕಂಪನಿಯ ಧ್ಯೇಯವಲ್ಲ. ಆದರೆ ಅಮೆರಿಕಾಗೆ ತನ್ನ ಆದೇಶದಂತೆ ನಡೆಯುವ ಗುಲಾಮೀ ಸರ್ಕಾರದ ಆವಶ್ಯಕತೆಯಿದೆ. ಆಫ್ಘಾನಿಸ್ತಾನದಂತೆ ಇಲ್ಲಿಯೂ ತನ್ನ ಆಧಿಪತ್ಯ ಸಾಧಿಸಲು ಅಮೆರಿಕಾ ಹೆಣಗುತ್ತಿದೆ. ಇರಾಕ್‌ನಲ್ಲಿ ಪ್ರಜಾತಂತ್ರವಿಲ್ಲ ಎಂದು ಮೊಸಳೆ ಕಣ್ಣೀರು ಸುರಿಸುವ ಬುಷ್ ಮತ್ತು ಬ್ಲೇರ್ ಸೌದಿ ಅರೇಬಿಯಾದಲ್ಲಿ ಚುನಾವಣೆ, ವಾಕ್ ಸ್ವಾತಂತ್ರ್ಯವೇ ಇಲ್ಲವೆಂಬ ಅಂಶವನ್ನು ಗಮನಿಸಿಲ್ಲವೇ ? ಸೌದಿ ಅರೇಬಿಯಾದಲ್ಲಿ ಮಹಿಳೆಯರು ವಾಹನ ಚಾಲನೆ ಮಾಡಿದರೆ ಶಿಕ್ಷೆಗೊಳಪಡುತ್ತಾರೆ. ಕಳ್ಳರ ಕೈಕಾಲುಗಳನ್ನು ತುಂಡರಿಸಲಾಗುತ್ತದೆ, ವೇಶ್ಯಾವಾಟಿಕೆ ಮಾಡಿದವರನ್ನು ಕಲ್ಲಿನಿಂದ ಹೊಡೆದು ಸಾಯಿಸಲಾಗುತ್ತದೆ. ಇನ್ನು ಅಮೆರಿಕಾದ ಮಿತ್ರ ರಾಷ್ಟ್ರ ಟರ್ಕಿಯಲ್ಲಿ ಮಾನವ ಹಕ್ಕುಗಳ ಉಲ್ಲಂಘನೆ ನಿರಂತರವಾಗಿ ನಡೆಯುತ್ತಲೇ ಇದೆ. ಸಾವಿರಾರು ಕಾರ್ಮಿಕ ನಾಯಕರನ್ನು ಸೆರೆವಾಸದಲ್ಲಿ ಚಿತ್ರಹಿಂಸೆಗೆ ಒಳಪಡಿಸಲಾಗಿದೆ. ಕುರ್ದ್ ಜನಾಂಗದವರನ್ನು ಕಳೆದ ಒಂದು ದಶಕದಿಂದಲೂ ಶೋಷಿಸಲಾಗುತ್ತಿದೆ. ಆದರೂ ಅಮೆರಿಕಾ ಈ ಎರಡೂ ದೇಶಗಳನ್ನು ಮಿತ್ರ ರಾಷ್ಟ್ರಗಳೆಂದು ಪರಿಗಣಿಸುತ್ತದೆ. ಈ ಮೈತ್ರಿಕೂಟವು ಪ್ರಜಾತಂತ್ರ ಸ್ಥಾಪನೆಗಾಗಿ ಹೋರಾಡುವುದು ಹಾಸ್ಯಾಸ್ಪದವೆನಿಸುತ್ತದೆ. ಸದ್ದಾಂ ಹುಸೇನ್ ಒಬ್ಬ ಸರ್ವಾಧಿಕಾರಿ ಎಂಬ ಅಂಶವನ್ನು ಅಲ್ಲಗಳೆಯಲಾಗುವುದಿಲ್ಲವಾದರೂ, ಅಮೆರಿಕಾ ಬ್ರಿಟನ್ ಸರ್ಕಾರಗಳು ಸದ್ದಾಂನನ್ನು ಮುಂಚಿನಿಂದಲೂ ಬೆಂಬಲಿಸುತ್ತಲೇ ಬಂದಿವೆ. ಸದ್ದಾಂ ಹುಸೇನ್ ಕುರ್ದ್ ಜನಾಂಗದ ವಿರುದ್ಧ ರಾಸಾಯನಿಕ ಅಸ್ತ್ರಗಳನ್ನು ಬಳಸಿದಾಗ ಅಮೆರಿಕಾ ಮೂಕ ಪ್ರೇಕ್ಷಕನಾಗಿದ್ದುದು ಈಗ ಇತಿಹಾಸ. ತಮ್ಮ ಅವಶ್ಯಕತೆಗಳನ್ನು ಪೂರೈಸಿದರೆ ಸಾಮ್ರಾಜ್ಯಶಾಹಿ ರಾಷ್ಟ್ರಗಳು ಎಂತಹ ಸರ್ವಾಧಿಕಾರಿಯನ್ನಾದರೂ ಬೆಂಬಲಿಸುತ್ತವೆ ಎನ್ನಲು ಇರಾಕ್ ಉತ್ತಮ ನಿದರ್ಶನ. ಸದ್ದಾಂ ಹುಸೇನನ್ನು ಪದಚ್ಯುತಗೊಳಿಸುವುದು ಇರಾಕಿ ಜನತೆಯ ಕೆಲಸವೇ ಹೊರತು ಅನ್ಯ ರಾಷ್ಟ್ರಗಳದ್ದಲ್ಲ.

ಆದರೆ ಪ್ರಸ್ತುತ ರಾಜಕಾರಣದಲ್ಲಿ ಯುದ್ಧವೇ ಎಲ್ಲವನ್ನೂ ನಿರ್ಧರಿಸುತ್ತದೆ. ಅಂತರರಾಷ್ಟ್ರೀಯ ಸಂಬಂಧಗಳನ್ನು ಯುದ್ಧಗಳೇ ನಿರ್ಧರಿಸುತ್ತವೆ. ೧೯೪೫ರಲ್ಲಿ ಸ್ಥಾಪಿತವಾದ ಸಂಬಂಧಗಳನ್ನು ಈ ಯುದ್ಧಗಳು ಬದಲಾಯಿಸುತ್ತವೆ. ಇದರ ಪರಿಣಾಮಗಳನ್ನು ಜಗತ್ತು ಇನ್ನೂ ಹಲವು ದಶಕಗಳ ಕಾಲ ಅನುಭವಿಸಬೇಕಾಗುತ್ತದೆ. ಇರಾಕ್ ಯುದ್ಧ ಆಕಸ್ಮಿಕವಾಗಿ ಉಂಟಾದದ್ದೇನೂ ಅಲ್ಲ. ಜಾಗತಿಕ ಮಟ್ಟದಲ್ಲಿ ಬಂಡವಾಳಶಾಹಿ ಎದುರಿಸುತ್ತಿರುವ ತೀವ್ರ ಬಿಕ್ಕಟ್ಟಿನ ಪ್ರತಿಫಲವೇ ಯುದ್ಧಗಳ ಮೂಲಕ ವ್ಯಕ್ತವಾಗುತ್ತಿದೆ. ''ಅವಶ್ಯಕತೆ ಆಕಸ್ಮಿಕ ಅಪಘಾತಗಳ ಮೂಲಕ ವ್ಯಕ್ತವಾಗುತ್ತದೆ'' ಎಂದು ಹೆಗೆಲ್ ಹೇಳುತ್ತಾನೆ. ಹಾಗೆಯೇ ಬುಷ್, ರಮ್ಸ್‌ಫೆಲ್ಡ್, ಬ್ಲೇರ್ ಅವರು ಈ ಯುದ್ಧಕೋರ ನೀತಿಯನ್ನು ಬೆನ್ನಟ್ಟುತ್ತಾರೆ. ಜಾಗತಿಕ ರಾಜಕಾರಣದ ಮೂಲಭೂತ ಪ್ರಕ್ರಿಯೆಗಳು ಬಂಡವಾಳಶಾಹಿ ಆರ್ಥಿಕತೆಯಲ್ಲಿ ನಡೆಯುವ ಪ್ರಕ್ರಿಯೆಗಳಿಂದ ನಿರ್ಧರಿತವಾಗುತ್ತವೆ. ಇದರಿಂದ ಉದ್ಭವಿಸುವ ಮಿಲಿಟರಿ ನೀತಿಗಳು ವಿಶ್ವವನ್ನು ನಿಯಂತ್ರಿಸುತ್ತವೆ. ಪ್ರಸ್ತುತ ಯುದ್ಧಕ್ಕೂ ಹಲವಾರು ಕಾರಣಗಳನ್ನು ಗುರುತಿಸಬಹುದು. ಜಾಗತಿಕ ಮಟ್ಟದಲ್ಲಿ ಬಂಡವಾಳಶಾಹಿ ವ್ಯವಸ್ಥೆ ಅನುಭವಿಸುತ್ತಿರುವ ಹಿಂಜರಿಕೆಯೂ ಒಂದು ಕಾರಣ. ಈ ಹಿಂಜರಿಕೆಗೆ ಮೂಲಭೂತ ಕಾರಣಗಳೆಂದರೆ, ಉತ್ಪಾದನಾ ಸಾಮಗ್ರಿಗಳ ಮೇಲಿನ ಖಾಸಗಿ ಒಡೆತನ ಮತ್ತು ಉತ್ಪಾದನಾ ಶಕ್ತಿಗಳು ಅಭಿವೃದ್ಧಿಗೆ ಕಂಟಕಪ್ರಾಯವಾಗಿರುವ ರಾಷ್ಟ್ರ ಪ್ರಭುತ್ವ ಎಂಬ ಸಂಕುಚಿತ ಸೀಮಾ ರೇಖೆಗಳು.

ತಮ್ಮ ಕಮ್ಯುನಿಸ್ಟ್ ಪ್ರಣಾಳಿಕೆಯಲ್ಲಿ ೧೮೪೮ರಲ್ಲಿಯೇ ಮಾರ್ಕ್ಸ್ ಮತ್ತು ಏಂಗಲ್ಸ್ ಜಾಗತೀಕರಣದ ಬಗ್ಗೆ ಉಲ್ಲೇಖಿಸಿದ್ದರು. ಈ ಜಾಗತೀಕರಣವು ಉತ್ಪಾದನಾ ಶಕ್ತಿಗಳು ಮತ್ತು ರಾಷ್ಟ್ರ ಪ್ರಭುತ್ವ ಪರಿಕಲ್ಪನೆಯ ನಡುವೆ ಇರುವ ಸಂಘರ್ಷದ ಕುರುಹಾಗಿದೆ. ಜಾಗತೀಕರಣದ ಅಲೆಗೆ ಸಿಲುಕಿ ಎಲ್ಲಾ ರಾಷ್ಟ್ರಗಳೂ ವಿಶ್ವಮಾರುಕಟ್ಟೆಯಲ್ಲಿ ಭಾಗವಹಿಸುವುದು ಆವಶ್ಯಕವಾಗಿದೆಯಲ್ಲದೆ ಎಲ್ಲರೂ ಅಂತರರಾಷ್ಟ್ರೀಯ ಶ್ರಮ ವಿಭಜನೆಗೆ ಅಡಿಯಾಳಾಗಿವೆ. ಅಲ್ಲದೆ ವಿಶ್ವವ್ಯಾಪಾರದ ಆಗುಹೋಗುಗಳನ್ನು ಅನುಭವಿಸಬೇಕಾಗಿದೆ. ೧೯೪೫ರಿಂದ

ಈಚೆಗೆ ಅಂತರರಾಷ್ಟ್ರೀಯ ಶ್ರಮವಿಭಜನೆಯ ತೀವ್ರತೆ ಹಾಗೂ ವಿಶ್ವವ್ಯಾಪಾರದ ಅಭಿವೃದ್ಧಿಯಿಂದಲೇ ಬಂಡವಾಳಶಾಹಿಯು ಅಪ್ರತಿಮ ಬೆಳವಣಿಗೆ ಕಂಡಿತೆಂದು ಹೇಳಬಹುದು. ಈ ಅವಧಿಯಲ್ಲಿ ಈ ಎರಡು ಬೆಳವಣಿಗೆಗಳು, ರಾಷ್ಟ್ರ ಪ್ರಭುತ್ವ ಪರಿಕಲ್ಪನೆಯ ಸೀಮಿತ ಪರಿಣಾಮಗಳನ್ನು ಮೀರಿ ನಿಲ್ಲಲು ಬಂಡವಾಳಶಾಹಿ ವ್ಯವಸ್ಥೆಗೆ ಸಹಾಯಕವಾದವು. ಈ ಅವಧಿಯಲ್ಲಿ ವಿಶ್ವವ್ಯಾಪಾರದ ಬೆಳವಣಿಗೆಯು ಉತ್ಪಾದನಾ ಬೆಳವಣಿಗೆಯನ್ನು ಮೀರಿದೆ. ಆದರೆ ಕಾರ್ಲ್ ಮಾರ್ಕ್ಸ್ ಹೇಳಿದಂತೆ ವಿಶ್ವವ್ಯಾಪಾರದ ಅಭಿವೃದ್ಧಿಯು ಬಂಡವಾಳಶಾಹಿಯ ವೈರುಧ್ಯಗಳನ್ನು-ದ್ವಂದ್ವಗಳನ್ನು ನಿವಾರಿಸುವುದಿಲ್ಲ. ಬದಲಿಗೆ ಅದನ್ನೇ ಉನ್ನತ ಸ್ತರದಲ್ಲಿ ಅನಾವರಣಗೊಳಿಸುತ್ತವೆ. ಹಾಗಾಗಿ ಈ ಬೆಳವಣಿಗೆಗಳಿಂದ ಬಿಕ್ಕಟ್ಟು ತೀವ್ರವಾಗುತ್ತಾ ಹೋಗಿ, ಇಡೀ ಪ್ರಕ್ರಿಯೆಯೇ ವಿರುದ್ಧ ದಿಕ್ಕಿನಲ್ಲಿ ಚಲಿಸಲಾರಂಭಿಸುತ್ತದೆ. ವಿಶ್ವ ಆರ್ಥಿಕತೆಯ ಮುನ್ನಡೆಗೆ ಕಾರಣವಾದ ಅಂಶಗಳೇ ಅದರ ಹಿನ್ನಡೆಗೂ ಕಾರಣವಾಗುತ್ತವೆ. ಇದೇ ಪ್ರಕ್ರಿಯೆಯು ಇಂದು ನಮ್ಮ ಮುಂದಿದೆ. ಪ್ರಸ್ತುತ ಆರ್ಥಿಕ ಬಿಕ್ಕಟ್ಟು ಯುದ್ಧದಿಂದ ಉಂಟಾದದ್ದಲ್ಲವಾದರೂ, ಯುದ್ಧದ ಪರಿಣಾಮವಾಗಿ ಈ ಬಿಕ್ಕಟ್ಟು ಉಲ್ಬಣಗೊಳ್ಳುತ್ತದೆ. ಇರಾಕ್‌ನ ಯುದ್ಧ ಆರಂಭವಾಗುವ ಮುನ್ನವೇ ಆರ್ಥಿಕ ಬಿಕ್ಕಟ್ಟು ಆರಂಭವಾಗಿತ್ತು. ಕಳೆದ ಎರಡು ವರ್ಷಗಳಲ್ಲಿ ಶೇರು ಮಾರುಕಟ್ಟೆಗಳಲ್ಲಿ ಶೇರುಗಳು ಅರ್ಧದಷ್ಟು ಮೌಲ್ಯ ಕಳೆದುಕೊಂಡಿವೆ. ಈ ಇಳಿಮುಖ ಇನ್ನೂ ಮುಂದುವರೆಯುತ್ತಲೇ ಇದೆ.

ಈ ತೀವ್ರ ಆರ್ಥಿಕ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಮಾರುಕಟ್ಟೆ ಕಚ್ಚಾವಸ್ತುಗಳು ಮತ್ತು ಮಾರುಕಟ್ಟೆ ನಿಯಂತ್ರಣಕ್ಕಾಗಿ ಭೀಕರ ಸಂಘರ್ಷ ನಡೆಯುತ್ತಲೇ ಇದೆ. ಈ ಬಿಕ್ಕಟ್ಟಿನಿಂದ ಯುದ್ಧಗಳು ಸ್ವಾಭಾವಿಕವಾಗಿ ಸಂಭವಿಸುವುದೇ ಅಲ್ಲದೆ ಯೂರೋಪು ಅಮೆರಿಕಾದ ನಡುವೆ ತೀವ್ರ ಸಂಘರ್ಷಕ್ಕೂ ಎಡೆ ಮಾಡಿಕೊಡುತ್ತದೆ. ಈಗಾಗಲೇ ಈ ಎರಡೂ ಬಣಗಳ ನಡುವೆ ಉಕ್ಕು, ಕೃಷಿ ಇತರ ಪದಾರ್ಥಗಳ ಬಗ್ಗೆ ಸಂಘರ್ಷ ಉಂಟಾಗಿದೆ. ಮುಂಬರುವ ವರ್ಷಗಳಲ್ಲಿ ಈ ಬಿಕ್ಕಟ್ಟು- ಸಂಘರ್ಷ ಇನ್ನೂ ತೀವ್ರವಾಗುತ್ತಲೇ ಹೋಗುತ್ತದೆ. ಇದರಿಂದ ವ್ಯಾಪಾರಕ್ಕೆ ಕುಂದು ಬರುವುದೇ ಅಲ್ಲದೆ ವಿಶ್ವ ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಯ ಸ್ಥಿರತೆಗೆ ಇದು ಕಂಟಕಪ್ರಾಯವಾಗುತ್ತದೆ. ಅಂತರರಾಷ್ಟ್ರೀಯ ರಾಜಕಾರಣದ ಈ ಸಿನಿಕತೆಯ ಆಟದಲ್ಲಿ ವಿಶ್ವಸಂಸ್ಥೆಯು ಸಾಮ್ರಾಜ್ಯಶಾಹಿಗೆ ಅನುಕೂಲಕರವಾಗಿಯೇ ಕಾರ್ಯನಿರ್ವಹಿಸುತ್ತದೆ. ಈ ಹಿನ್ನೆಲೆಯಿಂದ ನೋಡಿದಾಗ ಅಮೆರಿಕಾದ ಇರಾಕ್ ಮೇಲಿನ ಆಕ್ರಮಣದ ಮುಖ್ಯ ಧ್ಯೇಯದ ಅರಿವಾಗುತ್ತದೆ. ಅಮೆರಿಕಾದ ಯುದ್ಧದ ಕಾರ್ಯಕ್ರಮದಲ್ಲಿ ಇರಾಕ್‌ನ ಜನತೆಯ ಹಿತಾಸಕ್ತಿಗಳಿಗೆ ಎಳ್ಳಿನಷ್ಟೂ ಸ್ಥಾನವಿರುವುದಿಲ್ಲ. ಸಾಮ್ರಾಜ್ಯಶಾಹಿಗಳಿಗೆ ಎಲ್ಲಿಯೂ ಸ್ನೇಹಿತರಿರುವುದಿಲ್ಲ. ಆದರೂ ಕೆಲವೊಮ್ಮೆ ತಮ್ಮ ಕಾರ್ಯಸಾಧನೆಗೆ ಜನತೆಯ ಆಶೋತ್ತರಗಳನ್ನು ಉಪಯೋಗಿಸಿಕೊಳ್ಳುವುದುಂಟು. ಹಾಗಾಗಿಯೇ ಇರಾಕ್‌ನಲ್ಲಿ ಸದ್ದಾಂ ಹುಸೇನ್ ವಿರುದ್ಧ ಹೋರಾಡಲು ಕುರ್ದ್ ಮತ್ತು ಶಿಯಾ ಮುಸ್ಲಿಮರನ್ನು ಅಮೆರಿಕಾ ಬೆಂಬಲಿಸಿತ್ತು. ಈ ಬೆಂಬಲ ಕೇವಲ ಸ್ವಾರ್ಥ ಸಾಧನೆಗಾಗಿ ಎಂಬ ಅಂಶವನ್ನು ಶಿಯಾಗಳು, ಕುರ್ದ್‌ಗಳು ಅರಿಯುವುದು ಅವಶ್ಯಕ. ೮೦ರ ದಶಕದಲ್ಲಿ ಸದ್ದಾಂ ಹುಸೇನ್ ಕುರ್ದ್ ಜನಾಂಗದ ಮೇಲೆ ರಾಸಾಯನಿಕ ಅಸ್ತ್ರಗಳಿಂದ ಪ್ರಹಾರ ನಡೆಸಿದಾಗ ಅಮೆರಿಕಾ ಇಂಗ್ಲೆಂಡ್ ಪ್ರತಿರೋಧಿಸದೆ ಇದ್ದುದೇ ಇದಕ್ಕೆ ಸಾಕ್ಷಿ. ಆಗ ಸಾಮ್ರಾಜ್ಯಶಾಹಿಗಳಿಗೆ ಇರಾಕ್ ಜೊತೆಗಿನ ಶಸ್ತ್ರಾಸ್ತ್ರ ವ್ಯಾಪಾರವೇ ಮುಖ್ಯವಾಗಿತ್ತು. ೧೯೮೩ರಲ್ಲಿ ಸದ್ದಾಂ ಹುಸೇನ್ ಇರಾನ್ ಸೈನಿಕರ ವಿರುದ್ಧ ವಿಷ ಅನಿಲ ಅಸ್ತ್ರಗಳನ್ನು ಉಪಯೋಗಿಸುತ್ತಿದ್ದಾಗಲೇ ಅಮೆರಿಕಾದ ಹಾಲಿ ರಕ್ಷಣಾ ಕಾರ್ಯದರ್ಶಿ ಡೋನಾಲ್ಡ್ ರಮ್ಸ್‌ಫೆಲ್ಡ್ ಬಾಗ್ದಾದ್‌ಗೆ ಭೇಟಿ ನೀಡಿದ್ದನು. ಇರಾನಿಯರನ್ನು ಸದೆಬಡಿಯುವವರೆಗೂ ಸದ್ದಾಂ ಅಮೆರಿಕಾಗೆ ಪ್ರಿಯ ಸ್ನೇಹಿತನಾಗಿದ್ದ. ಸದ್ದಾಂ ಹುಸೇನ್‌ಗೆ ಶಸ್ತ್ರಾಸ್ತ್ರಗಳನ್ನು ಕೊಳ್ಳಲು ಅಮೆರಿಕಾ-ಇಂಗ್ಲೆಂಡ್ ಅಪಾರ ಮೊತ್ತದ ಸಾಲ ಒದಗಿಸಿದ್ದವು. ಇದೇ ರೀತಿ ಸಾಮ್ರಾಜ್ಯಶಾಹಿಗಳು ಬಿನ್ ಲಾಡೆನ್‌ನನ್ನೂ ಬೆಳೆಸಿದ್ದು ಕಾಣಬಹುದು. ೧೯೯೧ರ ಕೊಲ್ಲಿ ಯುದ್ಧದ ಒಂದು ವರ್ಷದ ಮುನ್ನ ಅಮೆರಿಕಾ ಸದ್ದಾಂ ಹುಸೇನ್‌ಗೆ ಸಂಪರ್ಕ ಹೆಲಿಕಾಪ್ಟರ್ ಇಂಜಿನ್‌ಗಳನ್ನು, ಅಂಥ್ರಾಕ್ಸ್‌ನ ೨೧ ತುಕಡಿಗಳನ್ನು, ಟನ್‌ಗಟ್ಟಲೆ ಮಾರಕ ಸಿರಿನ್ ನರ ಅನಿಲವನ್ನು ಸರಬರಾಜು ಮಾಡಿತ್ತು. ೧೯೮೮ರಲ್ಲಿ ಸದ್ದಾಂ ಹುಸೇನ್ ಕುರ್ದ್ ಹೋರಾಟವನ್ನು ಹತ್ತಿಕ್ಕುವ ಮುನ್ನ ಬ್ರಿಟನ್ ಸರ್ಕಾರ ಸದ್ದಾಂನೊಡನೆ ವ್ಯಾಪಾರ ವ್ಯವಹಾರ ನಡೆಸಿತ್ತು. ೫೦೦೦ ಕುರ್ದ್‌ಗಳನ್ನು ಕೊಂದ ನಂತರ ಸದ್ದಾಂಗೆ ಬ್ರಿಟನ್ ೩೪೦ ದಶಲಕ್ಷ ಪೌಂಡ್ ಸಾಲ ನೀಡಿತ್ತು. ಅಮೆರಿಕಾ ಆರ್ಥಿಕ ನೆರವಾಗಿ ಒಂದು ಬಿಲಿಯನ್ ಡಾಲರ್ ನೀಡಿತ್ತು. ಕಳೆದ ಡಿಸೆಂಬರ್ ತಿಂಗಳಲ್ಲಿ ಅಮೆರಿಕಾ ಸರ್ಕಾರವು ಇರಾಕ್ ತನ್ನ ಶಸ್ತ್ರಾಸ್ತ್ರ ಕಾರ್ಯಕ್ರಮದ ಬಗ್ಗೆ ಸಲ್ಲಿಸಿದ್ದ ೧೨,೦೦೦ ಪುಟಗಳ ವರದಿಯನ್ನು ವಶಪಡಿಸಿಕೊಂಡಿತ್ತು. ಈ ವರದಿಯಲ್ಲಿ ಸ್ವಲ್ಪ ಎಡಿಟಿಂಗ್ ಮಾಡಬೇಕು ಎಂಬ ನೆಪ ಹೇಳಿ ಅಮೆರಿಕಾ, ವರದಿಯ ಕೇವಲ ಶೇ. ೨೫ರಷ್ಟನ್ನು ವಿಶ್ವಸಂಸ್ಥೆಯ ತಾತ್ಕಾಲಿಕ ಸದಸ್ಯ ರಾಷ್ಟ್ರಗಳಿಗೆ ಸಲ್ಲಿಸಿತ್ತು. ಅಮೆರಿಕಾದ ತಂತ್ರಕ್ಕೆ ಕಾರಣವೆಂದರೆ ಅಮೆರಿಕಾ ಬ್ರಿಟನ್ ಮತ್ತಿತರ ರಾಷ್ಟ್ರಗಳ ೧೫೦ ಕಂಪನಿಗಳು ಇರಾಕಿಗೆ ಅಣ್ವಸ್ತ್ರಗಳು, ರಾಸಾಯನಿಕ ಕ್ಷಿಪಣಿ ತಂತ್ರಜ್ಞಾನ, ಮುಂತಾದವುಗಳನ್ನು ಸರಬರಾಜು ಮಾಡಿದ್ದನ್ನು ಈ ವರದಿಯಲ್ಲಿ ಉಲ್ಲೇಖಿಸಲಾಗಿತ್ತು. ಈ ಅಂಶಗಳನ್ನು ಮುಚ್ಚಿಹಾಕುವುದು ಅಮೆರಿಕಾದ ಮುಖ್ಯ ಧ್ಯೇಯವಾಗಿತ್ತು. ಹಾಗಾಗಿ ಇರಾಕಿನ ನಿರಂಕುಶ ಆಡಳಿತದ ಬಗ್ಗೆ ಅಮೆರಿಕಾ ಬೊಬ್ಬೆ ಹೊಡೆಯುವುದು ಠಕ್ಕುತನದ ಪರಮಾವಧಿ. ಇರಾಕ್ ಮೇಲಿನ ಆಕ್ರಮಣದ ಹಿಂದೆ ಪ್ರಜಾತಂತ್ರದ ರಕ್ಷಣೆಯಾಗಲೀ, ಮಾನವೀಯ ಕಾಳಜಿಯಾಗಲೀ ಎಳ್ಳಿನಷ್ಟೂ ಇರಲಿಲ್ಲ. ಇದು ಬಲಿಷ್ಠ ರಾಜಕಾರಣದ ಕಸರತ್ತು ಮಾತ್ರ. ನಿಜಾಂಶವೆಂದರೆ ಕುರ್ದ್ ಜನಾಂಗದ ಮೇಲೆ ಬಾಂಬ್ ದಾಳಿ ಪ್ರಪ್ರಥಮವಾಗಿ ನಡೆದದ್ದು ೧೯೨೦ರಲ್ಲಿ ಬ್ರಿಟನ್‌ನಿಂದಲೇ. ೧೯೧೯ರಲ್ಲಿ ರಾಜ್ಯ ಕಾರ್ಯದರ್ಶಿಯಾಗಿದ್ದ ಚರ್ಚಿಲ್, ಕುರ್ದ್ ನಾಗರಿಕರ ವಿರುದ್ಧ ಸಾಸಿವೆ ಅನಿಲವನ್ನು ಉಪಯೋಗಿಸಲು ಆದೇಶ ನೀಡಿದ್ದು ದಾಖಲಾಗಿದೆ. ಇತಿಹಾಸದಲ್ಲಿ ನಾಗರಿಕರ ಮೇಲೆ ನಡೆದ ಪ್ರಪ್ರಥಮ ಬಾಂಬ್ ದಾಳಿ ಇದಾಗಿತ್ತು. ಆ ಸಮಯದಲ್ಲಿ ಚರ್ಚಿಲ್ ಕುರ್ದ್ ಜನಾಂಗವನ್ನು ಅನಾಗರಿಕರೆಂದು ಹೀಯಾಳಿಸಿದ್ದೂ ದಾಖಲಾಗಿದೆ. ಇದೇ ಸಾಮ್ರಾಜ್ಯಶಾಹಿಗಳು ೧೯೯೧ರ ಯುದ್ಧದಲ್ಲಿ ಇರಾಕ್ ಸೋಲುಂಡನಂತರ ಉತ್ತರ ಇರಾಕ್‌ನಲ್ಲಿ ಶಿಯಾ ಮುಸ್ಲಿಮರ ಬಂಡಾಯವನ್ನು ಪ್ರೋತ್ಸಾಹಿಸಿದ್ದು, ಶಿಯಾಗಳ ಮೇಲುಗೈ ಆದರೆ ಇರಾನ್ ಲಾಭ ಪಡೆಯಬಹುದೆಂದು ಸೌದಿ ಅರೇಬಿಯಾದ ಮಾತಿಗೆ ಒಗ್ಗೊಟ್ಟು ಹಿಂತೆಗೆದದ್ದು, ಶಿಯಾ ಬಂಡಾಯಗಾರರನ್ನು ಸದೆಬಡಿಯಲು ಸದ್ದಾಂಗೆ ಪೂರ್ಣ ಬೆಂಬಲ ನೀಡಿದ್ದು ಇತಿಹಾಸದಲ್ಲಿ ಸ್ಪಷ್ಟವಾಗಿ ದಾಖಲಾಗಿದೆ. ಇದೇ ಅಮೆರಿಕನ್ನರು ಈಗ ಶಿಯಾಗಳ ಸ್ವಾತಂತ್ರ್ಯಕ್ಕಾಗಿ ಸದ್ದಾಂ ವಿರುದ್ಧ ಹೋರಾಡುವುದು ಸಾಧ್ಯವೇ ? ಇರಾಕ್ ಮೇಲೆ ಅಮೆರಿಕಾ ನಡೆಸಿರುವ ಯುದ್ಧದಿಂದ ಅಲ್ಲಿನ ಶೋಷಿತ ಜನಾಂಗಗಳಿಗೆ ಯಾವುದೇ ಲಾಭವಾಗಲೀ ಆಗುವುದಿಲ್ಲ. ಇರಾಕಿಗಳನ್ನು ಸೋಲಿಸಲು ಈ ಜನರನ್ನು ಉಪಯೋಗಿಸಿಕೊಳ್ಳುವ ಮೂಲಕ ಅಮೆರಿಕಾ ತನ್ನ ಸೈನಿಕರನ್ನು ಕಾಪಾಡುತ್ತಿದೆ. ಅದೇ ರೀತಿ ಕುರ್ದ್ ಜನಾಂಗದವರಿಗೂ ಈ ಯುದ್ಧದಿಂದ ವಿಮೋಚನೆ ದೊರೆಯುವುದಿಲ್ಲ. ಹಾಗಾಗಲು ಅಮೆರಿಕಾದ ಮಿತ್ರ ರಾಷ್ಟ್ರವಾದ ಟರ್ಕಿ ಬಿಡುವುದೂ ಇಲ್ಲ. ಟರ್ಕಿಗೂ ಸಹ ಇರಾಕ್‌ನಲ್ಲಿರುವ ಕಿರ್ಕುಡ್ ಹಾಗೂ ಮೊಸುಲ್ ತೈಲ ಬಾವಿಗಳನ್ನು ಆಕ್ರಮಿಸಿಕೊಳ್ಳುವ ಉದ್ದೇಶವಿದೆಯೇ ಹೊರತು ಕುರ್ದ್ ಜನಾಂಗದ ವಿಮೋಚನೆಯಲ್ಲ. ಕುರ್ದ್ ಜನಾಂಗದವರಿಗೆ ವಿಮೋಚನೆ ಬೇಕಾದಲ್ಲಿ ಬಾಗ್ದಾದ್, ಟೆಹರಾನ್, ಅಂಕಾರದಲ್ಲಿನ ಪ್ರತಿಗಾಮೀ ಸರ್ಕಾರಗಳ ವಿರುದ್ಧ ಜನಾಂದೋಲನವಾಗಬೇಕೇ ಹೊರತು ಬಂಡವಾಳಶಾಹಿಯನ್ನಾಧರಿಸಿದ ಯುದ್ಧಗಳಿಂದ ಅದು ಸಾಧ್ಯವಿಲ್ಲ. ಸಾಮ್ರಾಜ್ಯಶಾಹಿಗಳನ್ನು ಬೆಂಬಲಿಸುವುದರಿಂದ ವಿಮೋಚನೆ ಸಿಗುವುದೆಂದು ನಂಬುವುದು ಹಗಲುಗನಸಾಗುತ್ತದೆ.

ಇರಾಕ್ ಯುದ್ಧ ಆರಂಭಗೊಳ್ಳುವ ಮುನ್ನ ತಮ್ಮ ದೇಶಗಳಲ್ಲೇ ಅಲ್ಲದೆ ವಿಶ್ವದಾದ್ಯಂತ ತೀವ್ರ ವಿರೋಧ - ಪ್ರತಿಭಟನೆ ಎದುರಿಸಿದ ಅಮೆರಿಕಾ ಮತ್ತು ಇಂಗ್ಲೆಂಡ್ ಯುದ್ಧದಲ್ಲಿ ನಾಗರಿಕರ ಮೇಲೆ ದಾಳಿ ಮಾಡುವುದಿಲ್ಲ, ಕೇವಲ ಇರಾಕ್‌ನ ಶಸ್ತ್ರಾಸ್ತ್ರ ಸಂಗ್ರಹಗಳ ಮೇಲೆ ಮಾತ್ರ ದಾಳಿ ಮಾಡಲಾಗುತ್ತದೆ ಎಂದು ಆಶ್ವಾಸನೆ ನೀಡಿದ್ದವು. ಅಷ್ಟೇ ಅಲ್ಲದೆ ಇರಾಕ್‌ನ ಜನತೆ ಜಂಟಿ ಪಡೆಯನ್ನು ತುಂಬು ಹೃದಯದಿಂದ ಸ್ವಾಗತಿಸುತ್ತದೆ ಎಂದೂ ಸಾಮ್ರಾಜ್ಯಶಾಹಿಗಳು ನಂಬಿದ್ದರು. ಆದರೆ ಹಾಗಾಗಲಿಲ್ಲ. ಯುದ್ಧ ಮುಗಿದ ನಂತರವೂ ಇರಾಕಿನ ಜನತೆ ಅಮೆರಿಕಾದ ವಿರುದ್ಧ ಹೋರಾಡುತ್ತಲೇ ಇದ್ದಾರೆ. ಏಕೆಂದರೆ, ಅಮೆರಿಕಾ ಮತ್ತು ಇಂಗ್ಲೆಂಡ್ ಕಳೆದ ಹತ್ತು ವರ್ಷಗಳಿಂದ ಇರಾಕಿನ ಮೇಲೆ ಬಾಂಬ್ ದಾಳಿ ನಡೆಸುತ್ತಲೇ ಇವೆ. ಕಳೆದ ಒಂದು ವರ್ಷದಲ್ಲಿ ಬ್ರಿಟನ್ ಈ ಪಾತಕೀ ಕೃತ್ಯಕ್ಕಾಗಿ ನಾಲ್ಕು ದಶಲಕ್ಷ ಪೌಂಡ್ ವೆಚ್ಚಮಾಡಿದೆ. ಈ ಅವಧಿಯಲ್ಲಿಯೇ ಇರಾಕ್‌ನಲ್ಲಿ ಆರ್ಥಿಕ ದಿಗ್ಬಂಧನದಿಂದ ಲಕ್ಷಾಂತರ ಹಸುಳೆಗಳು ಅಸುನೀಗಿವೆ. ಪೆಂಟಗನ್‌ನ ವಕ್ತಾರರೊಬ್ಬರ ಮಾತುಗಳಲ್ಲೇ

**ಎಚ್ಚರಿಕೆ !**



ನೆನಪಿಡು ಸೂರ್ಯ;
ನಿನ್ನ ಸುತ್ತ ಸುತ್ತುತ್ತಾಳೆ
ಎಂದ ಮಾತ್ರಕ್ಕೆ
ಭೂಮಿಯನ್ನು ನಿನ್ನಲ್ಲಿ
ಕರಗಿಸಿಕೊಳ್ಳಲಾರೆ !

**'ಪ್ರೀತಿ' ಮಡಿಕೇರಿ**
೪೨೨, ನವಿಲು ರಸ್ತೆ ಎಬಿ ಬ್ಲಾಕ್,
ಕುವೆಂಪುನಗರ
ಮೈಸೂರು - ೫೭೦ ೦೨೩

ಹೇಳುವುದಾದರೆ ಅಮೆರಿಕಾದ ಮುಖ್ಯ ಉದ್ದೇಶ "ಇರಾಕನ್ನು ಮಾನಸಿಕವಾಗಿ, ದೈಹಿಕವಾಗಿ, ವಿನಾಶ ಮಾಡುವುದೇ ಆಗಿತ್ತು. ಅವಶ್ಯಕತೆ ಇದ್ದಲ್ಲಿ ಅಣುಬಾಂಬ್ ಉಪಯೋಗಿಸಲು ಅಮೆರಿಕಾ ಹಿಂಜರಿಯುವುದಿಲ್ಲ" ಎಂಬ ಬುಷ್‌ನ ಹೇಳಿಕೆ ಅಮೆರಿಕಾದ ಮಾನವೀಯ ಪ್ರಜಾತಂತ್ರದ ನೈಜರೂಪವನ್ನು ಬಯಲು ಮಾಡುತ್ತದೆ. ೧೯೯೧ರ ಯುದ್ಧದನಂತರ ಅಮೆರಿಕನ್ನರು ೮೦೦ ಟನ್‌ಗಳಷ್ಟು ಕಳಪೆ ಯುರೇನಿಯಂ – ೨೩೮ನ್ನು ಇರಾಕಿನಲ್ಲಿಯೇ ಬಿಸಾಡಿ ಹೋಗಿದ್ದರು. ಇದರ ಪರಿಣಾಮವಾಗಿ ಇರಾಕ್‌ನ ಜನತೆ ರಕ್ತ ಕ್ಯಾನ್ಸರ್, ಮೂಳೆ ಕ್ಯಾನ್ಸರ್, ಮೂತ್ರಪಿಂಡ ಕ್ಯಾನ್ಸರ್ ಹೀಗೆ ಹಲವಾರು ಮಾರಕ ರೋಗಗಳಿಗೆ ತುತ್ತಾಗಿದ್ದಾರೆ. ಇರಾಕ್‌ನಲ್ಲಿ ಕ್ಯಾನ್ಸರ್ – ರಕ್ತದ ಕ್ಯಾನ್ಸರ್ – ಶೇ. ೧,೨೦೦ರಷ್ಟು ಹೆಚ್ಚಾಗಿದೆ ಎಂದು ವೈದ್ಯರು ಹೇಳುತ್ತಾರೆ.

ರೋಮ್ ಸಾಮ್ರಾಜ್ಯವು ಅಧಃಪತನದ ಹಾದಿಯಲ್ಲಿದ್ದಾಗ ಅಲ್ಲಿನ ಸರ್ಕಾರ ಭ್ರಷ್ಟ ಕಾನೂನುಭಂಗ ರಾಜರ ಕೈಗೆ ಸೇರಿ ಗೂಂಡಾ ರಾಜ್ಯ ಸ್ಥಾಪಿತವಾಗಿತ್ತು. ಅದೇ ರೀತಿ ಈಗ ಅಮೆರಿಕಾ-ಇಂಗ್ಲೆಂಡ್‌ನ ಸರ್ಕಾರ ಗೂಂಡಾಗಳಿಂದ, ಮಾಫಿಯಾಗಳಿಂದ ತುಂಬಿದೆ. ಇಂದಿನ ಸಾಮ್ರಾಜ್ಯಶಾಹಿಯು ತನ್ನ ಉಗ್ರ ನಗ್ನ ರೂಪವನ್ನು ಜಗತ್ತಿಗೇ ಪ್ರದರ್ಶಿಸಿದೆ. ಶ್ವೇತಭವನದಲ್ಲಿನ ಮಾಫಿಯಾಗಳು ಪ್ರಾಚೀನ ಕಾಲದ ದರೋಡೆಕೋರರಂತೆ ಬಡ ರಾಷ್ಟ್ರಗಳ ಮೇಲೆ ಬಲಹೀನರ ಮೇಲೆ ದಾಳಿ ನಡೆಸುತ್ತಿದ್ದಾರೆ. ವಾಷಿಂಗ್‌ಟನ್‌ನಲ್ಲಿರುವ ಪ್ರಮುಖ ನಾಯಕರೆಲ್ಲರೂ ತೈಲದ ದೊರೆಗಳೇ. ಬುಷ್ ಆಲ್ ಬಸ್ಟೋ ಆಯಿಲ್ ಕಂಪನಿಯ ಸ್ಥಾಪಕ, ಸ್ಪೆಕ್ಟ್ರಮ್ ೭ ಎನರ್ಜಿಯಲ್ಲಿ ಪಾಲುದಾರ, ಹಾರ್ಕನ್ ಆಯಿಲ್ ಅಂಡ್ ಗ್ಯಾಸ್ ಕಂಪನಿಯ ಮಾಜಿ ನಿರ್ದೇಶಕ. ಅಮೆರಿಕಾದ ಉಪಾಧ್ಯಕ್ಷ ಡಿಕ್ ಚೆನಿ ಹಾಲಿಬರ್ಟನ್ ಇಂಡಸ್ಟ್ರಿಯ ಮಾಜಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಯೂನಾಕಲ್, ಎಕ್ಸಾನ್, ಶೆಲ್ ಚೆವ್ರಾನ್ ಮುಂತಾದ ದೊಡ್ಡ ತೈಲ ಕಂಪನಿಗಳಲ್ಲಿ ಪಾಲುದಾರ. ಈ ಅಂಶಗಳಿಂದಲೇ ಇರಾಕ್ ಯುದ್ಧದ ಹಿಂದಿನ ಅಮೆರಿಕದ ಉದ್ದೇಶ ಸ್ಪಷ್ಟವಾಗುತ್ತದೆ.

**ಸಾಮ್ರಾಜ್ಯಶಾಹಿ ಗುಂಪಿನಲ್ಲಿನ ವೈರುಧ್ಯಗಳು**

ಜಾಗತಿಕ ಅಭಿಪ್ರಾಯಕ್ಕೆ ಎಳ್ಳಷ್ಟೂ ಬೆಲೆ ನೀಡದ ಅಮೆರಿಕದ ಸಾಮ್ರಾಜ್ಯಶಾಹಿಗಳು ಬ್ರಿಟನ್ ಹೊರತಾಗಿ ಬೇರೆಲ್ಲಾ ದೇಶಗಳಿಂದಲೂ ಅಲ್ಪಸ್ವಲ್ಪ ವಿರೋಧ ಎದುರಿಸಿದ್ದಾರೆ. ಆದರೆ ತಮ್ಮ ತಮ್ಮ ವಿರೋಧಿಗಳನ್ನು ಆಮಿಷ ತೋರಿಸಿ ಗೆಲ್ಲಬಹುದೆಂದು ವಿಶ್ವಾಸ ಅಮೆರಿಕಾಗೆ ಇದ್ದೇ ಇರುತ್ತದೆ. ಹಾಗಾಗಿಯೇ ವಿಶ್ವಸಂಸ್ಥೆ ಒಪ್ಪದಿದ್ದರೂ ಸಹ ನಿರ್ಣಯ ೧೪೪೧ರ ಪ್ರಕಾರ ಅಮೆರಿಕಾಗೆ ಏಕಪಕ್ಷೀಯವಾಗಿ ಇರಾಕ್ ವಿರುದ್ಧ ದಾಳಿ ಆರಂಭಿಸುವ ಹಕ್ಕಿದೆ ಎಂದು ಅಮೆರಿಕಾ ಪ್ರತಿಪಾದಿಸಿತ್ತು. ಸದಾ ಅಮೆರಿಕಾದ ಬಲಗೈ ಭಂಟನಂತಿರುವ ಬ್ರಿಟನ್ ೨೦,೦೦೦ ಸೈನಿಕರನ್ನು ಕಳುಹಿಸಿತ್ತು. ಇದು ಬ್ರಿಟನ್‌ನ ಗುಲಾಮೀ ಮನೋಭಾವದ ಕುರುಹಾಗಿರುವುದೇ ಅಲ್ಲದೆ ಜಾಗತಿಕ ವಿದ್ಯಮಾನಗಳಲ್ಲಿ ಬ್ರಿಟನ್‌ನ ಸ್ಥಾನಮಾನವನ್ನು ಪ್ರತಿಬಿಂಬಿಸುತ್ತದೆ. ಸಾಮ್ರಾಜ್ಯಶಾಹಿಗಳ ನಡುವೆಯೇ ಭಿನ್ನಾಭಿಪ್ರಾಯಗಳಿರುವುದು ಸ್ಪಷ್ಟವಾಗಿ ಕಾಣುತ್ತದೆ. ಅಮೆರಿಕಾ ಫ್ರಾನ್ಸ್ ರಷ್ಯ ಎಲ್ಲಾ ರಾಷ್ಟ್ರಗಳೂ ಮಧ್ಯಪ್ರಾಚ್ಯದಲ್ಲಿ ನೆಲೆ ಸಾಧಿಸಲು ಹವಣಿಸುತ್ತಿವೆ. ಈ ಉದ್ದೇಶದಿಂದಲೇ ಫ್ರಾನ್ಸ್, ಜರ್ಮನಿ, ರಷ್ಯ ಯುದ್ಧವನ್ನು ವಿರೋಧಿಸುವ ನಾಟಕ ಆಡಿವೆ.

ಯುರೋಪ್‌ನ ರಾಷ್ಟ್ರಗಳು ತಮ್ಮ ಬಲಹೀನತೆಯಿಂದ ರಣರಂಗ ಪ್ರವೇಶಿಸಲು ಹಿಂಜರಿಯುತ್ತವೆಯೇ ಹೊರತು, ನೈತಿಕತೆಯ ಆಧಾರದ ಮೇಲಲ್ಲ. ಈ ನ್ಯೂನತೆಯನ್ನು ಉಪಯೋಗಿಸಿಕೊಂಡು ಅಮೆರಿಕಾ ತನ್ನ ಕಾರ್ಯ ಸಾಧಿಸಿಕೊಳ್ಳುತ್ತಿದೆ. ಯುದ್ಧದನಂತರ ದೊರೆಯುವ ವ್ಯಾಪಾರದ ಒಪ್ಪಂದಗಳಿಗೆ ಈ ಗುಲಾಮೀ ರಾಷ್ಟ್ರಗಳು ಬಲಿಯಾಗುತ್ತಿವೆ.

**ವಿಶ್ವಸಂಸ್ಥೆಯ ಬಲಹೀನತೆ**

"ನೋಡಲು ಆಗದಿದ್ದವನಿಗಿಂತಲೂ ಕುರುಡ ಬೇರೊಬ್ಬನಿಲ್ಲ" ಎಂಬ ಗಾದೆ ಇದೆ. ಅದೇ ರೀತಿ ಎಲ್ಲಾ ಸಾಕ್ಷಿಪುರಾವೆ ನಿದರ್ಶನಗಳು ಇದ್ದರೂ ಸಹ ಹಲವು ರಾಷ್ಟ್ರಗಳು, ಜನರು ಅಂತರರಾಷ್ಟ್ರೀಯ ಕಾನೂನು ಇದೆ ಎಂದು ನಂಬುತ್ತಾರೆ. ವಿಶ್ವಸಂಸ್ಥೆ ಯುದ್ಧಗಳನ್ನು ತಡೆಯಬಲ್ಲುದು ಎಂಬ ಭ್ರಮೆ ಇಂಥವರನ್ನು ಆವರಿಸಿರುತ್ತದೆ. ಬಲಪಂಥೀಯ ಪರಿಷ್ಕಾರವಾದಿಗಳಾದ ಬ್ಲೇರ್‌ನಂಥವರು ಸಾಮ್ರಾಜ್ಯಶಾಹಿಯನ್ನು ಬೆಂಬಲಿಸಿದರೆ, ಎಡಪಂಥೀಯ ಪರಿಷ್ಕಾರವಾದಿಗಳು ಭದ್ರತಾ ಮಂಡಳಿಯ ಒಪ್ಪಿಗೆಯ ಮೇರೆಗೆ ಮಾತ್ರ ಯುದ್ಧ ನಡೆಯಬೇಕೆಂದು ಪ್ರತಿಪಾದಿಸುತ್ತಾರೆ. ಆದರೆ ಯುದ್ಧ ಬೇಡವೆಂದು ಹೇಳುವುದಿಲ್ಲ ನಿರ್ಣಯ ೧೪೪೧ ಶಾಂತಿಯತ್ತಕ್ಕೆ ದೊರೆತ ವಿಜಯ ಎಂದು ಪ್ರತಿಪಾದಿಸುವ ಈ ರಾಷ್ಟ್ರಗಳು ವಿಶ್ವಸಂಸ್ಥೆಯ ಶಸ್ತ್ರಾಸ್ತ್ರ ಪರಿವೀಕ್ಷಕ ಬ್ಲಿಕ್ಸ್‌ಗೆ ಸಹಕಾರ ನೀಡುವಂತೆ ಇರಾಕ್‌ಗೆ ಮನವಿ ಮಾಡಿದವೇ ಹೊರತು ಯುದ್ಧವನ್ನು ವಿರೋಧಿಸಲಿಲ್ಲ. ಈ ಎಲ್ಲಾ ಬೆಳವಣಿಗೆಗಳು ಶಾಂತಿ ಸ್ಥಾಪನೆಗೆ ಹೇಗೆ ಸಹಾಯಕವಾಗುವುದಿಲ್ಲವೆಂದು ಹೇಳಲಾಗುವುದಿಲ್ಲ. ಆದರೆ ವಿಶ್ವಸಂಸ್ಥೆಯ

ಪರವಾಗಿ ಮಂಡಿಸಿದ ವಾದಗಳು ಮಾತ್ರ ಅರ್ಥಹೀನವೆನಿಸುತ್ತವೆ. ಭದ್ರತಾ ಮಂಡಳಿಯಲ್ಲಿ ನಡೆದ ಮತದಾನ ಒಂದು ನೆಪಮಾತ್ರ. ಅದರ ಹಿನ್ನೆಲೆಯಲ್ಲೆ ಯುದ್ಧದ ತಯಾರಿ ನಡೆದಿತ್ತು. ಜಾಗತಿಕ ಮಟ್ಟದಲ್ಲಿ ಎಲ್ಲರ ಗಮನವೂ ವಿಶ್ವಸಂಸ್ಥೆಯ ನಿಲುವುಗಳ ಬಗ್ಗೆ ಕೇಂದ್ರೀಕೃತವಾಗಿದ್ದಾಗಲೇ ಅಮೇರಿಕಾ-ಇಂಗ್ಲೆಂಡ್ ಜಂಟಿ ಕೂಟವು ೨ ಲಕ್ಷ ಸೈನಿಕರನ್ನು ಇರಾಕ್‌ನೆಡೆಗೆ ರವಾನಿಸಿತ್ತು.



ಬಹಳ ಹಿಂದೆ ಅನೇಕ ರಾಷ್ಟ್ರಗಳು ಲೀಗ್ ಆಫ್ ನೇಷನ್ಸ್‌ಗೆ ಯುದ್ಧ ನಿಲ್ಲಿಸುವಂತೆ ಆಗ್ರಹಪಡಿಸಿದ್ದಾಗ ಲೆನಿನ್ ಅದನ್ನು ಟೀಕಿಸಿ, ಲೀಗ್ ಆಫ್ ನೇಷನ್ಸ್‌ನ್ನು 'ಕಳ್ಳಕಾಕರ ಅಡಗುಮನೆ' ಎಂದು ಹೀಯಾಳಿಸಿದ್ದರು. ಲೀಗ್ ಆಫ್ ನೇಷನ್ಸ್‌ಗೂ ವಿಶ್ವಸಂಸ್ಥೆಗೂ ಎಳ್ಳಷ್ಟೂ ವ್ಯತ್ಯಾಸವಿಲ್ಲ. ವಿಶ್ವಸಂಸ್ಥೆ ಮಧ್ಯಸ್ಥಿಕೆ ವಹಿಸಿದ ಕಡೆಯೆಲ್ಲಾ, ಕೊರಿಯಾ, ಕಾಂಗೋನಲ್ಲಿ ಮಾಡಿದಂತೆ ಅಮೇರಿಕಾ ಪರವಾಗಿಯೇ ಕಾರ್ಯ ನಿರ್ವಹಿಸಿದೆ. ಇರಾಕ್‌ನಲ್ಲೂ ಸಹ ಇದೇ ಪರಿಸ್ಥಿತಿಯನ್ನು ಕಂಡಿದ್ದಾಗಿದೆ.

ವಿಶ್ವಸಂಸ್ಥೆ ಬಂಡವಾಳಶಾಹಿಯ ವೇದಿಕೆಯೇ ಹೊರತು, ತಟಸ್ಥ ನಿರ್ಣಾಯಕರ ಸಂಸ್ಥೆಯಲ್ಲ. ಕೆಲವು ಗೌಣವಾದ ವಿಷಯಗಳ ಬಗ್ಗೆ ಉತ್ತಮ ನಿರ್ಧಾರ ಕೈಗೊಂಡರೂ ಮೂಲಭೂತ ಪ್ರಶ್ನೆಗಳು ಎದುರಾದಾಗ ವಿಶ್ವಸಂಸ್ಥೆಯಿಂದ ಏನನ್ನೂ ಬದಲಾಯಿಸಲಾಗುವುದಿಲ್ಲ. ಪ್ಯಾಲೆಸ್ಟೈನ್ ಹಾಗೂ ಇರಾಕ್‌ನಲ್ಲಿ ವಿಶ್ವಸಂಸ್ಥೆಯ ಈ ಇಬ್ಬಂದಿ ನೀತಿಯನ್ನು ಸ್ಪಷ್ಟವಾಗಿ ಕಾಣಬಹುದು. ಇಸ್ರೇಲ್‌ನ ಶೆರೋನ್ ಪ್ಯಾಲೆಸ್ಟೈನೀಯರನ್ನು ವಿಶ್ವಸಂಸ್ಥೆಯ ನಿರ್ಣಯಗಳಿಗೆ ವಿರುದ್ಧವಾಗಿ ಸದೆಬಡಿಯುತ್ತಿರುವಾಗ ವಿಶ್ವಸಂಸ್ಥೆ ಕೈಜೋಡಿಸಿ ನಿಂತಿರುತ್ತದೆ. ಅದೇ ವೇಳೆಗೆ ಜಾರ್ಜ್ ಬುಷ್ ಶೆರೋನ್‌ನನ್ನು ಬೆಂಬಲಿಸುತ್ತಲೇ ಇರಾಕ್ ವಿರುದ್ಧ ವಿಶ್ವಸಂಸ್ಥೆಯ ನಿರ್ಣಯಗಳನ್ನು ಅನುಷ್ಠಾನಗೊಳಿಸುತ್ತಿರುತ್ತಾನೆ. ಇದರಿಂದ ವಿಶ್ವಸಂಸ್ಥೆಯ ಪ್ರತಿಗಾಮಿ ಧೋರಣೆ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ವಿವಿಧ ವರ್ಗಗಳ ನಡುವೆ ಹೇಗೆ ನಿಷ್ಪಕ್ಷಪಾತವಾದ ನಿರ್ಣಯ ಇರುವುದಿಲ್ಲವೋ ಹಾಗೆಯೇ ವಿವಿಧ ರಾಷ್ಟ್ರಗಳ ನಡುವೆಯೂ ಇರುವುದಿಲ್ಲ. ಇರಾಕನ್ನು ಉಳಿಸಲು ವಿಶ್ವಸಂಸ್ಥೆಯ ಮೊರೆಹೋಗುವುದು ಅರ್ಥಹೀನ ಕ್ರಿಯೆಯಾಗುತ್ತದೆ.

ಸಾಮ್ರಾಜ್ಯಶಾಹಿ-ಏಕಸ್ವಾಮ್ಯ ಬಂಡವಾಳಶಾಹಿ ಯುಗದಲ್ಲಿ ಕೆಲವೇ ಏಕಸ್ವಾಮ್ಯ ಕಂಪನಿಗಳು ವಿಶ್ವದ ಬಹುಪಾಲು ಉತ್ಪಾದನಾ ಸಾಧನಗಳನ್ನು ನಿಯಂತ್ರಿಸುತ್ತಿರುವಾಗ, ಸಂಪತ್ತು ಹಾಗೂ ಅಧಿಕಾರ ಕೆಲವೇ ಜನರ ಸ್ವತ್ತಾಗಿರುವುದು ಸ್ವಾಭಾವಿಕವೇ. ಇಡೀ ವಿಶ್ವ ವ್ಯಾಪಾರವನ್ನು ಕೇವಲ ೨೦೦ ಕಾರ್ಪೊರೇಷನ್‌ಗಳು ನಿಯಂತ್ರಿಸುತ್ತಿವೆ. ಅವುಗಳಲ್ಲಿ ಬಹುತೇಕ ಅಮೇರಿಕಾಗೆ ಸೇರಿದವು. ಜಾಗತಿಕ ಮಟ್ಟದ ಎಲ್ಲಾ ನಿರ್ಣಯಗಳನ್ನೂ ಈ ಕಂಪನಿಗಳ ನಿರ್ದೇಶಕರು ಕೈಗೊಳ್ಳುತ್ತಾರೆ. ಯಾರಿಂದಲೂ ಚುನಾಯಿತರಾಗದ ಯಾರಿಗೂ ಜವಾಬ್ದಾರರಲ್ಲದ ಸಣ್ಣ ಗುಂಪು ಕೈಗೊಳ್ಳುವ ನಿರ್ಧಾರ ಇಡೀ ದೇಶಗಳ ಭವಿಷ್ಯವನ್ನೇ ನಿರ್ಧರಿಸುತ್ತದೆ. ಈ ಅಧಿಕಾರಿ ವರ್ಗಕ್ಕೆ ಹೋಲಿಸಿದರೆ ಚುನಾಯಿತ ಸರ್ಕಾರಗಳ ಅಧಿಕಾರಗಳು ಗೌಣವಾಗುತ್ತವೆ. ಜಾರ್ಜ್ ಬುಷ್ ವಿಶ್ವದ ಅತಿ ಶ್ರೀಮಂತ ರಾಷ್ಟ್ರದ ಅಧ್ಯಕ್ಷನಾದರೂ ಅವನೂ ಸಹ ಕೆಲವು ಏಕಸ್ವಾಮ್ಯ ಉದ್ದಿಮೆಗಳ ಕೈಗೊಂಬೆ ಮಾತ್ರ. ಆದರೆ ಈ ಕಾರ್ಯವನ್ನು ಬುಷ್ ಹರ್ಷದಿಂದ ಮಾಡುತ್ತಾನೆ. ಏಕೆಂದರೆ, ಜಾರ್ಜ್ ಬುಷ್ ಸಹ ಅಮೇರಿಕಾದ ಶ್ರೀಮಂತ ವ್ಯಾಪಾರಿಗಳ ವರ್ಗಕ್ಕೆ ಸೇರಿದವನೇ. ಹಾಗಾಗಿಯೇ ಬುಷ್ ಸರ್ಕಾರದ ಬಜೆಟ್ ಸಹ ಶ್ರೀಮಂತ ವರ್ಗಗಳಿಗೇ ಅನುಕೂಲಕರವಾಗಿರುತ್ತದೆ.

ಈ ಹಿನ್ನೆಲೆಯಿಂದ ನೋಡಿದಾಗ ಬುಷ್ ಹಾಗೂ ಬ್ಲೇರ್ ಇಬ್ಬರೂ ಉಚ್ಚರಿಸುವ ಪ್ರಜಾತಂತ್ರ ಎಂಬ ಪದಕ್ಕೆ ಅರ್ಥವೇ ಬೇರೆ ಇರುತ್ತದೆ. ಅಮೇರಿಕಾದ ಏಕಸ್ವಾಮ್ಯ ಬಂಡವಾಳಶಾಹಿ ಮತ್ತು ಸಾಮ್ರಾಜ್ಯಶಾಹಿಯನ್ನು ಮರೆಮಾಡಲು ಈ ಪ್ರಜಾತಂತ್ರ ಎಂಬ ಘೋಷಣೆ ಸಹಾಯಕವಾಗುತ್ತದೆ. ಒಂದು ಅರ್ಥದಲ್ಲಿ ಇವರ ಪ್ರಜಾತಂತ್ರದ ನಿಜವಾದ ಅರ್ಥ, ದೊಡ್ಡ ಬ್ಯಾಂಕುಗಳ ಏಕಸ್ವಾಮ್ಯ ದೊರೆಗಳ ಸರ್ವಾಧಿಕಾರವೇ ಆಗಿದೆ. ಶಾಂತಿ ಎಂದರೆ ಅಮೇರಿಕಾದ ಮಿಲಿಟರಿ ಆಧಿಪತ್ಯ ಮತ್ತು ಶತ್ರು ರಾಷ್ಟ್ರಗಳ ನಿಶ್ಶಸ್ತ್ರೀಕರಣವಾಗಿದೆ. ಮಾನವೀಯ ಕಾಳಜಿ ಎಂದರೆ, ಮಿಲಿಟರಿ ಆಕ್ರಮಣವನ್ನು ಮರೆಮಾಚುವುದು ಎಂದರ್ಥ. ಈ ಪದಪುಂಜಗಳನ್ನು ಉಪಯೋಗಿಸುತ್ತಲೇ ಸಾಮ್ರಾಜ್ಯಶಾಹಿಗಳು ಪ್ರಜಾತಂತ್ರಕ್ಕಾಗಿ, ಯುದ್ಧದ ವಿರುದ್ಧ, ಹೋರಾಡುವ ಜನರನ್ನು ಹತ್ತಿಕ್ಕಲು ಯತ್ನಿಸುತ್ತಾರೆ. ಎಲ್ಲಾ ದೇಶಗಳಲ್ಲೂ ಸರ್ಕಾರಗಳು ಸಾಮಾನ್ಯ ಜನತೆಯ ವಿರುದ್ಧ ತೀವ್ರ ದಬ್ಬಾಳಿಕೆ ನಡೆಸುತ್ತಿವೆ. ಭಯೋತ್ಪಾದನೆಯನ್ನು ಹತ್ತಿಕ್ಕುವ ನೆಪ ಹೂಡಿ ಕರಾಳ ಶಾಸನಗಳನ್ನು ಪ್ರತಿರೋಧವೇ ಇಲ್ಲದೆ ಸಂಸತ್‌ಗಳಲ್ಲಿ ಅನುಮೋದಿಸಲಾಗುತ್ತದೆ. ಇದೇ ಕರಾಳ ಶಾಸನಗಳನ್ನು ಮುಂದೆ ದುಡಿಯುವ ವರ್ಗಗಳ ವಿರುದ್ಧವೂ ಉಪಯೋಗಿಸಲಾಗುತ್ತದೆ. ಭಯೋತ್ಪಾದನೆಯ ವಿರುದ್ಧ ಹೋರಾಡುವ ನೆಪದಲ್ಲಿ ಜನರ ಪ್ರಜಾತಾಂತ್ರಿಕ ಹಕ್ಕುಗಳನ್ನೇ ಕಸಿದುಕೊಳ್ಳಲಾಗುತ್ತಿದೆ. ರಕ್ಷಣಾ ವೆಚ್ಚಗಳಿಗೆ ಬಜೆಟ್‌ನಲ್ಲಿ ಬಹುಪಾಲು ಮೀಸಲಾಗಿಡಲಾಗುತ್ತಿದೆ. ಜೈಲುಗಳಲ್ಲಿ ಇರುವವರನ್ನು ಅಮಾನವೀಯವಾಗಿ ಹಿಂಸಿಸಲಾಗುತ್ತಿದೆ. ಆದರೂ ನಮ್ಮ ಮುಕ್ತ ಪತ್ರಿಕೆಗಳು ಮೂಕವಾಗಿವೆ. ಈ ಪರಿಸ್ಥಿತಿ ಅಮೇರಿಕಾವನ್ನೂ ಸೇರಿದಂತೆ ಎಲ್ಲಾ ದೇಶಗಳಲ್ಲೂ ಕಾಣಬಹುದಾಗಿದೆ. ಈ ಎಲ್ಲಾ ಅಕ್ರಮ ನೀತಿಗಳ ವಿರುದ್ಧ ದುಡಿಯುವ ವರ್ಗ ಹೋರಾಡುವುದು ಅವಶ್ಯವಾಗಿದೆ.

**ಅಮೇರಿಕಾದ ಅಪಪ್ರಚಾರ :** ಪ್ರತಿಯೊಂದು ಯುದ್ಧ ನಡೆಸುವ ಮುನ್ನವೂ ಸಾರ್ವಜನಿಕ ಅಭಿಪ್ರಾಯವನ್ನು ಗೊಂದಲದಲ್ಲಿ ಸಿಲುಕಿಸಲು ಹಾಗೂ ಆಕ್ರಮಣಕಾರಿ ನೀತಿಯನ್ನು ಸಮರ್ಥಿಸಿಕೊಳ್ಳಲು ಅನೇಕ ರೀತಿಯ ಮಿಥ್ಯೆಗಳನ್ನು ಸೃಷ್ಟಿಸಲಾಗುತ್ತದೆ. ಪ್ರಸ್ತುತ ಇರಾಕ್ ಯುದ್ಧದ ಸಂದರ್ಭದಲ್ಲಿ ಈ ಮಿಥ್ಯಾರೋಪಗಳು ಪರಾಕಾಷ್ಠೆ ತಲುಪಿವೆ ಎಂದು ಹೇಳಬಹುದು. ಸುದ್ದಿ ದೃಶ್ಯ ಮಾಧ್ಯಮಗಳೂ ಸಹ ಅಮೇರಿಕಾದ ಗುಲಾಮರಂತೆ ಕಾರ್ಯ ನಿರ್ವಹಿಸಿವೆ. ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಮಾಧ್ಯಮಗಳು ಸ್ವತಂತ್ರವಾಗಿರುತ್ತವೆ ಎಂದು ರೂಪಿಸುವುದು ಮರೀಚಿಕೆಯ ಬೆನ್ನಟ್ಟಿದಂತೆ. ಬಹುತೇಕ ಎಲ್ಲಾ ಪತ್ರಿಕೆಗಳು, ಟಿವಿ ಚಾನಲ್‌ಗಳು ದೊಡ್ಡ ದೊಡ್ಡ ವ್ಯಾಪಾರಿಗಳ ಹಿಡಿತದಲ್ಲಿರುವುದರಿಂದ ಅವರಲ್ಲಿ ಸಂಪಾದಕೀಯ ಸ್ವಾತಂತ್ರ್ಯ ಎಂಬುದೇ ಇರುವುದಿಲ್ಲ. ಆಳುವ ವರ್ಗಗಳು ಸಮರ್ಥಿಸುವ ಬೆಂಬಲಿಸುವ ಈ ವರ್ಗ ಹಿತಾಸಕ್ತಿಗಳನ್ನು ಬಯಲಿಗೆಳೆದು ಪ್ರತಿಭಟಿಸುವುದು ದುಡಿಯುವ ವರ್ಗಗಳ ಕರ್ತವ್ಯವಾಗಬೇಕು.

ದುಡಿಯುವ ವರ್ಗಗಳು ಅಂತರರಾಷ್ಟ್ರೀಯ ವಿದ್ಯಮಾನಗಳಲ್ಲಿ ಬೂರ್ಷ್ವಾಗಳ ನಾಯಕತ್ವಕ್ಕೆ ಮನ್ನಣೆ ನೀಡಿದರೆ, ತಮ್ಮ ದೇಶಗಳಲ್ಲಿ ಬಂಡವಾಳಶಾಹಿ ಸರ್ವಾಧಿಕಾರವನ್ನು ಮನ್ನಿಸಬೇಕಾಗುತ್ತದೆ. ವಿದೇಶ ವ್ಯವಹಾರಗಳು ಕೇವಲ ದೇಶೀಯ ನೀತಿಗಳನ್ನೇ ಅವಲಂಬಿಸಿರುತ್ತವೆ. ಯಾವುದೇ ಜನ ಯುದ್ಧ ಸನ್ನಿವೇಶದಲ್ಲಿ ಒಂದು ನೀತಿ, ಅನ್ಯ ಸನ್ನಿವೇಶದಲ್ಲಿ ಒಂದು ನೀತಿಯನ್ನು ಬೆಂಬಲಿಸಬಾರದು. ಎರಡು ಸನ್ನಿವೇಶಗಳಲ್ಲೂ ದುಡಿಯುವ ವರ್ಗಗಳ ಶತ್ರು ಬಂಡವಾಳವೇ ಎಂಬ ಅಂಶವನ್ನು ಮನದಟ್ಟು ಮಾಡಿಕೊಳ್ಳಬೇಕು. ಯುದ್ಧದ ಸಂದರ್ಭದಲ್ಲಿ ದುಡಿಯುವ ವರ್ಗಗಳು ವರ್ಗ ಹೋರಾಟವನ್ನು ಸ್ಥಗಿತಗೊಳಿಸಿ ದೇಶದ ಗೆಲುವಿಗಾಗಿ ಹೋರಾಡಬೇಕು ಎಂಬ ನೀತಿ ಅರ್ಥಹೀನವಾದದ್ದು. ಆರೋಗ್ಯ, ಶಿಕ್ಷಣ, ವೇತನ, ಪಿಂಚಣಿ, ಕೂಲಿ ಇವುಗಳನ್ನು ನೀಡಲು ಹಣವಿಲ್ಲ, ಶಾಲೆ, ಆಸ್ಪತ್ರೆ ನಿರ್ಮಿಸಲು ಹಣವಿಲ್ಲ ಎಂದು ಜಾರಿಕೊಳ್ಳುವ ಸರ್ಕಾರಗಳು ಮಿಲಿಟರಿ ವೆಚ್ಚಕ್ಕೆ ಹೇಗೆ ಹಣ ಹೊಂದಿಸುತ್ತವೆ ಎಂದು ಜನತೆ ಯೋಚಿಸಬೇಕಾಗಿದೆ. ಈ ಅಂಶ ಅಮೇರಿಕದಷ್ಟೇ ಭಾರತದಲ್ಲೂ ಅನ್ವಯಿಸುತ್ತದೆ. ಆಳುವ ವರ್ಗಗಳ ಬಣ್ಣ ಒಂದೇ, ಕೆಲವು ತೈಲ ಕಂಪನಿಗಳು ಹಾಗೂ ಶಸ್ತ್ರಾಸ್ತ್ರ ತಯಾರಕರ ಲಾಭಕ್ಕಾಗಿ ಅಮೇರಿಕಾ ಇರಾಕ್, ಆಫ್ಘಾನಿಸ್ತಾನದಲ್ಲಿ, ಭಾರತ ಪಾಕಿಸ್ತಾನ, ಕಾರ್ಗಿಲ್‌ನಲ್ಲಿ ಸೈನಿಕರನ್ನು ಬಲಿ ನೀಡುತ್ತಿವೆ.

**ಬಂಡವಾಳಶಾಹಿ – ಯುದ್ಧದ ಅನ್ವರ್ಥನಾಮ.** ಯುದ್ಧದ ಸನ್ನಿವೇಶವನ್ನು ಭಾವಾವೇಶದ ದೃಷ್ಟಿಯಿಂದ ಅವಲೋಕಿಸುವುದು ವ್ಯರ್ಥಾಲಾಪವಾಗುತ್ತದೆ. ಇದು ವೈದ್ಯರಾದವರು ರೋಗಿಗೆ ಸರಿಯಾದ ಚಿಕಿತ್ಸೆ ನೀಡದೆ ಅವನ ಸ್ಥಿತಿಯ ಬಗ್ಗೆ ಮರುಕ ವ್ಯಕ್ತಪಡಿಸಿದಂತಾಗುತ್ತದೆ. ವೈದ್ಯರ ಮರುಕದಿಂದ ರೋಗ ವಾಸಿಯಾಗುವುದಿಲ್ಲ. ಹಾಗೆಯೇ ಯುದ್ಧವನ್ನು ವಿರೋಧಿಸುವಾಗ ಯುದ್ಧದ ಹಿಂದಿನ ಕಾರಣಗಳನ್ನು ಅರಿಯಬೇಕು. ಇದಕ್ಕಾಗಿ ಯುದ್ಧದ ಹಿಂದಿನ ವರ್ಗ ಹಿತಾಸಕ್ತಿಗಳನ್ನು ಅವಲೋಕನ ಮಾಡಬೇಕು. ೧೦೦ ವರ್ಷಗಳ ಮುನ್ನವೇ ಲೆನಿನ್ ಬಂಡವಾಳಶಾಹಿ ಎಂದರೆ ಯುದ್ಧ ಎಂದು ವ್ಯಾಖ್ಯಾನಿಸಿದ್ದರು. ಇಂದಿನ ಪರಿಸ್ಥಿತಿಯಲ್ಲಿ ಈ ವ್ಯಾಖ್ಯಾನ ಹೆಚ್ಚು ಪ್ರಸ್ತುತ ಎನಿಸುತ್ತದೆ. ಬಂಡವಾಳಶಾಹಿಯು ಎದುರಿಸುತ್ತಿರುವ ಜಾಗತಿಕ ಬಿಕ್ಕಟ್ಟು, ಆರ್ಥಿಕ, ರಾಜಕೀಯ, ಮಿಲಿಟರಿ, ಅಸ್ಥಿರತೆಯಲ್ಲಿ ವ್ಯಕ್ತವಾಗುತ್ತದೆ. ಶಾಂತಿಗಾಗಿ ಪ್ರಾರ್ಥಿಸುವುದರಿಂದಾಗಲೀ ವಿಶ್ವಸಂಸ್ಥೆಯ ಯತ್ನಗಳಿಂದಾಗಲೀ ಯುದ್ಧಗಳನ್ನು ತಡೆಯಲಾಗುವುದಿಲ್ಲ, ಈ ಹಿಂದೆಯೂ ಆಗಿಲ್ಲ ಎಂಬ ಅಂಶ ಇರಾಕ್ ಯುದ್ಧದಲ್ಲಿ ಸ್ಪಷ್ಟವಾಗಿದೆ. ಬಂಡವಾಳಶಾಹಿ ಸಾಮ್ರಾಜ್ಯಶಾಹಿಯ ವಿರುದ್ಧ ಕ್ರಾಂತಿಕಾರಿ ಹೋರಾಟದಿಂದ ಮಾತ್ರ ಯುದ್ಧಗಳನ್ನು ತಡೆಗಟ್ಟಬಹುದು.

ಪ್ರಸ್ತುತ ಅಮೇರಿಕಾದ ಇರಾಕ್ ಆಕ್ರಮಣ, ಮಧ್ಯಪ್ರಾಚ್ಯದಲ್ಲಿ ತೀವ್ರತರನಾದ ಪರಿಣಾಮಗಳನ್ನು ಉಂಟುಮಾಡುತ್ತದೆ. ಈಗಾಗಲೇ ಶಿಯಾ ಮೂಲಭೂತವಾದಿಗಳು ಇರಾಕ್‌ನಲ್ಲಿ ಅಧಿಕಾರ ಹಿಡಿಯಲು ಹವಣಿಸುತ್ತಿದ್ದಾರೆ. ಇಷ್ಟು ವರ್ಷಗಳಿಂದ ಸರ್ವಾಧಿ

ಕಾರವಾದರೂ ಸೆಕ್ಯುಲರ್ ನೀತಿಗಳನ್ನು ಅನುಸರಿಸುತ್ತಿದ್ದ ಸದ್ದಾಂ ಹುಸೇನ್ ಸ್ಥಾನವನ್ನು ಮುಂಬರುವ ದಿನಗಳಲ್ಲಿ ಅಮೆರಿಕಾ ಬೆಂಬಲಿತ ಮೂಲಭೂತವಾದಿಗಳು ಅಲಂಕರಿಸಲಿದ್ದಾರೆ. ಇದು ಇರಾಕಿನ ಜನತೆಗೆ ಅಮೆರಿಕಾದ ಕೊಡುಗೆ. ಇರಾಕ್‌ನ ಜನತೆ ಈಗಾಗಲೇ ಅಮೆರಿಕಾ ಸಾಮ್ರಾಜ್ಯಶಾಹಿಗಳ ವಿರುದ್ಧ ಬೀದಿಗಿಳಿದು ಹೋರಾಡುತ್ತಿದ್ದಾರೆ. ಇದೇ ಹೋರಾಟಗಳು ಇತರ ಅರಬ್ ರಾಷ್ಟ್ರಗಳಾದ ಈಜಿಪ್ಟ್, ಜೋರ್ಡಾನ್, ಸೌದಿ ಅರೇಬಿಯ, ಕುವೈತ್ ಇತರ ರಾಷ್ಟ್ರಗಳಲ್ಲಿ ಜನಾಂದೋಲನಕ್ಕೆ ನಾಂದಿಯಾಗುವ ಸಾಧ್ಯತೆಯಿದೆ. ಈ ರಾಷ್ಟ್ರಗಳ ಭ್ರಷ್ಟ ಸರ್ಕಾರಗಳನ್ನು ಈ ಅಂಶ ಚಿಂತೆಗೀಡುಮಾಡಿದೆ. ಕಳೆದ ೫೦ ವರ್ಷಗಳಲ್ಲಿ ಮಧ್ಯಪ್ರಾಚ್ಯ, ಉತ್ತರ ಆಫ್ರಿಕಾದಲ್ಲಿ ಸಾಮ್ರಾಜ್ಯಶಾಹಿ ಗುಲಾಮಿ ಸರ್ಕಾರಗಳು ಜನರ ಸಾಮರ್ಥ್ಯವನ್ನು ವ್ಯರ್ಥಮಾಡಿವೆ. ಈ ಹಿಂದೆ ನಡೆದ ರಾಷ್ಟ್ರೀಯ ವಿಮೋಚನಾ ಚಳುವಳಿಗಳ ಎಲ್ಲಾ ತ್ಯಾಗ ಬಲಿದಾನಗಳೂ ವ್ಯರ್ಥವಾಗಿವೆ. ಹಿಂದೆಂದಿಗಿಂತಲೂ ಹೆಚ್ಚಾಗಿ ಅರಬ್ ರಾಷ್ಟ್ರಗಳು ಇಂದು ಸಾಮ್ರಾಜ್ಯಶಾಹಿಯನ್ನು ಅವಲಂಬಿಸಿವೆ. ಅರಬ್ ರಾಷ್ಟ್ರಗಳ ಈ ರಾಜರುಗಳನ್ನು, ಸಾಮ್ರಾಜ್ಯಶಾಹಿ ಗುಲಾಮರನ್ನು, ಕಿತ್ತೊಗೆಯುವುದು ಅಲ್ಲಿನ ದುಡಿಯುವ ವರ್ಗಗಳ ಕರ್ತವ್ಯವಾಗಿದೆ.

ಈ ರೀತಿಯ ಕ್ರಾಂತಿಕಾರಿ ಹೋರಾಟಗಳು ನಡೆಯದಿದ್ದಲ್ಲಿ ವಿಶ್ವದಾದ್ಯಂತ ಮಿಲಿಟರಿ ಆಡಳಿತಗಳು ಹುಟ್ಟಿಕೊಳ್ಳುತ್ತವೆ. ರಾಷ್ಟ್ರ ರಕ್ಷಣೆ ನೆಪದಲ್ಲಿ ಅಪಾರ ಹಣವನ್ನು ಪೋಲು ಮಾಡಲಾಗುತ್ತದೆ. ಮಿಲಿಟರಿ ರಕ್ಷಿಸುವುದು ದೇಶಗಳನ್ನಲ್ಲ, ದೊಡ್ಡ ಬ್ಯಾಂಕುಗಳನ್ನು, ಕಾರ್ಪೊರೇಷನ್‌ಗಳನ್ನು, ತೈಲ ಕಂಪನಿಗಳನ್ನು, ಶಸ್ತ್ರಾಸ್ತ್ರ ತಯಾರಕರನ್ನು. ೧೯೯೧ರ ಇರಾಕ್ ಯುದ್ಧಕ್ಕೆ ಇಂಗ್ಲೆಂಡ್ ೩ ಬಿಲಿಯನ್ ಪೌಂಡ್ ವೆಚ್ಚ ಮಾಡಿದ್ದರೆ ಪ್ರಸ್ತುತ ಯುದ್ಧದಲ್ಲಿ ಒಂದು ಬಿಲಿಯನ್ ಪೌಂಡು ಖರ್ಚು ಮಾಡಿದೆ. ಎರಡನೇ ಮಹಾಯುದ್ಧದಿಂದೀಚೆಗೆ ಅಮೆರಿಕಾ ಶಸ್ತ್ರಾಸ್ತ್ರಗಳ ಮೇಲೆ ೧೯ ಟ್ರಿಲಿಯನ್ ಡಾಲರ್‌ಗಳನ್ನು ಖರ್ಚು ಮಾಡಿದೆ. ೨೦೦೦ ವರ್ಷಗಳ ಕಾಲ, ದಿನಕ್ಕೆ ೨೬ ಮಿಲಿಯನ್ ಡಾಲರ್‌ಗಳಂತೆ ಖರ್ಚು ಮಾಡಿದರೂ, ಈ ಮೊತ್ತ ತಲುಪಲಾಗುವುದಿಲ್ಲ. ಈ ಮೊತ್ತದಲ್ಲಿ ಇಡೀ ವಿಶ್ವದ ಜನರ ಜೀವನ ಮಟ್ಟವನ್ನು ಸುಧಾರಿಸಲು ಸಾಧ್ಯ. ಬಂಡವಾಳಶಾಹಿಯ ಪ್ರತಿಗಾಮೀ ಧೋರಣೆ, ಕೊಳತ ನೀತಿಗೆ ಇದೊಂದು ನಿದರ್ಶನ ಮಾತ್ರ.

ಮಿಲಿಟರಿ ಉಪಾಸಕರ, ಯುದ್ಧ ಪಿಪಾಸುಗಳ ಮುಖ್ಯ ಧ್ಯೇಯ ಯಾವುದೇ ರಾಷ್ಟ್ರದ ರಕ್ಷಣೆಯಲ್ಲ. ಬದಲಾಗಿ, ಬಂಡವಾಳಶಾಹಿ ಶತ್ರುಗಳೊಡನೆ ಹೋರಾಡಲು ದಮನಕಾರಿ ಪ್ರಭುತ್ವದ ಸ್ಥಾಪನೆಯಾಗಿರುತ್ತದೆ. ಇದು ಬಂಡವಾಳಶಾಹಿ ವ್ಯವಸ್ಥೆಯ ಅವಿಭಾಜ್ಯ ಅಂಗ. ಆಳುವ ವರ್ಗಗಳ ಈ ನೀತಿಗೆ ದುಡಿಯುವ ವರ್ಗಗಳು ತ್ಯಾಗ ಮಾಡಬೇಕಾಗುತ್ತದೆ. ಸ್ಪಷ್ಟವಾಗಿ ಹೇಳುವುದಾದರೆ ಈ ಯುದ್ಧಗಳು ಎಂದಿಗೂ ಸಾಮಾನ್ಯ ಜನತೆಯ ಹಿತಾಸಕ್ತಿಗಳಿಗಾಗಿ ನಡೆಯುವುದಿಲ್ಲ. ಸಾಮ್ರಾಜ್ಯಶಾಹಿ ಬಂಡವಾಳಶಾಹಿ ಹಿತಾಸಕ್ತಿಗಳಿಗಾಗಿ ನಡೆಯುತ್ತವೆ. ವಿಶ್ವಶಾಂತಿ ಬಯಸುವ ಪ್ರತಿಯೊಬ್ಬರೂ ಈ ಯುದ್ಧಗಳನ್ನೂ ಯುದ್ಧಕೋರ ನೀತಿಗಳನ್ನೂ ವಿರೋಧಿಸಿ ಹೋರಾಡುವುದು ಅವಶ್ಯಕ.

ನಾ. ದಿವಾಕರ
ಬೆಳ್ಳೂರು

# ಸೂರ್ಯ : ಮೂರು ನೋಟಗಳು

## ಪ್ರಾರ್ಥನೆ

ನೀರ ಹನಿಯೊಂದು
ಪ್ರಾರ್ಥಿಸಿತು ಸೂರ್ಯನಿಗೆ :
ಜಗದಗಲ ಬೆಳಗುವ
ಬೆಳಕಿನ ಮಹಾಮುನಿಯೇ
ಉಳಿಸಿಬಿಡು ಎನ್ನ
ದಣಿದ ಗಂಟಲಿಗಿಳಿವ
ಅಳಿಲ ಸೇವೆಗೆ ಮುನ್ನ





## ಬೀಜ-ವೃಕ್ಷ

ಹೊಳೆವ ಸೂರ್ಯನ ಕಂಡು
ಹೇಳಿಕೊಂಡಿತು ಉರಿವ ಪುಟ್ಟ ಹಣತೆ :
ಅಯ್ಯಾ, ಪರಂಜ್ಯೋತಿಯೆ
ಬ್ರಹ್ಮಾಂಡ ಬೆಳಗುತ್ತಲಿರುವೆ,
ಕತ್ತಲೆಯ ಈ ಕೋಣೆ ಬೆಳಗಲು
ನಾನೇ ಬೇಕಲ್ಲ!

ಹಣತೆ ಮಾತಿಗೆ ಮೆತ್ತಗೆ
ಸೂರ್ಯ ನುಡಿದ :
ಬೆಳಕಿನ ಬೀಜವೇ ನೀನು;
ನಾನು ಮಹಾವೃಕ್ಷ!

## ಗಂಟೆ ಹೂ

ಚುಮುಚುಮು ನಸುಕಿಗೆ
ಕಿಲಿಕಿಲಿ ಹಕ್ಕಿ
ಗಂಟೆ ಹೂಗಳ ನೆಕ್ಕಿ
ಪ್ರಾರ್ಥಿಸಿತು ಸೂರ್ಯನಿಗೆ :
ಕಾಲ ಕಾಲಕ್ಕೆ ಅರಳುವ
ಮಹಾಗಂಟೆ ಹೂವೇ
ಇರಲಿ ನಿನ್ನೀ ಕರುಣೆ
ನಿರಂತರ –
ಜೇನುಕ್ಕುವ ಈ ಪುಟ್ಟ
ಗಂಟೆ ಹೂಗಳ ಮೇಲೆ ;
ನನ್ನ ಮೇಲೆ.



ಜಿ. ಎಸ್. ಉಬರಡ್ಕ
ದೊಡ್ಡತೋಟ ಅಂಚೆ, ದ.ಕ.

# ಲಿಂಗಾಯತ ಧರ್ಮ ಪಂಚಾಚಾರ್ಯ ಪ್ರಣೀತ ಧರ್ಮವಲ್ಲ

**ಹನ್ನೆರಡನೆಯ ಶತಮಾನದಲ್ಲಿ ಇಡೀ ಮಾನವ ಸಮುದಾಯವನ್ನು ತನ್ನ ತೋಳ ತೆಕ್ಕೆಯಲ್ಲಿ ಇಂಬಿಟ್ಟುಕೊಂಡು ಮುನ್ನಡೆದಿದ್ದ ಮಾನವ ಧರ್ಮ ಇಂದು ಅಪಾರ್ಥಕ್ಕೆ ಎಡೆಯಾಗುತ್ತಿದೆ. ಕೆಲವರಿಂದ ಅವಹೇಳನಕ್ಕೆ , ಇನ್ನೂ ಕೆಲವರಿಂದ ಟೀಕೆಗೂ ಇದು ಗುರಿಯಾಗುತ್ತಿದೆ. ಕಂದಾಚಾರ, ಮೂಢನಂಬಿಕೆಗಳನ್ನು ಪರಿಪೋಷಿಸಿಕೊಂಡು ಬರುತ್ತಿರುವ ಮಠ-ಪೀಠಗಳ ಅಧಿಪತಿಗಳಿಂದಲಂತೂ ಅಪಮೌಲ್ಯಗೊಳ್ಳುತ್ತಿದೆ. ಬಸವಾದಿ ಶರಣರು ಕಟ್ಟಿದ ಮಹಾಮನೆಯಲ್ಲಿ ಈಗ ತೊಗಲು ಬಾವಲಿಗಳು, ಕಣ್ಣಪ್ಪಡಿಗಳು ಮನೆಮಾಡಿಕೊಂಡು ಆ ಮನೆಯ ಹಿರಿಮೆ-ಗರಿಮೆಗಳಿಗೆ ಕುಂದುಂಟುಮಾಡುತ್ತಿವೆ. ''ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜ ತುಂಬಿ ಮನೆಯೊಳಗೆ ಮನೆಯೊಡೆಯನಿಲ್ಲ'' ಎಂದು ಹೇಳುವ ಪರಿಸ್ಥಿತಿ ಉಂಟಾಗಿದೆ. ಇಂಥ ಸಂದರ್ಭದಲ್ಲಿ ಜಾಗೃತ ಭಕ್ತರು ಬಸವಾದಿ ಶರಣರು ಕಟ್ಟಿದ ಮನೆ ಎಂಥದ್ದು ? ಅದರಲ್ಲಿ ಎಂಥ ಮನೋಭಾವದವರು ವಾಸ ಮಾಡಬೇಕು ? ಅದರ ನಿಜವಾದ ವಾರಸುದಾರರು ಯಾರು ? ಅದು ಯಾರ ಸ್ವತ್ತು ? ಎಂಬ ಮುಂತಾದ ಸಂಗತಿಗಳನ್ನು ಅನಿವಾರ್ಯವಾಗಿ ಚರ್ಚೆ ಮಾಡಲೇಬೇಕಾಗಿದೆ.**

**ವಿಶ್ವಾರಾಧ್ಯ ಸತ್ಯಂಪೇಟೆ**

ಹಿಂದೊಂದು ಕಾಲವಿತ್ತು. ವೀರಶೈವ (ಲಿಂಗಾಯತ)ರಲ್ಲಿ ಗುರುಗಳೆನಿಸಿಕೊಂಡ ಕೆಲವರು ಏನು ಹೇಳಿದರೂ ಅದನ್ನು ಭಕ್ತರಾದವರು ಬಾಯಿ ತೆರೆದು ಸತ್ಯವೆಂದು ನಂಬಿಕೊಂಡು ಬರುತ್ತಿದ್ದರು. ಇವರ ಒಂದಕ್ಕೊಂದು ತಾಳೆ ಇಲ್ಲದ ಕಾಗಕ್ಕ-ಗುಬ್ಬಕ್ಕನ ಕಥೆಯನ್ನು ಕೇಳಿಸಿಕೊಂಡು ಅದನ್ನೇ ನಂಬಿಕೊಂಡಿದ್ದರು. ಈಗ ಕಾಲ ಬದಲಾಗಿದೆ. ಅಂದಂತೆ ಗುರುಗಳೆಂಬುವರು ಏನು ಹೇಳಿದರೂ ತಲೆಗಳನ್ನು ಅಲ್ಲಾಡಿಸಿಕೊಂಡು ಸುಮ್ಮನೆ ಕುಳಿತಿರುತ್ತಿದ್ದ ಭಕ್ತ ಸಮೂಹ ಇಂದು ಎಚ್ಚರವಾಗಿದೆ. ಚಿಂತನೆ ಮಾಡುವಂಥವರಾಗಿದ್ದಾರೆ. ಇದಕ್ಕೆಲ್ಲ ಮುಖ್ಯ ಕಾರಣವೆಂದರೆ ಅವರುಗಳಲ್ಲಿ ಹಲವರು ಬಸವಾದಿ ಶರಣರ ವಚನಗಳನ್ನು ಅಭ್ಯಾಸ ಮಾಡಿಕೊಂಡಿದ್ದಾರೆ. ಇತಿಹಾಸವನ್ನು ಗಮನಿಸಿದ್ದಾರೆ. ವೈಜ್ಞಾನಿಕ ಚಿಂತನೆ ನಡೆಸಿದ್ದಾರೆ. ಹಾಗಾಗಿ ಅವರಿಗೆ ಈಗ ಸತ್ಯ ಏನು ಎಂಬುದು ಮನವರಿಕೆಯಾಗಿದೆ.

ಆದರೇನಂತೆ ? ಲಿಂಗಾಯತ ಧರ್ಮದ ಜಗದ್ಗುರುಗಳು ನಾವು ಎಂದು ಹೇಳಿಕೊಂಡು ಬರುತ್ತಿರುವ ಪಂಚಪೀಠಾ(ಡಾ)ಧೀಶ್ವರರು ಮಾತ್ರ ತಮ್ಮ ಎಂದಿನ ಹುಂಬ, ತಳಬುಡವಿಲ್ಲದ ಮಾತುಗಳನ್ನೇ ಹೇಳಿಕೊಂಡು ಮುನ್ನಡೆದಿದ್ದಾರೆ. ಇಂದಿನ ವೈಜ್ಞಾನಿಕ ಯುಗದಲ್ಲಿಯೂ ಅಂಧ ಆಚರಣೆಗಳಾದ ಲಕ್ಷ ದೀಪೋತ್ಸವ, ಕುಂಭಾಭಿಷೇಕ, ಸಹಸ್ರ ಬಿಲ್ವಾರ್ಚನೆ, ಯಜ್ಞ, ಯಾಗಾದಿಗಳನ್ನು ಆಚರಿಸುತ್ತ ತಮ್ಮ ದಡ್ಡತನವನ್ನು ಪ್ರದರ್ಶಿಸುತ್ತಿದ್ದಾರೆ. ಇವರ ಜೊತೆ ಜೊತೆಗೆ ಈ ಪರಂಪರಾಗತ ಗೊಡ್ಡು ಆಚರಣೆಗಳನ್ನು ವ್ಯವಸ್ಥಿತ ರೀತಿಯಲ್ಲಿ ಪರಿಪೋಷಿಸಿಕೊಂಡು ಬರುತ್ತಿರುವ ಇದೇ ವರ್ಗಕ್ಕೆ ಸೇರಿದ ಅಯ್ಯನವರೆನ್ನುವ ಕೆಲವು ಜನ ಬರಹಗಾರರು ಜಗದ್ಗುರುಗಳ ಅನೀತಿಯ - ಅಸತ್ಯದ ಮಾತುಗಳಿಗೆ ಪುಷ್ಟಿಕೊಡುವ ಟೊಳ್ಳು ದಾಖಲೆಗಳನ್ನು ಉದಾಹರಿಸುತ್ತ ಮುನ್ನಡೆದಿದ್ದಾರೆ.

ಹನ್ನೆರಡನೆಯ ಶತಮಾನದಲ್ಲಿ ಇಡೀ ಮಾನವ ಸಮುದಾಯವನ್ನು ತನ್ನ ತೋಳ ತೆಕ್ಕೆಯಲ್ಲಿ ಇಟ್ಟುಕೊಂಡು ಮುನ್ನಡೆದಿದ್ದ ಮಾನವ ಧರ್ಮ ಇಂದು ಅಪಾರ್ಥಕ್ಕೆ ಎಡೆಯಾಗುತ್ತಿದೆ. ಕೆಲವರಿಂದ ಅವಹೇಳನಕ್ಕೆ, ಇನ್ನೂ ಕೆಲವರಿಂದ ಟೀಕೆಗೂ ಇದು ಗುರಿಯಾಗುತ್ತಿದೆ. ಕಂದಾಚಾರ, ಮೂಢನಂಬಿಕೆಗಳನ್ನು ಪರಿಪೋಷಿಸಿಕೊಂಡು ಬರುತ್ತಿರುವ ಮಠ-ಪೀಠಗಳ ಅಧಿಪತಿಗಳಿಂದಲಂತೂ ಅಪಮೌಲ್ಯಗೊಳ್ಳುತ್ತಿದೆ. ಬಸವಾದಿ ಶರಣರು ಕಟ್ಟಿದ ಮಹಾಮನೆಯಲ್ಲಿ ಈಗ ತೊಗಲು ಬಾವಲಿಗಳು, ಕಣ್ಣಪ್ಪಡಿಗಳು ಮನೆಮಾಡಿಕೊಂಡು ಆ ಮನೆಯ ಹಿರಿಮೆ-ಗರಿಮೆಗಳಿಗೆ ಕುಂದುಂಟುಮಾಡುತ್ತಿವೆ. ''ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜ ತುಂಬಿ ಮನೆಯೊಳಗೆ ಮನೆಯೊಡೆಯನಿಲ್ಲ'' ಎಂದು ಹೇಳುವ ಪರಿಸ್ಥಿತಿ ಉಂಟಾಗಿದೆ. ಇಂಥ ಸಂದರ್ಭದಲ್ಲಿ ಜಾಗೃತ ಭಕ್ತರು ಬಸವಾದಿ ಶರಣರು ಕಟ್ಟಿದ ಮನೆ ಎಂಥದ್ದು? ಅದರಲ್ಲಿ ಎಂಥ ಮನೋಭಾವದವರು ವಾಸ ಮಾಡಬೇಕು ? ಅದರ ನಿಜವಾದ ವಾರಸುದಾರರು ಯಾರು ? ಅದು ಯಾರ ಸ್ವತ್ತು? ಎಂಬ ಮುಂತಾದ ಸಂಗತಿಗಳನ್ನು ಅನಿವಾರ್ಯವಾಗಿ ಚರ್ಚೆ ಮಾಡಲೇಬೇಕಾಗಿದೆ. ತೀರಾ ಅನಿವಾರ್ಯವಾದರೆ ಬಸವನ ಮಹಾಮನೆಗೆ ತಗಲು ಬಿದ್ದಿರುವ ತೊಗಲು ಬಾವಲಿಗಳನ್ನು ಕಣ್ಣಪ್ಪಡಿಗಳನ್ನು ನಿರ್ದಯವಾಗಿ ಹೊರದೂಡಬೇಕು. ಆ ಮನೆಯ ಮಾಡ ತೊಲೆ ಜಂತಿಗಳಿಗೆ ಅಂಟಿದ ಜೇಡ ಬಲೆಯನ್ನು ತೆಗೆದು ಹಾಕಬೇಕು. ಅಂದಾಗಲೇ ವಿಶ್ವಮಾನ್ಯ ತತ್ವಗಳ ಬಸವಣ್ಣನವರ ಮಾನವ ಧರ್ಮಕ್ಕೊಂದು ಮಾನ್ಯತೆ ದೊರಕುತ್ತದೆ.

ಕೆಲವು ಜನ ಮಠಾಧೀಶರು ಹಾಗೂ ಅವರನ್ನು ಪರಿಪೋಷಿಸಿಕೊಂಡು ಬರುತ್ತಿರುವ ಲೇಖಕರು ವೀರಶೈವ ಧರ್ಮ ಸಂಸ್ಥಾಪಕರು ಯಾರು ? ಎಂದು (ಯಾರೊಬ್ಬರೂ ಇವರನ್ನು ಕೇಳದಿದ್ದರೂ) ಹಲವಾರು ಸಭೆಗಳಲ್ಲಿ, ಕೆಲವು ಪತ್ರಿಕೆಗಳಲ್ಲಿ ಆ ಬಗ್ಗೆ ಪುಂಖಾನುಪುಂಖವಾಗಿ ಹೇಳುತ್ತ/ ಬರೆಯುತ್ತ ನಡೆದಿದ್ದಾರೆ. ಯಾವುದೋ ಕೆಲವು ಸಭೆಯಲ್ಲಿ ಮತ್ತೆ ಇನ್ನಾವುದೋ ಒಂದು ಪತ್ರಿಕೆಯಲ್ಲಿ ಸುಳ್ಳನ್ನು ಹತ್ತಾರು ಸಲ ಹೇಳುವುದರಿಂದ/ಬರೆಯುವುದರಿಂದ ಅದೇನು ಸತ್ಯ ಆಗಲಾರದು. ಸುಳ್ಳು ಎಷ್ಟು ಸಲ, ಎಷ್ಟು ಕಾಲ ಹೇಳಿದರೂ ಅದು ಸುಳ್ಳೆ. ಖರೆ ಎಂದಾದರೂ ಖರೆಯೇ ಆಗಿರುತ್ತದೆ. ವೀರಶೈವ ಧರ್ಮ ಸಂಸ್ಥಾಪಕರು ರೇಣುಕಾಚಾರ್ಯರು ಎಂದು ಹೇಳುವ ಇವರ ಮೊದಲ ಮಾತೇ ದಾಖಲೆರಹಿತವಾದ, ಕುತ್ಸಿತತನದ ವಿಷಯವಾಗಿದೆ. ವೀರಶೈವ ಧರ್ಮದ ಸಂಸ್ಥಾಪಕರು ರೇಣುಕಾಚಾರ್ಯರು ಎಂದು ಹೇಳುವ ಇವರುಗಳು ಅಪ್ಪಿ ತಪ್ಪಿಯೂ ರೇಣುಕಾಚಾರ್ಯರ ತಂದೆ-ತಾಯಿಗಳು ಯಾರು ? ಅವರು ಎಷ್ಟನೇ ಶತಮಾನದಲ್ಲಿ ಜೀವಿಸಿದ್ದರು ? ಅವರು ಮಾಡಿದ ಧಾರ್ಮಿಕ, ಸಾಮಾಜಿಕ ಹಾಗೂ ಸಂಘಟನಾತ್ಮಕ ಕೆಲಸಗಳು ಯಾವುವು ? ಅವರು ಎಂಥ ಸಾಹಿತ್ಯವನ್ನು ರಚಿಸಿದ್ದಾರೆ ? ಅವರು ಸಮಾಜಕ್ಕೆ ಎಂಥ ಕೊಡುಗೆಯನ್ನು ಬಿಟ್ಟುಹೋಗಿದ್ದಾರೆ ? ಎಂಬಿತ್ಯಾದಿ ಸಂಗತಿಗಳನ್ನು ಹೇಳುವ ಗೋಜಿಗೆ ಹೋಗುವದಿಲ್ಲ. ಇದಕ್ಕೆ ಬದಲಾಗಿ ಜಗದ್ಗುರುಗಳು ನಮ್ಮ ನಿಮ್ಮಂತೆ ತಾಯಿಯ ಗರ್ಭದಲ್ಲಿ ಪಿಂಡವಾಗಿ ಬೆಳೆದು ಆಕೆಯ ಯೋನಿಯ ಮೂಲಕ ಬಂದವರಲ್ಲವಂತೆ ! ಅವರು ತಂದೆ-ತಾಯಿಗಳೇ ಇಲ್ಲದೆ ಹುಟ್ಟಿದ ಲಿಂಗೋದ್ಭವರಂತೆ। ಇದನ್ನು ಇವರು ಇಂದಿನ ವೈಜ್ಞಾನಿಕ ಯುಗದಲ್ಲೂ ಹೇಳಿಕೊಂಡು ನಡೆದಿದ್ದಾರಲ್ಲ! ಇವರಿಗೆ ಅದೆಷ್ಟು ದಾರ್ಷ್ಟ್ಯ ? ಯಾರಾದರೂ ತಂದೆ-ತಾಯಿಗಳ ಸಂಪರ್ಕವಿಲ್ಲದೆ ಹುಟ್ಟಲು ಸಾಧ್ಯವೆ ? ಕಪ್ಪೆಯೊಳಗೆ ಕಪ್ಪೆ ಹುಟ್ಟುತ್ತದೆ. ಆಕಳ ಹೊಟ್ಟೆಯಲ್ಲಿ ಆಕಳ ಕರು ಜನಿಸುತ್ತದೆ. ಎಮ್ಮೆಯ ಉದರದಲ್ಲಿ ಎಮ್ಮೆಯ ಕರು ಜನನ ಆಗುತ್ತದೆ. ಅದು ಬಿಟ್ಟು ಕಲ್ಲಿನೊಳಗೆ ಮನುಷ್ಯ ಹುಟ್ಟುತ್ತಾನೆಂದು ಢಣಾಡಂಗುರವಾಗಿ ಸಾರುತ್ತ ನಡೆದಿದ್ದಾರಲ್ಲ? ಇದೆಂಥ ಚೋದ್ಯ ?!

ಶ್ರೀಶೈಲ, ಕೇದಾರ ಮತ್ತು ಕಾಶಿ ಜ್ಯೋತಿರ್ಲಿಂಗಗಳ ಸಂಸ್ಥಾಪಕರು ಅಥವಾ ಅವುಗಳ ಮೂಲಪುರುಷ ಮಹಾ ಆಚಾರ್ಯರರು ಇವರುಗಳು ಹೇಳುವಂತೆ ಶೈವ ಮತದ ಸಂಸ್ಥಾಪಕರೇ ಹೊರತು ವೀರಶೈವ ಮತದ ಸಂಸ್ಥಾಪನಾಚಾರ್ಯರಲ್ಲ. ಏಕೆಂದರೆ ವೀರಶೈವ ಧರ್ಮ, ಎಂದಿಗೂ ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ ಎಂದು ಹೇಳಿದ ಧರ್ಮ, 'ಎನ್ನ ಕಾಲೇ ಕಂಬ, ದೇಹವೇ ದೇಗುಲ' ಎಂದು ಸಾರಿ ಹೇಳಿದ ಮನುಷ್ಯ ಧರ್ಮ, 'ಕಟ್ಟಿದ ಲಿಂಗವ ಬಿಟ್ಟು ಬೆಟ್ಟದ ಲಿಂಗಕ್ಕೆ ಹೋಗುವ ಲೊಟ್ಟೆ

ಮೂಳರ ಕಂಡರೆ ಎಡಗಾಲ ಪಾದರಕ್ಷೆಯ ತಕ್ಕೊಂಡು ಲಟ ಲಟನೆ ಹೊಡೆಯಬೇಕು' ಎಂದು ಹೇಳಿದ ನಿಷ್ಠುರ ಧರ್ಮ, ಶರಣ ಸತಿ ಲಿಂಗ ಪತಿ ಎಂಬ ಹೊಸ ವ್ಯಾಖ್ಯಾನ ಬರೆದ ವೈಜ್ಞಾನಿಕ ಧರ್ಮ, 'ಪರಮ ಪತಿವ್ರತೆಗೆ ಗಂಡನೊಬ್ಬ ಮತ್ತೊಂದಕ್ಕೆರಗಿದಡೆ ಕಿವಿ ಮೂಗ ಕೊಯ್ವ', ಎಂಬ ಹೊಚ್ಚ ಹೊಸ ಚಿಂತನೆಗೆ ಹಚ್ಚಿದವರು ಇದರ ಸಂಸ್ಥಾಪಕರು. ಲಿಂಗಾಯತ ಧರ್ಮವನ್ನು ಹಾಗೂ ಇಷ್ಟಲಿಂಗವನ್ನು ಕರುಣಿಸಿದವರು ಬಸವಾದಿ ಶರಣರೇ ಹೊರತು ಬೇರಾರೂ ಅಲ್ಲ. ಈ ಮಾತಿಗೆ ಪುಷ್ಟಿಕೊಡುವ ಹಲವಾರು ದಾಖಲೆಗಳನ್ನು ನಾವು ಇತಿಹಾಸದ ಪುಟದಿಂದ ತೆಗೆದುಕೊಳ್ಳಬಹುದು. ಚಾಮರಸ ಬರೆದ ಪ್ರಭುಲಿಂಗ ಲೀಲೆಯಲ್ಲಿಯಂತೂ ಸುಸ್ಪಷ್ಟವಾಗಿ ಇದನ್ನು ವಿವರಿಸಲಾಗಿದೆ:

*ಕಾಯದೊಳು ಗುರುಲಿಂಗ ಜಂಗಮ।*
*ದಾಯತವನರಿಯಲ್ಕೆ ಸುಲಭೋ।*
*ಪಾಯದಿಂದಿರಿಟ್ಟು ಬಾಹ್ಯಸ್ಥಲಕ್ಕೆ ಕುರುಹಾಗಿ॥*
*ದಾಯದೋರಿ ಸಮಸ್ತ ಭಕ್ತ ನಿ।*
*ಕಾಯವನು ಪಾವನವ ಮಾಡಿದ।*
*ರಾಯಪೂರ್ವಾಚಾರಿ ಸಂಗನ ಬಸವ ಶರಣಾರ್ಥಿ॥*

ಹಾಗೂ

*ಬಸವ ಮಾಡಿದೊಡಾಯ್ತು ಗುರುನೇಲ*
*ಬಸವ ಮಾಡಿದೊಡಾಯ್ತು ಲಿಂಗವು*
*ಬಸವ ಮಾಡಿದೊಡಾಯ್ತು ಜಂಗಮವರಿದ ಮಹಿಮಂಗೆ*
*ಬಸವನಿಂದಾಧ್ಯಾತ್ಮವೇ ಪಸ*
*ರಿಸಿತು ಲೋಕದೊಳಂತು ಕಾರಣ*
*ಬಸವನೇ ಪರದೈವವೆನುತಿರ್ದ ಗುರುರಾಯ॥*

ಎಂದು ಹೇಳುವ ಮೂಲಕ ಬಸವಣ್ಣನಿಂದಲೇ ಲಿಂಗದ ಆವಿಷ್ಕಾರವಾಯಿತು, ಆತನೇ ಪ್ರಥಮಾಚಾರ್ಯ, ಪೂರ್ವಾಚಾರ್ಯ ಎಂದು ಸ್ಪಷ್ಟವಾಗಿ ಹೇಳಿದೆ. ಅಲ್ಲದೆ ಗುರು, ಲಿಂಗ, ಜಂಗಮಕ್ಕೆ (ಜಾತಿ ಜಂಗಮರಲ್ಲ) ಬಸವನೇ ಪರದೈವವಾಗಿದ್ದಾನೆ.

ಇದಲ್ಲದೆ ಹನ್ನೆರಡನೆಯ ಶತಮಾನದಲ್ಲಿದ್ದ ಹಲವಾರು ಜನ ಶರಣರು ಬಸವಣ್ಣ ಕಾರಣಿಕ ಪುರುಷ, ಆತನೇ ಗುರು-ಲಿಂಗ-ಜಂಗಮಕ್ಕೆಯೂ ಮೂಲ ಎಂದು ಕೊಂಡಾಡಿದ್ದಾರೆ. ಇದನ್ನೇನು ನಾನಿಲ್ಲಿ ಒಣ ಜಂಭದಿಂದ ಹೇಳುತ್ತಿಲ್ಲ. ಸತ್ಯವನ್ನು ತಿಳಿಯ ಬೇಕೆಂದವರು ವಚನ ಸಾಹಿತ್ಯವನ್ನು ಅಧ್ಯಯನ ಮಾಡಬೇಕು. ಸತ್ಯವನ್ನು ಮನಗಾಣಬೇಕು. ಮತ್ತೊಂದು ಮಾತನ್ನು ನಾವಿಲ್ಲಿ ಮರೆಯಬಾರದು. ಅಂದಿನ ಶರಣರು ಯಾರೂ ಆತ್ಮ ವಂಚನೆ ಮಾಡಿಕೊಂಡು ಬದುಕಿದವರೇ ಅಲ್ಲ. ಸತ್ಯ ಏನಿದೆಯೋ ಅದನ್ನು ಯಾರಿಗೂ ಅಂಜದೆ ಅಳುಕದೆ ಹೇಳಿದವರು. ಹಾಗೂ ಅದರಂತೆ ಬದುಕಿದವರೂ ಕೂಡ. ಬಸವಣ್ಣನೇ ನಮ್ಮ ಪರಮಾರಾಧ್ಯ ಎಂದು ಹೇಳುವ ವಚನಕಾರರೇ ಬಸವಣ್ಣ ಹಲವು ತಪ್ಪು ಮಾಡಿದಾಗ ಅವರು ಚುರುಕುಮುಟ್ಟಿಸಿದ್ದಾರೆ. ಇದನ್ನು ಬಸವಣ್ಣನವರೂ ಸಹ ಅತ್ಯಂತ ಹಾರ್ದಿಕವಾಗಿಯೇ ಸ್ವೀಕರಿಸಿ 'ಎನ್ನ ತಪ್ಪು ಅನಂತಕೋಟಿ ನಿಮ್ಮ ಸೈರಣೆಗೆ ಲೆಕ್ಕವಿಲ್ಲ' ಎಂದಿದ್ದಾರೆ. ಇಂಥ ಶರಣರು ಯಾವತ್ತೂ ಸುಳ್ಳನ್ನು ಬರೆಯಲಾರರು. ಪಂಚ ಪೀಡಾ(ಠಾ)ಧೀಶ್ವರರು ಹೇಳುವಂತೆ ರೇಣುಕಾಚಾರರ್ಯರೇ ಲಿಂಗದ ಆವಿಷ್ಕಾರಿಗಳಾಗಿದ್ದರೆ, ಧರ್ಮಸಂಸ್ಥಾಪನಾಚಾರ್ಯರಾಗಿದ್ದರೆ ಅದನ್ನು ಅವರು ಮುಕ್ತಕಂಠದಿಂದ ಪ್ರಶಂಸಿಸುತ್ತಿದ್ದರು.



ಜಗಮಾನ್ಯ ಪುರುಷನಾದ, ಮನುಕುಲದ ಅಣ್ಣ ಬಸವಣ್ಣನವರಿಂದಲೇ ಪೂಜೆಗೊಂಡ ಮಹಾಮಹಿಮ, ಶಿವಯೋಗಿ ಸಿದ್ಧಿಗಳನ್ನು ಪಡೆದವರೆಂದು ಪ್ರಖ್ಯಾತನಾದ ಅಲ್ಲಮಪ್ರಭು ಕೂಡ ಬಸವಣ್ಣನವರ ವ್ಯೋಮ ವ್ಯಕ್ತಿತ್ವ ಕಂಡು ನಿಬ್ಬೆರಗಾಗಿದ್ದಾರೆ. ಕೆಲವು ಸಲವಂತೂ ಮೈಮರೆತು ಭಾವೋದ್ರೇಕದಿಂದ ಅನನ್ಯ ಭಕ್ತಿಯಿಂದ ಬಸವಣ್ಣನವರನ್ನು ಕೊಂಡಾಡಿದ್ದಾರೆ. ಹಲವು ಸಲ ಮಹಾಮಹಿಮ ಸಂಗನ ಬಸವಣ್ಣನು, 'ಎನಗೆಯೂ ಗುರು; ನಿನಗೆಯೂ ಗುರು, ಜಗವೆಲ್ಲಕ್ಕೆಯೂ ಗುರು ಕಾಣಾ ಗುಹೇಶ್ವರ' ಎಂದು ಬಸವಣ್ಣನ ಬಗೆಗಿನ ತಮ್ಮ ಅನನ್ಯತೆಯನ್ನು ಹೊರಗೆಡಹಿದ್ದಾರೆ. ಲಿಂಗದ ಮೂಲ ಪರಿಕಲ್ಪನೆಯನ್ನು ಬಸವಣ್ಣನೇ ಕೊಟ್ಟ ಎಂಬುದನ್ನು ಅವರು ಮುಕ್ತಕಂಠದಿಂದ ಪ್ರಶಂಶಿಸಿದ್ದಾರೆ.

೧) ...ಇದ್ದಾನೆ ನೋಡಾ, ಎನ್ನ ಗುರುವಿನ ಗುರು ಬಸವಣ್ಣನೆನ್ನ ಕಂಗಳ ಮುಂದೆ
೨) ...ಪೂರ್ವಾಚಾರಿ ಭಕ್ತಿಭಂಡಾರಿ ಬಸವಣ್ಣ, ನೀನೆನಗೆ ಗುಹೇಶ್ವರ ಲಿಂಗವ ತೋರಿದೆಯಾಗಿ ಲೋಕಾದಿ ಲೋಕವೆಲ್ಲ ಕಿಂಚಿತ್
೩) ...ಗುಹೇಶ್ವರ, ನಿಮ್ಮಾಣೆ ಎನಗೆಯೂ, ನಿನಗೆಯೂ ಬಸವಣ್ಣನ ಪ್ರಸಾದ.
೪) ...ಇಂತೀ ಸರ್ವಾಚಾರ ಸಂಪತ್ತು ನೀನನುಗ್ರಹಿಸಿ ಕೊಟ್ಟೆಯೆಂಬುದ ನಿಮ್ಮ ಪ್ರಮಥರೆಲ್ಲರು ಬಲ್ಲರು... ಗುಹೇಶ್ವರ ಲಿಂಗವು ಸಾಕ್ಷಿಯಾಗಿ, ನಾ ನಿಮ್ಮ ಕರುಣದ ಶಿಶು ಕಾಣಾ ಸಂಗನ ಬಸವಣ್ಣ.
೫) ...ಕರಸ್ಥಲದ ಅನುವನು ಗುಹೇಶ್ವರನ ಶರಣ ಸಂಗನ ಬಸವಣ್ಣ ಬಲ್ಲ...
೬) ಬಸವ ಗುರು ಎನ್ನ ಕರಸ್ಥಲದ ಲಿಂಗದ ಆದಿಯರುಹಿ ತೋರಿದ ಕಾರಣ, ಗುಹೇಶ್ವರ ಲಿಂಗದ ನಿಲವ ನಿನ್ನಿಂದರಿದೆ.
೭) ಗುಹೇಶ್ವರ ಲಿಂಗಕ್ಕೆ ಆದಿಯಾಧಾರವಾದೆಯಲ್ಲ ಬಸವಣ್ಣ!
೮) ಲಿಂಗವೆಂಬ ನಾಮ, ಜಂಗಮವೆಂಬ ಹೆಸರಿಲ್ಲದಂದು, ಗುಹೇಶ್ವರ ನೀನೇ ಲಿಂಗ, ಬಸವಣ್ಣನೇ ಗುರು, ಚೆನ್ನಬಸವಣ್ಣನೊಬ್ಬನೇ ಪ್ರಸಾದಿ, ಮತ್ತಾರನೂ ಕಾಣೆನಯ್ಯ

ಎಂದು ಸ್ಪಷ್ಟವಾಗಿ ಅಲ್ಲಮಪ್ರಭುಗಳು ತಮ್ಮ ಹಲವಾರು ವಚನಗಳಲ್ಲಿ ಹೇಳಿದ್ದಾರೆ.

ಈ ವಚನಗಳನ್ನು ಓದಿದ ಮೇಲಂತೂ ನಮಗೆ ಸಂಶಯವೇ ದೂರವಾಗಿ ಬಸವಣ್ಣನೇ ಎಲ್ಲಕ್ಕೂ ಮೊದಲಿಗ ಎಂದು ಗೊತ್ತಾಗುತ್ತದೆ. ಬಸವ ಇಲ್ಲದ ಭಕ್ತಿಗಾಗಲಿ, ಮುಕ್ತಿಗಾಗಲಿ, ಸುಖಕ್ಕಾಗಲಿ ಯಾವುದಕ್ಕೂ ಬೆಲೆಯಿಲ್ಲ ಎಂಬುದು ಇದರಿಂದ ವೇದ್ಯವಾಗುತ್ತದೆ.

ಸೊನ್ನಲಿಗೆ ಸಿದ್ಧರಾಮಣ್ಣನವರ ವಚನಗಳೂ ಮಡಿವಾಳ ಮಾಚಿದೇವರ ಮಾತುಗಳನ್ನೇ ಮತ್ತಷ್ಟು ಪುಷ್ಟೀಕರಿಸುತ್ತವೆ.

*''ಬಸವಣ್ಣನೇ ತಂದೆ.*
*ಬಸವಣ್ಣನೇ ತಾಯಿ.*
*ಬಸವಣ್ಣನೇ ಸರ್ವ ಬಂಧುವೆನಗೆ''*

ಎಂದು ಮೈದುಂಬಿ ಹಾಡುತ್ತಾರೆ.

*ಅರಿವಿಂಗೆ ಹಿರಿದು ಕಿರಿದುಂಟೆ ?*

ಎಂದು ಅಲ್ಲಮಪ್ರಭುವಿನಂಥ ಮೇರು ವ್ಯಕ್ತಿತ್ವದ ರಸ ಋಷಿಯಿಂದ ಬಣ್ಣಿಸಿಕೊಂಡ ಚೆನ್ನಬಸವಣ್ಣನವರೂ ಸಹ

*''ಬಸವಣ್ಣನಿಂದ ಸರ್ವಾಂಗ ಲಿಂಗಿಯಾದೆನು*
*ಎನ್ನ ಶ್ರೀಗುರು ಬಸವಣ್ಣನು''*

ಎಂದು ಭಾವಪೂರ್ಣವಾಗಿ ನುಡಿಯುತ್ತಾರೆ.

ಇನ್ನುಳಿದ ಅಕ್ಕನಾಗಮ್ಮ, ಡೋಹಾರ ಕಕ್ಕಯ್ಯ, ನೂಲಿಯ ಚಂದಯ್ಯ, ಕದಿರೆಯ ರೆಮ್ಮವ್ವೆ, ಕಾಳವ್ವೆ, ಸೂಳೆ ಸಂಕವ್ವೆ ಮುಂತಾದ ಸಹಸ್ರಾರು ಶರಣ ಗಣ ಸಮೂಹ ಬಸವಣ್ಣನವರನ್ನು ಅನನ್ಯ ಭಕ್ತಿ ಭಾವಗಳಿಂದ ಕೊಂಡಾಡುತ್ತದೆ. ಯಾವ ವ್ಯಕ್ತಿಯಿಂದ ತಮ್ಮ ಬದುಕಿಗೊಂದು ಬಣ್ಣವನ್ನು ತುಂಬಿಕೊಂಡರೋ, ಅವರಿಗೆಲ್ಲ ಬಸವಣ್ಣನೇ ಮಂತ್ರ ಪುರುಷನಾಗಿದ್ದಾನೆ. ಬಸವಣ್ಣನವರನ್ನು ಎಷ್ಟೊಂದು ಭಕ್ತಿ ಭಾವದಿಂದ ಅವರೆಲ್ಲ ಕೊಂಡಾಡುತ್ತಾರೆಂದರೆ, ಬಸವಣ್ಣ ಅವರಿಗೆಲ್ಲ ಉಸಿರು, ಜೀವವಾಗಿದ್ದಾರೆ. ಆದ್ದರಿಂದಲೇ ಅವರು ಆತನ ದೃಷ್ಟಿ ಪರುಷ, ಹಸ್ತ ಪರುಷ, ಭಾವ ಪರುಷ, ಮನ ಪರುಷ, ಅವರನ್ನು ನೆನೆಯುವುದೇ ಲಿಂಗಾರ್ಚನೆ, ಜಂಗಮಾರ್ಚನೆ ಮುಂತಾಗಿ ಕೊಂಡಾಡಿದ್ದಾರೆ. ಹನ್ನೆರಡನೆಯ ಶತಮಾನದ ಎಲ್ಲಾ ಶರಣರ ವಚನಗಳನ್ನು ಬೆದಕಿ ನೋಡಿದರೆ ಈ ಮಾತು ಸ್ಪಷ್ಟವಾಗುತ್ತದೆ.

''ಬಸವ ರೂಪಿಸಿಕೊಂಡ ಸಮಾಜ ರಚನೆ ಸ್ವತಂತ್ರವೂ, ನೂತನವೂ ಆಗಿದೆ. ಇಷ್ಟ ಲಿಂಗ ಧರಿಸಿ, ಅದು ಪ್ರತಿನಿಧಿಸಿದ ತತ್ವ, ನಿಯಮ, ಮೌಲ್ಯಗಳನ್ನು ಒಪ್ಪಿಕೊಂಡವರು ಅದರ ಕ್ರಿಯಾತ್ಮಕ ಸದಸ್ಯರು. ಅವರನ್ನು ಆತನು ಶರಣರೆಂದು ಕರೆದು, ಇತರರಿಂದ ಅವರನ್ನು

ಪ್ರತ್ಯೇಕಿಸಿ ಅವರದೇ ಶರಣ ಸಮಾಜವನ್ನು ರಚಿಸಿದನು'' ಎಂದು 'ವಚನ ಧರ್ಮ ಸಾರ' ಕೃತಿ ರಚಿಸಿದ ಎಂ. ಆರ್. ಶ್ರೀನಿವಾಸಮೂರ್ತಿಯವರು ಹೇಳಿದ್ದನ್ನು ನೆನೆಯಬಹುದು.

''ಶ್ರೀಮಂತರು, ಹಿತಾಸಕ್ತಿಯುಳ್ಳವರು, ಉತ್ತಮವಾದಿಗಳು, ಅಕ್ಷರಸ್ಥ ಪಂಡಿತರು, ಬಡವರನ್ನೂ, ಶೂದ್ರರನ್ನೂ, ನಿರಕ್ಷರಿಗಳನ್ನೂ ತಮ್ಮ ಹತೋಟಿಯಲ್ಲಿರಿಸಿಕೊಂಡು ಸುಖೀ ಜೀವನ ನಡೆಸುವುದಕ್ಕೆ ದೇವಾಲಯಗಳನ್ನೂ, ವಿಗ್ರಹ ಸ್ಥಾಪನೆಗಳನ್ನೂ, ಅವುಗಳ ಆರಾಧನೆಯನ್ನೂ ನಡೆಸಿಕೊಂಡು ಬಂದಿದ್ದರೆನ್ನುವುದನ್ನು ಮನಗಂಡಿದ್ದ ಬಸವಣ್ಣ ಅವುಗಳ ವಿರುದ್ಧ ಸುವ್ಯವಸ್ಥಿತವಾದ ಬಂಡಾಯವನ್ನು ಬಂದೂಕಿನ ಸುತ್ತಲ್ಲದೆ ಯಶಸ್ವಿಯಾಗಿ ನಡೆಸಿಕೊಂಡು ಹೋಗುವುದಕ್ಕೆ ಇಷ್ಟಲಿಂಗದ ಕಲ್ಪನೆಯನ್ನು ಹಾಕಿದನು. ಇಷ್ಟ ಲಿಂಗದಲ್ಲಿ ನಂಬುಗೆಯುಳ್ಳವರನ್ನೆಲ್ಲ ಅವನು ಲಿಂಗಾಯತರೆಂದು ಕರೆದನು'' – ಎಂದು ಮಾನವ ಸಮಾಜ ವಿಜ್ಞಾನ ಶಾಸ್ತ್ರಜ್ಞ, ಅಂತರರಾಷ್ಟ್ರೀಯ ಪ್ರಾಧ್ಯಾಪಕ ಡಾ|| ಹಿರೇಮಲ್ಲೂರ್ ಈಶ್ವರನ್ (ಬಸವ ಹಾಗೂ ಲಿಂಗಾಯತ ಧರ್ಮ ಕೃತಿಯ ೮೮ನೇ ಪುಟದ ಮೊದಲ ಪ್ಯಾರಾದಲ್ಲಿ) ಅಭಿಪ್ರಾಯಪಟ್ಟಿದ್ದಾರೆ.

ಇದೆಲ್ಲ ಅಂಗೈನಲ್ಲಿಯಂತೆ, ಸ್ಫಟಿಕದ ಶಲಾಕೆಯಂತೆ, ನುಡಿದರೆ ಲಿಂಗಮೆಚ್ಚಿ ಅಹುದಹುದೆನುವಂತೆ ಇದೆ. ಆದರೆ ಇದೆಲ್ಲ ಗೊತ್ತಿದ್ದೂ, ಏನೂ ಗೊತ್ತಿಲ್ಲದವರಂತೆ ಮತ್ತೆ ಮತ್ತೆ ಕೆದರಿ ಕೇರು ಹಾಕಿಸಿಕೊಳ್ಳುವ ಎತ್ತುಗಡೆಯನ್ನು ಅಯ್ಯನೋರು ಮಾಡುತ್ತಲೇ ಬಂದಿದ್ದಾರೆ. ಬಸವಣ್ಣ ನಮ್ಮ ಭಕ್ತ. ಆತನ ಗುರುಗಳು ನಾವು. ಹಾಗಾಗಿ ಬಸವಣ್ಣನ ಅನುಯಾಯಿಗಳಿಗೆಲ್ಲ ನಾವೇ ಗುರುಗಳು-ಜಗದ್ಗುರುಗಳು ಎಂದು ಹೇಳಿಕೊಳ್ಳುತ್ತಾ ಮಠ-ಪೀಠಗಳಿಗೆ ಅಮರಿಕೊಂಡಿದ್ದಾರೆ. ಇವರೆಲ್ಲ ಲಿಂಗಾಯತ ಧರ್ಮಬಾಹಿರವಾದ ಯಜ್ಞ-ಯಾಗಾದಿಗಳನ್ನು ಕೋಟ್ಯಂತರ ಹಣ ಖರ್ಚು ಮಾಡಿ ನಡೆಸುತ್ತಿದ್ದಾರೆ. ತಮ್ಮ ತಮ್ಮ ಮಠಗಳಲ್ಲಿ ತಮ್ಮ ಗುರುಗಳ ಗದ್ದುಗೆ ಕಟ್ಟಿಸಿ ದಿನ ನಿತ್ಯ ರುದ್ರಾಭಿಷೇಕ ಮಾಡಿಸುತ್ತಿದ್ದಾರೆ. ನೈವೇದ್ಯ ಅರ್ಪಣೆ ಮಾಡುತ್ತಾರೆ. ಲಿಂಗಪ್ರತಿಷ್ಠೆಯ ಮಾಡಿದವಂಗೆ ನಾಯಕ ನರಕ ಎಂದು ಹೇಳಿದ್ದರೂ ದಿನ ನಿತ್ಯ ಒಂದಲ್ಲ ಒಂದು ಕಡೆ ಲಿಂಗ ಪ್ರತಿಷ್ಠಾಪನೆಯನ್ನು ಭರಾಟೆಯಿಂದ ನಡೆಸಿದ್ದಾರೆ. ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ ಎಂದು ಶರಣರು ಸಾರಿ ಹೇಳಿದ್ದರೂ ಮಠಾಧೀಶರು ತಮ್ಮ ಗುರುಗಳ ಮೂರ್ತಿಗಳನ್ನು ಬೆಳ್ಳಿಯಿಂದ, ಬಂಗಾರದಿಂದ, ಕಂಚಿನಿಂದ, ಕೊನೆಗೆ ಬಹು ದುಬಾರಿ ಬೆಲೆಯ ಕಲ್ಲಿನಿಂದ ಕೆತ್ತಿಸಿ ಸ್ಥಾವರ ಪೂಜಕರಾಗಿದ್ದಾರೆ.

*ಬಂಡಿ ತುಂಬಿ ಪತ್ರೆಯ ತಂದು*
*ಕಂಡ ಕಂಡಲ್ಲಿ ಮಜ್ಜನಕ್ಕೆರೆವಿರಿ.*
*ತಾಪತ್ರಯವ ಕಳೆದು ಪೂಜಿಸಿ*
*ತಾಪತ್ರಯವ ಲಿಂಗನೊಲ್ಲ*
*ಕೂಡಲ ಸಂಗಮದೇವ ಬರಿಯುದಕದಲ್ಲಿ ನೆನೆವನೆ ?* (ಬಸ. ವ. ೧೮೪)

ಎಂದು ಬಸವಣ್ಣನವರು ಹೇಳಿದ ಮಾತುಗಳನ್ನು ಮರೆತು ತಮ್ಮ ಪೀಠಗಳಲ್ಲಿ ಸ್ಥಾಪಿಸಿದ ಮೂರ್ತಿಗಳಿಗೆ ದಿನ ನಿತ್ಯ ಪಂಚಗವ್ಯಗಳಿಂದ ಸ್ನಾನ ಮಾಡಿಸಿ ಮಣ ಮಣ ಮಂತ್ರ ಹೇಳುತ್ತಿದ್ದಾರೆ. ಆ ಮೂರ್ತಿ ತೊಳೆದ ಗಂಜಲವನ್ನೇ ತೀರ್ಥವೆಂದು ಧಾರಾಳವಾಗಿ ಕೊಡುತ್ತಾರೆ. ಅಮಾವಾಸ್ಯೆ, ಹುಣ್ಣಿಮೆ, ತಿಥಿ ಮತಿ ಎಂದು, ರಾಹುಕಾಲ ಗುಳಿಕ ಕಾಲ ಮುಂತಾಗಿ ಹೇಳುತ್ತಿದ್ದಾರೆ.

ಹೀಗೆ ಲಿಂಗಾಯತ ಧರ್ಮಕ್ಕೆ ತೀರಾ ತದ್ವಿರುದ್ಧವಾಗಿ ಬದುಕುತ್ತಿರುವ

# ವೀರಪ್ಪನ್ : ಮುಂದಾನೊಂದು ಕಾಲದಲ್ಲಿ



**೨೦೦೫ : ವೀರಪ್ಪನ್ ಹಿಡಿಯುವ ಖಾತೆಗೆ ಸಂಪುಟ ದರ್ಜೆ ಸಚಿವರು.**

ಹಿಂದಿನ ಸರ್ಕಾರಗಳೆಲ್ಲ ವೀರಪ್ಪನ್ ಹಿಡಿಯಲು ವಿಫಲವಾಗಿರುವುದರಿಂದ, ತಮ್ಮ ಸರ್ಕಾರ ವೀರಪ್ಪನ್ ಹಿಡಿಯಲು ಸಂಪುಟದರ್ಜೆ ಸಚಿವರನ್ನು ನೇಮಕ ಮಾಡಿರುವುದಾಗಿ ನೂತನ ಮುಖ್ಯ ಮಂತ್ರಿ ತಿಳಿಸಿದ್ದಾರೆ.

**೨೦೦೬ : ನಿಗಮ ಮಂಡಳಿಗಳಿಗೆ ನೇಮಕ**

ವೀರಪ್ಪನ್ ಹಾವಳಿಯಿಂದ ತೊಂದರೆಗೊಳಗಾದ ಜನರ ಹಿತರಕ್ಷಣೆಗೆ ಪ್ರತ್ಯೇಕ ಮಂಡಳಿ ರಚಿಸಲಾಗುವುದು. ಹಾಗೂ ಎಸ್.ಟಿ.ಎಫ್.ನಿಂದ ದೌರ್ಜನ್ಯಕ್ಕೊಳಗಾದ ಜನರ ಕಲ್ಯಾಣಕ್ಕಾಗಿ ನಿಗಮವನ್ನು ಸಹ ಸ್ಥಾಪಿಸಲಾಗಿದೆ. ಈ ನಿಗಮ ಮಂಡಳಿಗಳಿಗೆ ಮಂತ್ರಿಮಂಡಳದಲ್ಲಿ ಸ್ಥಾನ ಸಿಗದ ಶಾಸಕರನ್ನು ಶೀಘ್ರದಲ್ಲೇ ನೇಮಕ ಮಾಡಲಾಗುವುದೆಂದು ಬಲ್ಲ ಮೂಲಗಳು ತಿಳಿಸಿವೆ.

**೨೦೦೭ : ವಿದೇಶ ಪ್ರವಾಸ**

ವೀರಪ್ಪನ್ ಹಿಡಿಯುವ ಖಾತೆಯ ಸಂಪುಟ ದರ್ಜೆ ಸಚಿವರು, ನಿಗಮ ಮಂಡಳಿಗಳ ಅಧ್ಯಕ್ಷರು ಹಾಗೂ ಇನ್ನೂ ಅನೇಕ ಶಾಸಕರ ತಂಡವೊಂದು ಮುಂದಿನ ವಾರ ವಿದೇಶಕ್ಕೆ ತೆರಳಲಿದೆ. ಇಂಗ್ಲೆಂಡ್, ಫ್ರಾನ್ಸ್, ಅಮೇರಿಕಾ ಮುಂತಾದ ದೇಶಗಳಲ್ಲಿ ಪ್ರವಾಸ ಮಾಡಲಿರುವ ಈ ತಂಡ ವೀರಪ್ಪನ್ ಹಿಡಿಯುವ ವಿಚಾರದಲ್ಲಿ ಅಧ್ಯಯನ ಕೈಗೊಳ್ಳಲಿದೆ ಎಂದು ಅಧಿಕೃತ ವಕ್ತಾರರು ತಿಳಿಸಿದ್ದಾರೆ.

**೨೦೦೮ : ವಿರೋಧ ಪಕ್ಷಗಳ ಪ್ರದರ್ಶನ**

ಇತ್ತೀಚೆಗೆ ನಾಲ್ಕೈದು ವರ್ಷಗಳಿಂದ ವೀರಪ್ಪನ್ ಯಾರನ್ನೂ ಅಪಹರಿಸದೆ ನಿಷ್ಕ್ರಿಯನಾಗಿದ್ದಾನೆ. ಸರ್ಕಾರ ವೀರಪ್ಪನ್ ಹಿಡಿಯಲು ಪ್ರತ್ಯೇಕ ಮಂತ್ರಿಯನ್ನು ಹೊಂದಿದ್ದರೂ ನಿರ್ಲಕ್ಷ್ಯಧೋರಣೆ ತಾಳಿದೆ. ಇದರ ವಿರುದ್ಧ ವಿರೋಧ ಪಕ್ಷಗಳು ತೀವ್ರ ಟೀಕೆ ಮಾಡಿವೆ.

**೨೦೦೯ : ಖಾಸಗೀಕರಣ ಪರಿಶೀಲನೆಯಲ್ಲಿ**

ವೀರಪ್ಪನ್ ಹಿಡಿಯುವ ಕಾರ್ಯವನ್ನು ಖಾಸಗಿಯವರಿಗೆ ಒಪ್ಪಿಸಲು ಸರ್ಕಾರ ಯೋಚಿಸುತ್ತಿದೆ ಎಂದು 'ಸರ್ಕಾರ ಮಾರುವ ಖಾತೆ' ಮಂತ್ರಿ ತಿಳಿಸಿದ್ದಾರೆ. ವೀರಪ್ಪನ್ ಹಿಡಿಯಲು ಸರ್ಕಾರ ವಿಫಲವಾಗಿರುವುದರಿಂದ ಹೀಗೆ ಮಾಡುತ್ತಿದೆಯೇ ಎಂಬ ಟೀಕೆಗೆ ಕೆರಳಿದ ಸಚಿವರು 'ಎಲ್ಲ ಕೆಲಸವನ್ನು ಸರ್ಕಾರವೇ ಮಾಡುತ್ತಾ ಕುಳಿತಿರಲು ಸಾಧ್ಯವಿಲ್ಲ. ಖಾಸಗೀಕರಣ ರಾಜ್ಯ ಹಾಗೂ ಕೇಂದ್ರ ಸರ್ಕಾರದ ಹಾಗೂ ಜಾಗತಿಕ ನೀತಿಯಾಗಿದೆ' ಎಂದರು.

**೨೦೧೦ : ಸಿಬ್ಬಂದಿ ಧರಣಿ**

ವೀರಪ್ಪನ್ ಹಿಡಿಯುವ ಕೆಲಸವನ್ನು ಖಾಸಗಿಯವರಿಗೆ ವಹಿಸಲು ಸರ್ಕಾರ ಕ್ರಮ ಕೈಗೊಳ್ಳುತ್ತಿರುವುದನ್ನು ವಿರೋಧಿಸಿ ಎಸ್. ಟಿ. ಎಫ್. ಸಿಬ್ಬಂದಿ ಇಂದಿನಿಂದ ಅನಿರ್ದಿಷ್ಟ ಧರಣಿ ಆರಂಭಿಸಿದೆ. ಅನೇಕಾನೇಕ ವರ್ಷಗಳಿಂದ ಸಾವಿರಾರು ಜನರಿಗೆ ಉದ್ಯೋಗ ನೀಡುತ್ತಿರುವ ಈ ಉದ್ಯಮವನ್ನು ಖಾಸಗಿಯವರಿಗೆ ವಹಿಸಬಾರದೆಂದು ಧರಣಿಯ ನಾಯಕರು ತಿಳಿಸಿದ್ದಾರೆ.

**೨೦೧೧ : ವಿದೇಶೀ ಬಂಡವಾಳ** : ವೀರಪ್ಪನ್ ಹಿಡಿಯುವ ಉದ್ಯಮದಲ್ಲಿ ಬಂಡವಾಳ ತೊಡಗಿಸಲು ಅನೇಕ ಬಹುರಾಷ್ಟ್ರೀಯ ಕಂಪನಿಗಳು ಆಸಕ್ತಿ ತೋರಿಸುತ್ತಿವೆ. ಲಕ್ಷಾಂತರ ಡಾಲರ್ ವಿದೇಶೀ ಬಂಡವಾಳ ಹರಿದು ಬರುವ ನಿರೀಕ್ಷೆ ಇದೆಯೆಂದು ಮುಖ್ಯಮಂತ್ರಿಗಳು ತಿಳಿಸಿದ್ದಾರೆ.

**೨೦೧೨ : ವಿಶ್ವಬ್ಯಾಂಕ್ ಸಾಲ**

ವೀರಪ್ಪನ್ ಹಿಡಿದರೆ ನೂರು ಕೋಟಿ ಬಹುಮಾನವನ್ನು ಸರ್ಕಾರ ಘೋಷಿಸಿದೆ. ಇದಕ್ಕಾಗಿ ಸಾಲ ಕೊಡಲು ವಿಶ್ವಬ್ಯಾಂಕ್ ಮುಂದಾಗಿದೆ ಎಂದು ಸಾಲದ ಖಾತೆ ಮಂತ್ರಿ ತಿಳಿಸಿದ್ದಾರೆ.

ವಿ. ಶ್ರೀನಿವಾಸ
'ಆಹ್ಲಾದ', ನಂ೧೨, ೧ನೇ ತಿರುವು, ೧ನೇ ಹಂತ, ದೂರವಾಣಿ ಬಡಾವಣೆ, ಶಿವಮೊಗ್ಗ - ೫೭೭ ೨೦೪.

ಪಂಚಾಚಾರ್ಯರು ಲಿಂಗಾಯತರ ಮೂಲ ಪುರುಷರು ಅಥವಾ ವಾರಸುದಾರರು ಹೇಗಾಗುತ್ತಾರೆ? ಬಸವಣ್ಣನವರು ಕಟ್ಟಿದ ಲಿಂಗಾಯತ ಧರ್ಮ ಅದು ಮಾದಾರ ಚೆನ್ನಯ್ಯನ ಧರ್ಮ, ಡೋಹಾರ ಕಕ್ಕಯ್ಯನ ಧರ್ಮ, ಮಡಿವಾಳ ಮಾಚಯ್ಯನ ಧರ್ಮ, ನೂಲಿಯ ಚಂದಯ್ಯನ ಧರ್ಮ, ಮೇದಾರ ಕೇತಯ್ಯನ ಧರ್ಮ, ಸತ್ಯಕ್ಕನ ಧರ್ಮ, ಸೂಳೆ ಸಂಕವ್ವೆಯ ಧರ್ಮ, ಮಾಧಾರ ಧೂಳಯ್ಯನ ಧರ್ಮ, ಹೊಲೆಯರನಾಗಿದೇವನ ಧರ್ಮ, ಅಲ್ಲಮಪ್ರಭುವಿನ ಧರ್ಮ, ಶೋಷಿತರ ಪರವಾಗಿರುವ ಧರ್ಮ, ವಿಚಾರವಾದಿಗಳ ಧರ್ಮ, ಸಮಾಜದ ಹಲವಾರು ಕಂದಾಚಾರಗಳ ವಿರುದ್ಧ ಸಿಡಿದು ನಿಂತ ಬಂಡಾಯವಾದಿಗಳ ಧರ್ಮ. ಇಲ್ಲಿ ಯಾರೂ ಗುರುವಲ್ಲ, ಲಿಂಗವಲ್ಲ, ಜಂಗಮವಲ್ಲ, ಎಲ್ಲರೂ ಪರಸ್ಪರ ಸಮಾನರು ಅಷ್ಟೇ. ಇದರ ನಿಜವಾದ ವಾರಸುದಾರರು ದಲಿತರೇ ವಿನಃ ಮತ್ತಾರೂ ಅಲ್ಲ. ಬಸವಣ್ಣನವರಿಗಿಂತಲೂ ಪೂರ್ವದಲ್ಲೇ ಇದ್ದ ಈ ಶೈವ ಪರಂಪರೆಯ ಪಂಚಾಚಾರ್ಯರು ಬಸವಣ್ಣ ಕಟ್ಟಿದ ಲಿಂಗಾಯತ ಧರ್ಮಕ್ಕೆ ಬಂದು ಅಮರಿಕೊಂಡಿರುವ ಟೆನೆಂಟುದಾರರು ಮಾತ್ರ.




ಪಂಚಾಚಾರ್ಯರ ನೀತಿ-ನಡವಳಿಕೆಗಳೇ ತೋರಿಸಿ ಕೊಡುವಂತೆ ಇವರೆಲ್ಲ ಸ್ಥಾವರ ಲಿಂಗದ ಆರಾಧಕರು. ಶೈವರು. ಇವರಿಗೂ ಲಿಂಗಾಯತರಿಗೂ ಯಾವುದೇ ಬಾದರಾಯಣ ಸಂಬಂಧವಿಲ್ಲ. ಇವರು ಇಷ್ಟಲಿಂಗವನ್ನು ಕಟ್ಟಿಕೊಂಡು ಬೆಟ್ಟದ ಲಿಂಗಕ್ಕೆ ಹೋಗುವ ಲೊಟ್ಟೆ ಮೂಳರು, ಅಷ್ಟೇ. ಕೂಡಲ ಸಂಗಮದೇವರ ದೇವಸ್ಥಾನದ ಗುರುಗಳಾದ ಜಾತವೇದ ಮುನಿಗಳು ಬಸವಣ್ಣನವರಿಗೆ ಲಿಂಗಧಾರಣೆ ಮಾಡಿದರು ಎಂದು ಮುಂಗಾಲುಪುಟಿಗೆ ಹೊಡೆಯುವ ಈ ಜನ ಬೇಕೆಂತಲೇ ಒಂದು ಸತ್ಯವನ್ನು ಮರೆಮಾಚುತ್ತಾರೆ. ಒಂದು ವೇಳೆ ಲಿಂಗವನ್ನು ಬಸವಣ್ಣನವರಿಗೆ ಜಾತವೇದ ಮುನಿಗಳೇ ಕರುಣಿಸಿದ್ದರೆ ಬಸವಣ್ಣನವರು ಅದನ್ನು ತಮ್ಮ ಅನೇಕ ವಚನಗಳಲ್ಲಿ ಹಾಡಿ ಹೊಗಳದೇ ಇರುತ್ತಿರಲಿಲ್ಲ. ಆದರೆ ಎಲ್ಲೂ ಬಸವಣ್ಣ ಜಾತವೇದ ಮುನಿಗಳ ಕುರಿತು ಹೇಳಿಕೊಂಡಿಲ್ಲ. ಬಸವಣ್ಣನವರಿಗೆ ಅವರ ಅರಿವೇ ಅವರಿಗೆ ಗುರುವಾಗಿದೆಯೇ ಹೊರತು ಮತ್ತಾರೂ ಅಲ್ಲ.

ಈ ಶೈವ ಬ್ರಾಹ್ಮಣರು ಬಸವಣ್ಣನವರ ಪೂರ್ವದಲ್ಲಿಯೂ ಇದ್ದರು. ಇವರೆಲ್ಲ ಸಹಜವಾಗಿಯೇ ಸ್ಥಾವರಲಿಂಗದ ಆರಾಧಕರು. ಅಂದರೆ ಇವರೆಲ್ಲ ಶೋಷಕ ವರ್ಗದವರು. ಬಸವಣ್ಣ ಇವರ ಸುಳ್ಳು-ಸೊಟ್ಟುಗಳನ್ನು, ಬುವ್ವಾ-ಬಾಜಿಗಳನ್ನು ಗಮನಿಸಿ ಇವರ ಬುಡಕ್ಕೇ ಕೊಡಲಿಪೆಟ್ಟು ಕೊಟ್ಟರು. ಆಗ ಇವರ ಒಂದೊಂದೆ ಕೀಲುಗಳು ಸಡಿಲಗೊಂಡವು. ಆಗ ಕೆಲ ಕಾಲ ಇವರೆಲ್ಲ ಕಂಗಾಲಾದರು. ತಮ್ಮ ಅಸ್ತಿತ್ವಕ್ಕಾಗಿ ತಡಬಡಿಸತೊಡಗಿದರು. ಬಸವ ಪ್ರವಾಹದ ವಿರುದ್ಧ ಈಜುವ ಕಸುವು ತಮ್ಮಲ್ಲಿ ಇಲ್ಲ ಎಂಬುದನ್ನು ಮನಗಂಡ ಇವರುಗಳು ಆ ಪ್ರವಾಹಕ್ಕೆ ವಿರುದ್ಧವಾಗಿ ಹೋಗಿ ಹೈರಾಣಾಗುವ ಬದಲು, ಅದರೊಂದಿಗೇ ತಮ್ಮನ್ನು ಗುರುತಿಸಿಕೊಂಡರು. ಆಗಲೇ ಇವರೆಲ್ಲ ಲಿಂಗಾಯತರಾದರು.

ಯಾವಾಗ ಮಧುವರಸ ಮತ್ತು ಹರಳಯ್ಯಗಳ ಮಕ್ಕಳ ಮದುವೆ ಜರುಗಿತೋ ಅಂದೇ ಸಮಾಜದಲ್ಲಿ ಗೊಂದಲ ಉಂಟಾಯಿತು. ಬ್ರಾಹ್ಮಣರು ವರ್ಣಸಂಕರವಾಯಿತೆಂದು ಒಂದೇ ಸಮ ಬೊಬ್ಬೆ ಹೊಡೆದರು. ಅಂದಂತೆ ಇದಕ್ಕೆ ರಾಜ ಶಾಹಿಯೂ ಸ್ಪಂದಿಸಿತು. ಮಧುವರಸ ಮತ್ತು ಹರಳಯ್ಯನವರನ್ನು ಶಿಕ್ಷೆಗೆ ಒಳಪಡಿಸಿತು. ಆಗ ಸಮಾಜದಲ್ಲಿ ಹಿಂಸೆ ತನ್ನ ಕೆನ್ನಾಲಿಗೆ ಚಾಚಿ ಮುನ್ನಡೆದುಬಿಟ್ಟಿತು. ಶಾಂತಿಪ್ರಿಯರಾದ ಬಸವಾದಿ ಶರಣರು ಆ ಸಂದರ್ಭದಲ್ಲಿ ಅಲ್ಲಿಂದ ಕಾಲ್ತೆಗೆಯುವುದೇ ನಿಜವಾದ ಶರಣತನ ಎಂದು ಅರಿತುಕೊಂಡರು. ಅದರಂತೆ ಅವರೆಲ್ಲ ಮಹಾಮನೆಯಲ್ಲಿ ಸೇರಿದರು.

ಅವಧಿ ಅಳಿಯಿತ್ತು ವ್ಯವಧಾನ ಉಳಿಯಿತ್ತು.
ನಿಜವೆ ನಿಜವನೊಡಗೂಡಿತ್ತು, ಕೇಳಾ ಬಸವಣ್ಣಾ!
ಕಲಿಯುಗದಲ್ಲಿ ಮುಂದೆ ಇರಬಾರದು ನಿಜ ಶರಣರಿಗೆ
ನಡೆ ನೀನು ಕಪ್ಪಡಿಯ ಸಂಗಯ್ಯನಲ್ಲಿ ಒಡಗೂಡು.
ಉಳುಮೆಯಲ್ಲಿ ನಿಜವನೆಯ್ದು ನಡೆ ಚೆನ್ನಬಸವಣ್ಣ.
ಮಹವನೊಡಗೂಡು ಮಡಿವಾಳಯ್ಯ.
ಸೊಡ್ಡಳ ಬಾಚರಸರು ಮೊದಲಾದ ಪ್ರಥಮರೆಲ್ಲರೂ
ನಿಜವನೆಯ್ದುವುದು ನಿರ್ವಯಾ ಸಮಾಧಿಯಲ್ಲಿ.
ಬಗಿದು ಹೋಗಿ ಲಿಂಗದೊಳಗೆ ಹೋಗುವರೆಲ್ಲರೂ!
ನಡೆಯಿರಿ ಕಾಯವೆರಸಿ ಕೈಲಾಸಕ್ಕೆ,
ಕಾಯಸಹಿತ ಎಯ್ದುವುದು!
ನಿಮಗೆಲ್ಲರಿಗೆಯೂ ಉಪದೇಶ ಮಂತ್ರ ತಪ್ಪದು.
ನಮಗೆ ಕದಳಿಯಲ್ಲಿ ಹೊಕ್ಕು
ನಿಜದಲ್ಲಿ ಒಡಗೂಡುವ ಪರಿಣಾಮ.
ಇದು ನಮ್ಮ ಗುಹೇಶ್ವರ ಲಿಂಗದ ಆಣತಿ
ನಿಮಗೆಲ್ಲರಿಗೆಯೂ....

ಎಂದು ಹೇಳಿದ ಅಲ್ಲಮಪ್ರಭುವಿನ ಆಣತಿಯನ್ನು ಎಲ್ಲ ಶರಣರು ಒಪ್ಪಿಕೊಂಡರು. ತಮಗೆ ತಾವೇ ಆ ಕಲ್ಯಾಣವನ್ನು ಬಿಟ್ಟು ಹೊರನಡೆದರು. ಆಗ ಸಹಜವಾಗಿಯೇ ಕಲ್ಯಾಣದಲ್ಲಿ ವಚನ ರಚನೆ ನಿಂತುಹೋಯಿತು. ಹಾಗೂ ಅವುಗಳು ಹೊಂದಿದ್ದ ಆಶಯಗಳು ತಟಸ್ಥವಾದವು. ಗ್ರಂಥಸ್ಥವಾದವು. ಆಗ ಬಸವಾದಿ ಶರಣರ ವಿಚಾರಗಳಿಗೆ ಸಮಾಜದಲ್ಲಿ ಪುರಸ್ಕರಿಸುವವರು ಕಮ್ಮಿ ಆದರು. ಈ ಸಂದರ್ಭಕ್ಕಾಗಿಯೇ ಕಾಯುತ್ತಿದ್ದ ಶೈವ ಸಂಪ್ರದಾಯದ ಬೇರುಗಳು ಚಿಗಿತವು. ಸ್ಥಾವರ ಪೀಠಸ್ಥರು ಮತ್ತೆ ಸಮಾಜದ ಮೇಲೆ ಹಿಡಿತ ಸಾಧಿಸಿದರು. ಆದರೂ ಕಲ್ಯಾಣದಲ್ಲಿ ಕೆಲವು ಜನ ಲಿಂಗಾಯತರು ಉಳಿದಿರಬಹುದು. ಅವರೆಲ್ಲ ವಚನಕಾರರು ಬೋಧಿಸಿದ ತತ್ವಗಳನ್ನು, ಆಚಾರ-ವಿಚಾರಗಳನ್ನು ದೇವರ ಜಗಲಿಗಳ ಮೇಲೆ ಇಟ್ಟರೆ ಹೊರತು ಅವನ್ನು ಅಪ್ಪಿ ತಪ್ಪಿಯೂ ಆಚರಣೆಗೆ ತರಲಿಲ್ಲ. ಕಾಲಕ್ರಮೇಣ ಇವರೆಲ್ಲ ಶೈವ ಸಂಪ್ರದಾಯವನ್ನು ಅನುಸರಿಸತೊಡಗಿದರು. ಹಾಗಾಗಿ ಇಂದಿಗೂ ಲಿಂಗಾಯತರೆನ್ನುವವರಲ್ಲಿ ಶೈವ ಆಚರಣೆಗಳೇ ಯಥೇಚ್ಛವಾಗಿ ತುಂಬಿ ತುಳುಕಾಡುತ್ತಿವೆ. ಕೊರಳಲ್ಲಿ ಇಷ್ಟ ಲಿಂಗವನ್ನು ಧರಿಸಿದ್ದರೂ, ಗುಡಿ-ಗುಂಡಾರಗಳ ಸ್ಥಾವರ ಲಿಂಗವನ್ನು ಪೂಜಿಸುತ್ತಾರೆ. ಇಲ್ಲಿಯೂ ಜಾತಿ ಪದ್ಧತಿಗಳಿವೆ. ವರ್ಗ ಪ್ರಭೇದ, ವರ್ಣ ಪ್ರಭೇದಗಳು ಇವೆ. ಮೂಢನಂಬಿಕೆಗಳಿವೆ. ಕಂದಾಚಾರಗಳಿವೆ. ಆರೋಗ್ಯಕರ ಮನಸ್ಸಿನಿಂದ ನೋಡುವ ಎಲ್ಲರಿಗೂ ನನ್ನ ಈ ಮಾತುಗಳು ಅರ್ಥವಾಗುತ್ತವೆಯೆಂದೇ ನಾನಿಲ್ಲಿ ವಿನಮ್ರನಾಗಿ ಹೇಳಬಯಸುತ್ತೇನೆ.

೩೩ನೆಯ ಶತಮಾನಗಳ ಆಚೆಗೆ ಆಗಿಹೋದ ಶಿವಾಚಾರ್ಯರೆಂಬುವರು ''ಸಿದ್ಧಾಂತ ಶಿಖಾಮಣಿ'' ಎಂಬ ಗ್ರಂಥವನ್ನು ೮ನೇ ಶತಮಾನದಲ್ಲಿಯೇ ರಚಿಸಿದ್ದಾರೆ ಎಂದು ಹೇಳುತ್ತಾರೆ. ಆದರೆ ಇದರಲ್ಲಿ ಬಳಸಿದ ಸಂಸ್ಕೃತ ಭಾಷೆ ನೋಡಿ ಧಾರ್ಮಿಕ ಭಾಷಾ ವಿಜ್ಞಾನಿಗಳು ಇದು ''೧೪ನೇ ಶತಮಾನದಲ್ಲಿ ರಚಿತವಾದ ಗ್ರಂಥ'' ಎಂದು ತಿಳಿಸಿದ್ದಾರೆ. ಇನ್ನು ಈ ಗ್ರಂಥದಲ್ಲಿ ಉಲ್ಲೇಖಗೊಂಡಿರುವ ಸಂಗತಿಗಳು ಒಂದಕ್ಕೊಂದು ಸಂಬಂಧವೇ ಇಲ್ಲದಂಥವು. ಇಂಥ ಖೊಟ್ಟಿ ಪುಸ್ತಕವೇ ಪಂಚಾಚಾರ್ಯರಿಗೆ ಆಧಾರ.

ಒತ್ತಿದರೆ ಸರಿಯಣ್ಣ, ಸರಿದರೆ ಒತ್ತಣ್ಣ ಎಂಬ ಜಾತಿಗೆ ಸೇರಿದ ಪಂಚಾಚಾರ್ಯರು ಸಮಯ ಸಿಕ್ಕಾಗಲೆಲ್ಲ ವಚನ ಸಾಹಿತ್ಯ ಮತ್ತು ಶರಣರ ವ್ಯಕ್ತಿತ್ವದ ಮೇಲೆ ಕಸ ಹಾಕಲು ಹಾತೊರೆದಿದ್ದಾರೆ. ೧೯೫೬ರಲ್ಲಿ 'ಮಣಿಮಕರಂ' ಎಂಬ ಪುಸ್ತಕವನ್ನು ಬರೆದ ಅಂದಿನ ರೇಣುಕಾಚಾರ್ಯ ಪೀಠದ ಸೂರ್ಯಸಿಂಹಾಸನಾಧಿಪತಿಯಾದ ಜಗದ್ಗುರುಗಳು ಶರಣರ ಬಗೆಗಿನ ತಮ್ಮ ಸಿಟ್ಟನ್ನು ಹೀಗೆ ಕಾರಿಕೊಂಡಿದ್ದಾರೆ: ''ಬಸವಣ್ಣನ ಧರ್ಮ, ಬಸವಣ್ಣನ ಸಾಹಿತ್ಯ, ಬಸವಣ್ಣನ ಭಾವನೆ ಮತ್ತು ಶರಣರ ವಚನಗಳು, ತಮ್ಮ ಪಂಚಾಚಾರ್ಯರ ಧರ್ಮವೆಂಬ ಬೆಳೆಯಲ್ಲಿ, ಕಸ ಹುಟ್ಟುವಂತೆ ಹುಟ್ಟಿ ಬಂದಿವೆ. ಇವು ಪಂಚಾಚಾರ್ಯರ ನೈಜ ಪ್ರಚಾರಕ್ಕೆ ಬೆಟ್ಟದಂತೆ ಅಡ್ಡ ಬಂದಿವೆ. ಆದಾಗ್ಯೂ ಕಸದಂತಿರುವ ಈ ಶರಣರ ವಚನ ಸಾಹಿತ್ಯ ಕಿತ್ತೊಗೆದು ಮುನ್ನುಗ್ಗಬಹುದೆಂಬ ಆಶೆ ನಮಗಿದೆ'' ಎಂದಿದ್ದಾರೆ.

ಹೌದು, ಈ ಪುಣ್ಯಾತ್ಮ ಜಗದ್ಗುರುವೆ ಅಭಿಪ್ರಾಯಪಡುವಂತೆ ಇವರುಗಳು ಸಾರುವ ಕಂದಾಚಾರದ, ಮೂಢ ಆಚರಣೆಗಳ ಗೊಡ್ಡು ಧರ್ಮಕ್ಕೆ ಶರಣ ಧರ್ಮ ತೊಡಕಾಲು ಒಡ್ಡಿದೆ. ಅಷ್ಟೇ ಅಲ್ಲ, ಇವರ ಅಸಲಿ ಹೂರಣವನ್ನೇ ಬಯಲಿಗೆ ಇಟ್ಟಿದೆ. ಇದು ಯಾರಾದರೂ ಒಪ್ಪುವ ಮಾತೆ! ಇನ್ನು ಬಸವಾದಿ ಶರಣರು ರಚಿಸಿದ ವಚನಸಾಹಿತ್ಯ ಕಸವೋ, ಪಂಚಾಚಾರ್ಯರ ಗೊಡ್ಡು ತತ್ವಗಳು ಕಸವೋ ಅದನ್ನು ಜನಗಳೇ ತೀರ್ಮಾನಿಸಲಿ. ಕಸವಿದ್ದ ಸಾಹಿತ್ಯ ಈಗ ಹಾರಿಹೋಗಿದೆ. ಕಸುವಿದ್ದ ಸಾಹಿತ್ಯ ಈಗ ಉಳಿದಿದೆಯಲ್ಲ! ಇದಕ್ಕೆ ಆ ಪುಣ್ಯಾತ್ಮ ಜಗದ್ಗುರುಗಳ ಆತ್ಮ ಏನು ಹೇಳುತ್ತದೋ?

ಮಾನವ ಧರ್ಮಕ್ಕೆ ಜಯವಾಗಲಿ ಎಂದು ಒಂದೇ ಸಮ ಬೊಬ್ಬೆ ಹೊಡೆಯುವ ಶೈವ

ಜಗದ್ಗುರುಗಳೇ ಅಮಾಯಕ ಭಕ್ತರ ಹೆಗಲ ಮೇಲೇರಿ ಕುಳಿತು ಮೆರವಣಿಗೆ ಹೋಗುತ್ತಾರೆ. ಒಬ್ಬ ವ್ಯಕ್ತಿಯ ಮೇಲೆ ವಿನಾಕಾರಣ ಹೊರಿಸಿಕೊಂಡು ಹೋಗುವ ಇವರಿಂದ ಎಂಥ ಮಾನವರಿಗೆ ಜಯವಾಗುತ್ತದೆ? ಬಂಗಾರದ ಕಿರೀಟ ಧರಿಸಿ ವಿಜೃಂಭಿಸುವ ಇವರಿಂದ ಎಂಥ ಧರ್ಮಕ್ಕೆ ಉದ್ಧಾರವಾಗುತ್ತದೆ? ಒಬ್ಬ ಮತ್ತೊಬ್ಬನ ಹೆಗಲ ಮೇಲೇರಿ ಕುಳಿತ ಮಾತ್ರಕ್ಕೆ ಯಾರಾದರೂ ಉದ್ಧಾರವಾಗಲು ಸಾಧ್ಯವೆ? ಹೋಗಲಿ, ಇದು ಸಾಧುವಾದ ನಡವಳಿಕೆಯೆ? ಇಂಥ ಶೋಷಕರು ಗುರುಗಳಾದರೂ ಹೇಗಾದಾರು? ನೀವೇ ವಿಚಾರಮಾಡಿ. ಬಸವಣ್ಣನವರು ಇಂಥ ಶೈವರನ್ನು ಕಂಡು ಅಂದೇ 'ಆನೆಯನೇರಿಕೊಂಡು ಹೋದಿರೆ ನೀವು, ಕುದುರೆಯನೇರಿಕೊಂಡು ಹೋದಿರೆ ನೀವು,' ಎಂದು ಹೇಳುತ್ತ 'ಸತ್ಯದ ನಿಲವನರಿಯದೆ ನರಕಕ್ಕೆ ಭಾಜನವಾದಿರಲ್ಲ!' ಎಂದು ಛೇಡಿಸಿದ್ದಾರೆ. ಮತ್ತೊಂದು ಕಡೆಯಂತೂ ಬಸವಣ್ಣ ಎಷ್ಟೊಂದು ವ್ಯಗ್ರನಾಗಿ ಇವರುಗಳ ಮುಖಕ್ಕೆ ಮಂಗಳಾರತಿ ಮಾಡಿದ್ದಾರೆಂದರೆ 'ಅಂದಣವನೇರಿದ ಸೊಣಗ ಕಂಡಡೆ ಬಿಡದು ಮುನ್ನಿನ ಸ್ವಭಾವವನು' ಎಂದು ನಾಯಿಗೂ ಇವರನ್ನು ಹೋಲಿಸಿದ್ದಾರೆ. ಬಸವಾದಿ ಶರಣರೆಲ್ಲರಿಂದ ತಮ್ಮ ಕಂದಾಚಾರದ ನಡವಳಿಕೆಗಳಿಗಾಗಿ ಟೀಕೆಗೊಳಗಾಗಿದ್ದ ಅಂದಿನ ಶೈವರು ವೀರಶೈವರೆಂದು ತಮ್ಮನ್ನು ತಾವೇ ಕರೆದುಕೊಂಡರೆ ಅವರು ವೀರಶೈವರು ಹೇಗಾಗುತ್ತಾರೆ? ಈ ಸತ್ಯವನ್ನು ಎಲ್ಲರೂ ಅರಿಯಬೇಕು.

ಪಂಚಪೀಠ(ಡ)ಗಳ ಜಗದ್ಗುರುಗಳು, ಶೈವಗುರುಗಳೇ ಹೊರತು ವೀರಶೈವ (ಲಿಂಗಾಯತ)ರು ಅಲ್ಲವೇ ಅಲ್ಲ. ಇದು ಕಟು ಸತ್ಯ. ಈ ಸತ್ಯ ಇವರುಗಳಿಗೆ ಗೊತ್ತಿಲ್ಲವೆಂದೇನಲ್ಲ, ಗೊತ್ತಿದೆ. ಆದರೆ ಬಸವಾದಿ ಶರಣರನ್ನು ಬಿಟ್ಟರೆ ಇವರಿಗೆ ಗತಿ ಮತಿ ಇಲ್ಲವಾಗಿದೆ. ಹಾಗಾಗಿ ಅನಿವಾರ್ಯವಾಗಿ ಬಸವಣ್ಣನವರನ್ನು ಇವರು ಸಹಿಸಿದ್ದಾರೆ. ಏಕೆಂದರೆ ಬಸವಣ್ಣನ ಬೆನ್ನ ಹಿಂದೆ ಬಹುದೊಡ್ಡ ಸಮಾಜ ಇದೆ ಎಂಬುದನ್ನು ಗೊತ್ತುಮಾಡಿಕೊಂಡಿದ್ದಾರೆ. ಅವರನ್ನೆಲ್ಲ ಏನಾದರೂ ಮಾಡಿ ಹಿಡಿದಿಟ್ಟುಕೊಳ್ಳಬೇಕು ಎಂದು ಹವಣಿಸಿದ್ದಾರೆ. ಅಂದಂತೆ ಆಗಾಗ ಬಸವಣ್ಣನ ಬಗ್ಗೆ ನಾಲ್ಕು ಪ್ರೀತಿಯ ಮಾತುಗಳನ್ನೂ ಆಡುತ್ತಾರೆ. ತಮಗೆ ಅನುಕೂಲವಾಗುವ 'ಲಾಂಛನಕ್ಕೆ ಶರಣೆಂಬೆ', 'ತನು, ಮನ, ಧನ ಕೊಟ್ಟು ಗುರುವನೊಲಿಸಬೇಕು,' 'ನಾನು ಆರಂಭ ಮಾಡುವೆನಯ್ಯಾ ಗುರುಪೂಜೆಗೆಂದು, ನಾನು ಪರಸೇವೆಯ ಮಾಡುವೆನಯ್ಯಾ ಜಂಗಮಾರ್ಚನೆಗೆಂದು' ಎಂಬ ವಚನಗಳ ಮೂಲ ಆಶಯವನ್ನು ಬದಿಗಿಟ್ಟು ಒಂದೊಂದೇ ಸಾಲುಗಳನ್ನು ಹೇಳುತ್ತಾರೆ. ಆದರೆ ಅಪ್ಪಿತಪ್ಪಿಯೂ ''ಲಾಂಛನಕ್ಕೆ ತಕ್ಕ ಆಚಾರವಿಲ್ಲದಿದ್ದರೆ ಕೂಡಲ ಸಂಗಮದೇವ ನೀ ಸಾಕ್ಷಿಯಾಗಿ ಛೀ ಎಂಬೆ'', ''ನುಡಿಯೊಳಗಾಗಿ ನಡೆಯದಿರ್ದಡೆ ಹಿಡಿದಿರ್ದ ಲಿಂಗವು ಘಟಸರ್ಪ ನೋಡಾ'', ''ಮಂಡೆ ಬೋಳಾದಡೇನು ಮನ ಬೋಳಾಗದನ್ನಕ್ಕ?'', ''ತನ್ನ ಇಷ್ಟಲಿಂಗದ ಹೊಲಬು ತಿಳಿಯದೆ / ಕಾಮವ ತೊರೆಯದೆ, ಹೇಮವ ಜರೆಯದೆ / ನಾವು ಹರಗುರು ಚರಷಟ್‌ಸ್ಥಲದ ವಿರಕ್ತರೆಂದು / ಚೆನ್ನಾಗಿ ನುಡಿದುಕೊಂಡು / ಕಾವಿಕಾಷಾಯಾಂಬರವ ಹೊದ್ದು / ಶಂಖ ಗಿಳಿಲು ದಂಡಾಗ್ರವ ಹೊತ್ತು / ಕೂಳಿಗಾಗಿ ನಾನಾ ದೇಶವ ತಿರುಗಿ / ಕಾಂಚನಕ್ಕೆ ಕೈಯೊಡ್ಡುವ ಪಂಚ ಮಹಾಪಾತಕರನು / ಕಾಗೆಯ ಗರ್ಭದಲ್ಲಿ ಹುಟ್ಟಿಸಿ ಕಾಕಾ ಎಂದು ಕೂಗಿಸುತಿರ್ಪನು'' – ''ತನ್ನಾಶ್ರಯದ ರತಿ ಸುಖವನು ತಾನುಂಬ ಊಟವನು ಬೇರೆ ಮತ್ತೊಬ್ಬರ ಕೈಲಿ ಮಾಡಿಸಬಹುದೆ?'' – ''ವಾರವೆಂದರಿಯೆ ದಿನವೆಂದರಿಯೆ ಏನೆಂದರಿಯೆನಯ್ಯಾ'', – ''ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ'' ಎಂಬಂಥ ವಚನಗಳನ್ನು ಇವರುಗಳು ಹೇಳುವುದಿಲ್ಲವಲ್ಲ, ಏಕೆ?! ಇದನ್ನೆಲ್ಲ ಚೆನ್ನಾಗಿಯೇ ಮನಗಂಡ ಉತ್ತಂಗಿ ಚೆನ್ನಪ್ಪನವರು ಪಂಚಾಚಾರ್ಯರು ಬಸವಣ್ಣನವರ ಬಹಿರಂಗ ದ್ರೋಹಿಗಳು ಎಂದು ಈ ಮೊದಲೇ ವಿವರಿಸಿದ್ದಾರೆ. ಇವರು ಬಸವಣ್ಣನವರನ್ನು ಅಪ್ಪಿಕೊಂಡೂ ಇಲ್ಲ, ಒಪ್ಪಿ ಕೊಂಡೂ ಇಲ್ಲ. ಹಿಂದೊಂದು ಸಂದರ್ಭದಲ್ಲಿ ಇವರು ಲಿಂಗಿ ಬ್ರಾಹ್ಮಣರೆಂದು ಕರೆದುಕೊಂಡರು. ಸರಕಾರದಿಂದ ಅವಕಾಶ ಸಿಗುತ್ತದೆ ಎಂದು ಗೊತ್ತಾದಾಗ ನಾವು ಬೇಡಜಂಗಮರು ಅಂದರು. ಲಿಂಗಾಯತ ಸಮುದಾಯದಿಂದ ಗೌರವ ಪಡೆಯಲಿಕ್ಕಾಗಿ ನಾವು ನಿಮ್ಮ ಗುರುಗಳು, ಜಂಗಮರು ಎಂದರು. ಇದರಲ್ಲಿ ಇವರು ನಿಜಕ್ಕೂ ಯಾವ ವರ್ಗಕ್ಕೆ ಸೇರಿದವರು? ಇದನ್ನು ಅವರೇ ಹೇಳಬೇಕು.

ಭಕ್ತರನ್ನು ಕಂಡರೆ ಬೋಳಪ್ಪಿರಯ್ಯ ಎಂದು ಹೇಳಿದ ಬಸವಣ್ಣನವರೆಲ್ಲಿ? ಭಕ್ತರನ್ನು ಕಂಡರೆ ಹುಲಿಯಂತೆ ಅವರ ಮೇಲೆರಗಿ ಬೀಳುವ ಈ ಗುರುಗಳೆಲ್ಲಿ? ವಾರ-ತಿಥಿ, ನಕ್ಷತ್ರ, ರಾಹುಕಾಲ-ಗುಳಿಕಕಾಲ ಎಂದು ತಮ್ಮಲ್ಲಿಗೆ ಬರುವ ಭಕ್ತರಿಗೆ ಹೆದರಿಸಿ, ಅವರ ಆತ್ಮಸ್ಥೈರ್ಯವನ್ನು ಕುಗ್ಗಿಸಿಬಿಡುವ ಇವರೆಲ್ಲಿ, ಅಂದು-ಇಂದು ಮತ್ತೊಂದೆನಬೇಡ ದಿನವಿಂದೆ ಶಿವಶರಣೆಂಬುವಂತೆ ಎಂದು ಹೇಳಿದ ಬಸವಣ್ಣನವರೆಲ್ಲಿ? ತಾಳ ಮಾನ ಸರಸವನರಿಯೆ, ಓಜೆ ಬಜಾವಣೆಯ ಲೆಕ್ಕವನರಿಯೆ, ಅಮೃತ ಗಣ ದೇವಗಣವನರಿಯೆ ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ ಎಂದು ಹೇಳಿದ ಶರಣರೆಲ್ಲಿ? ಅರ್ಥವಾಗದ ಮಣ ಮಣ ಮಂತ್ರಗಳನ್ನು ಹೇಳಿ ಜನರನ್ನು ಮೋಸಗೊಳಿಸುವ ಈ ವಂಚಕರೆಲ್ಲಿ? ಮಾತು ಮಾತಿಗೂ ನಾವು ನಿಮ್ಮ ಗುರುಗಳು-ಜಗದ್ಗುರುಗಳು (ಇರುವ ಒಂದೇ ಜಗತ್ತಿಗೆ ಐದು ಮಂದಿ ಜಗದ್ಗುರುಗಳು ?!) ಎಂದು ಒಂದೇ ಸಮ ಅರಚುವ ಇವರೆಲ್ಲಿ, 'ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂದು ವಿನಮ್ರನಾಗಿ ಹೇಳಿದ ಬಸವಣ್ಣನವರೆಲ್ಲಿ? ಆನೆ ಆ ದಾರಿಯಲ್ಲಿ ಹೋಯಿತ್ತೆಂದರೆ ಆಡೂ ಆ ದಾರಿಯಲ್ಲಿ ಹೋಯಿತ್ತು ಎಂದೆನ್ನಬಹುದೆ? ಮುಲ್ಲಾಸಾಬಿಗೂ-ಗೋಕುಲಾಷ್ಟಮಿಗೂ ಎಲ್ಲಿಯ ಸಂಬಂಧ? ಒಂದು ಉತ್ತರ, ಮತ್ತೊಂದು ದಕ್ಷಿಣ. ಒಂದು ಬೆಳಕು ಮತ್ತೊಂದು ಕತ್ತಲು. ಒಂದು ಪ್ರಜ್ಞೆ-ಇನ್ನೊಂದು ಅಜ್ಞಾನ. ಹೀಗೆ ಒಂದಕ್ಕೊಂದು ಸಂಪೂರ್ಣ ತದ್ವಿರುದ್ಧ. ಇವು ಹೇಗೆ ಒಂದನ್ನೊಂದು ಕೂಡಬಹುದು?

ಎನಗಿಂತ ಕಿರಿಯರಿಲ್ಲ ಎಂದು ಕಿಂಕರತ್ವದಲ್ಲೇ ಬಸವಣ್ಣ ಶಂಕರ (ಸಮಾಜವನ್ನು)ನನ್ನು ಕಂಡರು. ಅದು ಅವರ ದೊಡ್ಡತನ. ಬಸವಣ್ಣನವರ ಈ ಮಾತನ್ನೇ ಮುಂದೆ ಇಟ್ಟುಕೊಂಡು ಇವರುಗಳು ಬಸವಣ್ಣನೇ ತನ್ನನ್ನು ಭಕ್ತ, ಕಿರಿಯ ಎಂದು ಕರೆದುಕೊಂಡಿದ್ದಾನೆ. ಹಾಗಾಗಿ ನಾವೇ ಆತನ ಗುರುಗಳು, ಆತ ನಮ್ಮ ಶಿಷ್ಯ ಎಂದು ಹೇಳುತ್ತ ಬಸವಣ್ಣನ ತಲೆಯ ಮೇಲೆಯೆ ಕೂತುಬಿಡಲು ಈ ಶೈವ ಜಗದ್ಗುರುಗಳು ಹೊಂಚುಹಾಕಿದ್ದಾರೆ. ಈ ಕುತಂತ್ರವನ್ನು ಆದಷ್ಟು ಬೇಗ ಲಿಂಗಾಯತ (ವೀರಶೈವ) ಸಮುದಾಯ ಅರಿಯಬೇಕು. ಬಸವಾದಿ ಶರಣರು ಬೋಧಿಸಿದ ವಚನ ಸಾಹಿತ್ಯವನ್ನು ಆಧಾರವಾಗಿಟ್ಟುಕೊಂಡು ಮುನ್ನಡೆಯಬೇಕು. ಆಗ ಸರ್ವ ಜಾತಿ ಜನಾಂಗದ ನಡುವೆ ಇಂದು ಭುಗಿಲೆದ್ದಿರುವ ಹಾಲಾಹಲ ತಂತಾನೆ ತಣ್ಣಗಾಗುತ್ತದೆ. ವರ್ಗ ವರ್ಣ ವ್ಯತ್ಯಾಸಗಳು ಥಟ್ಟನೆ ಉದುರಿಬೀಳುತ್ತವೆ. ನಿಜವಾದ ಇಷ್ಟಲಿಂಗದ ಪರಿಕಲ್ಪನೆಯಲ್ಲಿ ನಾವು ನಮ್ಮನ್ನು ತೊಡಗಿಸಿಕೊಂಡರೆ ಸತ್ಯದ ದರ್ಶನವಾಗುತ್ತದೆ.

ಬಸವಣ್ಣನ ಧರ್ಮ ಅದು ಮನುಷ್ಯನ ಧರ್ಮ. ವೈಜ್ಞಾನಿಕ ಧರ್ಮ. ದಲಿತ ಧರ್ಮ. ಅಲ್ಲಿ ಶೋಷಕರು ಇಲ್ಲ. ಶೋಷಣೆಗೆ ಒಳಗಾಗುವವರೂ ಇಲ್ಲ. ಇದು ಪುರೋಹಿತ ಶಾಹಿಗಳ ಧರ್ಮವಲ್ಲ. ಭಕ್ತರ ಧರ್ಮ. ಅಲ್ಲಿ ಯಾರೂ ಯಾರನ್ನೂ ಹೊತ್ತುಕೊಂಡು ತಿರುಗಬೇಕಾಗಿಲ್ಲ. ಅಲ್ಲಿ ಸಕಲ ಜೀವಾತ್ಮರಿಗೆ ಲೇಸ ಬಯಸುವ ಆರೋಗ್ಯಕರ ಮನಸ್ಸುಗಳು ಮಾತ್ರ ಇರುತ್ತವೆ. ಇಲ್ಲಿ ವ್ಯಕ್ತಿಯ ಹುಟ್ಟು ಮುಖ್ಯ ಅಲ್ಲ. ಆತನ ನಡವಳಿಕೆಗಳೇ ಆತ ಭಕ್ತ, ಭವಿ ಎಂಬುದನ್ನು ನಿರ್ಧರಿಸುತ್ತವೆ. ಹೆಣ್ಣು-ಗಂಡು ಎಂಬ ತಾರತಮ್ಯವೂ ಇಲ್ಲಿ ಇಲ್ಲ. ಏಕೆಂದರೆ ನಡುವೆ ಸುಳಿವ ಆತ್ಮ ಹೆಣ್ಣು ಅಲ್ಲ, ಗಂಡು ಅಲ್ಲ ಎಂದು ಖಚಿತವಾಗಿ ಅರಿತಿರುವ ಧರ್ಮ. ಇವನಾರವ ಇವನಾರವ ಎಂದು ದೂರಿಕರಿಸದೆ, ಇವ ನಮ್ಮವ ಇವ ನಮ್ಮವ ಎಂದು ಎಲ್ಲರನ್ನೂ ಅಪ್ಪಿಕೊಂಡ ಧರ್ಮ. ನೈವ ರಾಜಾ ನ ಚ ದಂಡೋ ನ ದಂಡಿತಃ ಎಂಬ ಸುಖೀ ಸಾಮ್ರಾಜ್ಯ. ಹೀಗೆ ಮಾನವೀಯ ಮೌಲ್ಯಗಳಿಂದ ಒಡಗೂಡಿದ ಬಸವ ಧರ್ಮ ಪ್ರಗತಿಪರ ಧರ್ಮ.

ಇಂಥ ಪ್ರಗತಿಪರ ಧರ್ಮಕ್ಕೆ ಮೂಲ ಪುರುಷರು ಬೂರ್ಜ್ವಾ ವ್ಯವಸ್ಥೆಯ ಪರಿಪೋಷಕರಾದ ಜಗದ್ಗುರುಗಳು ಹೇಗಾದಾರು?

ಕಾಗೆಯ ಮರಿ ಕೋಗಿಲೆಯಾಗಬಲ್ಲುದೆ?
ಆಡಿನ ಮರಿ ಆನೆಯಾಗಬಲ್ಲುದೆ?
ಸೀಳ ನಾಯಿ ಸಿಂಹದ ಮರಿಯಾಗಬಲ್ಲುದೆ?
ಅರಿವು ಆಚಾರ ಸಮ್ಯಜ್ಞಾನವರಿಯದೆ
ನಾಮವ ಹೊತ್ತುಕೊಂಡು ತಿರುಗುವ ಗಾವಿಲರ
ಮುಖವ ನೋಡಲಾಗದು ಅಮುಗೇಶ್ವರಾ?
ಅಲ್ಲವೆ?

ವಿಶ್ವಾರಾಧ್ಯ ಸತ್ಯಂಪೇಟೆ
'ಬಸವ ಮಾರ್ಗ' ಪತ್ರಿಕೆ, ಶಹಾಪುರ, ಗುಲ್ಬರ್ಗಾ ಜಿಲ್ಲೆ-೫೮೫ ೨೨೩

## ಪರಿಣಾಮ

ಆಟೋದಲ್ಲಿ ಕೂತು
ಪ್ರಯಾಣಿಕ 'ಸ್ಟ್ರೈಟ್' ಅಂದ
ರಸ್ತೆ ಅಂಚಿಗೆ ಬಂದು
ನಿಂತಿತು ಆಟೋ,
'ಸ್ಕ್ವಯರ್' ಎಂದ
ಅರ್ಥವಾಯಿತು ಚಾಲಕನಿಗೆ
ಇವನು ಪ್ಲೇವಿನ್ ಹುಚ್ಚ

■ ಶ್ರೀಕಂಠ ಗುಂಡಪ್ಪ, ನಂ. ೫೭, 'ಈಶಾನ್ಯ'
ಬ್ಯಾಂಕ್ ಕಾಲೋನಿ, ಬೋಗಾದಿ
ಮೈಸೂರು-೫೭೦ ೦೦೬

# 'ಉದ್ಧಾರಭೂಷಣ' ಉದ್ಧಾರಯ್ಯ

ಸತ್ಯವತಿ

'ಉದ್ಧಾರಯ್ಯ' ಎಂದು ಹೆಸರಿಡುವಾಗ ಅವನ ಅಪ್ಪ ಅಮ್ಮ ಕಂಡ ಕನಸುಗಳು ಸಾವಿರಾರು. ತಮ್ಮ ಕಂದ ಮನೆ, ಕೇರಿ ಊರನ್ನಲ್ಲದೆ ದೇಶವನ್ನೂ ಉದ್ಧರಿಸಿ, ತಮಗೆ ಅಮರ ಕೀರ್ತಿಯನ್ನು ತರುವನೆಂದು ನೂರಕ್ಕೆ ನೂರು ಪಾಲು ನಂಬಿ, ಆನಂದದಿಂದ, ಹೆಮ್ಮೆಯಿಂದ ಈ ನಾಮಧೇಯವನ್ನು ಇಟ್ಟು, ಮಗನನ್ನು ಮೂರು ಸಲ ಕರೆದು ತೃಪ್ತರಾಗಿದ್ದರು.

ತಂದೆ ತಾಯಿಯರ ಆಶಾಭಂಗ ಮಾಡಲಿಲ್ಲ ಈ ಕುವರ. ಮನೆಯಲ್ಲಿದ್ದ ವಸ್ತುಗಳನ್ನು ತಾವಾಗಿ ಕೆಡಲು ಬಿಡದೆ ತಾನೇ ಹಾಳು ಮಾಡಿ ಎಸೆಯುತ್ತಿದ್ದ. ಕೇರಿಯವರಿಗೆ ಬಾಯಿಗೆ ಬಂದಂತೆ ಸಹಸ್ರನಾಮಾರ್ಚನೆ ಮಾಡಿ ಉದ್ಧಾರವಾಗುತ್ತಿದ್ದ. ಊರಿನ ಬಾರು, ಬೀಡಾ ಅಂಗಡಿಗಳನ್ನು ಉದ್ಧರಿಸಿದವನೂ ಇವನೇ. ಮತ್ತೇರಿ ಚರಂಡಿಯ ಸುರಂಗವನ್ನು ಸರ್ವೆ ಮಾಡುತ್ತಿದ್ದವನೂ ಇವನೇ. ರಸ್ತೆ ಸವೆಸುತ್ತ ಊರು ತುಂಬಾ ಉಂಡಾಡಿ ಗುಂಡನ ಹಾಗೆ ಅಲೆದಾಡುತ್ತಿದ್ದ ಇವನನ್ನು ಕಂಡ ಮನೆಯೊಡೆಯರು ''ಉದ್ಧಾರ ಊರೆಲ್ಲಾ ಅಲ್ಕೊಂಡು ಇಲ್ಲೀವರೆಗೂ ಬಂತು ಕಣೆ ; ಬೇಗ ಬಾಗಿಲು ಹಾಕ್ಕೋ'' ಎಂದು ತಮ್ಮ ಮನೆಯೊಡತಿಗೆ ಹೇಳುವಷ್ಟು ಪ್ರಸಿದ್ಧಿಯನ್ನು ಆತ ಪಡೆದಿದ್ದ. ಹಾಗಾಗಿ ಮನೆ, ಕೇರಿ, ಊರುಗಳನ್ನು ಉದ್ಧರಿಸಿ ಹೆಸರು ಮಾಡಿದ ಆತ ದೇಶವನ್ನು ಉದ್ಧರಿಸುವುದು ಮಾತ್ರ ಬಾಕಿ ಉಳಿದಿತ್ತು.

'ಸತ್ಕಾರ್ಯ ಮಾಡಬೇಕೆಂದು ಇರುವವರಿಗೆ ಅವಕಾಶಗಳು ತಾವಾಗಿ ಒದಗಿಬರುವುವು' ಎಂಬ ಮಾತಿನಲ್ಲಿ ಉದ್ಧಾರಯ್ಯನಿಗೆ ತುಂಬಾ ನಂಬಿಕೆ. ಅವನ ನಂಬಿಕೆ ಸುಳ್ಳಾಗಲಿಲ್ಲ. ಇವನಿಂದ ಎಂ.ಎಲ್.ಎ. ಚುನಾವಣೆಯಲ್ಲಿ ಉದ್ಧೃತನಾಗಿದ್ದ ನುಂಗಣ್ಣನು, ಇತ್ತ ಊರೂ ಅಲ್ಲದ, ಅತ್ತ ಗ್ರಾಮವೂ ಅಲ್ಲದ ಅವನ ತವರೂರಲ್ಲಿ ಇದ್ದ ಸರಕಾರಿ ಶಾಲೆಯಲ್ಲಿ, ಇವನಿಗೆ ಶಿಕ್ಷಕ ಹುದ್ದೆ ಕೊಟ್ಟು ಇವನನ್ನು ಉದ್ಧರಿಸಿದ. ವಿದ್ಯಾರ್ಥಿಯಾಗಿದ್ದಾಗ ಒಂದೊಂದು ತರಗತಿಯ ಬೆಂಚನ್ನೂ ಕನಿಷ್ಠ ಪಕ್ಷ ಎರಡೆರಡು ವರ್ಷ ಸವೆಸಿದ್ದನಾದ್ದರಿಂದ ಇವನ ಅನುಭವದ ಮುಂದೆ ಉಳಿದವರ ಅನುಭವ ಗೌಣವಾದುದೆಂದು ಬಗೆದು ಆತನಿಗೆ ಮುಂದೆ ಮುಖ್ಯೋಪಾಧ್ಯಾಯ ಹುದ್ದೆಯನ್ನು ಕೊಡಿಸಿದ.

ಎಲ್ಲಾ ಶಾಲೆಗಳಂತೆ ಇಲ್ಲಿಯೂ ಶಾಲಾ ವಾರ್ಷಿಕೋತ್ಸವ ನಡೆಯುತ್ತಿತ್ತು. ಬೇರೆ ದಿನಗಳಲ್ಲಿ ಶಾಲೆಯ ಕಡೆ ಮುಖ ಹಾಕದಿದ್ದ ವಿದ್ಯಾರ್ಥಿಗಳು ಅಂದು ಮಾತ್ರ ತಪ್ಪದೆ ಬರುತ್ತಿದ್ದರು.

ಬೇಕಾದಷ್ಟು ವಿದ್ಯಾರ್ಥಿಗಳು ಸಿಗಲಾರರೆಂಬ ಕಾರಣಕ್ಕೆ, ಶಾಲೆಯ ಒಳ ಹೊರಗಿನ ಮಂದಿಗಳನ್ನು ಕಲೆ ಹಾಕಿ ಲೈಟು ಮೈಕುಗಳ ಮೇಳದಲ್ಲಿ ಫಿಲ್ಮೀ ಡ್ಯಾನ್ಸುಗಳ ಮತ್ತು ಯುಗಳ ಗೀತೆಗಳ ಕಾರ್ಯಕ್ರಮವನ್ನು ಗಡದ್ದಾಗಿ ಮಾಡುತ್ತಿದ್ದ. ಹಗಲಲ್ಲಿಯೂ ಚಿತ್ರಗೀತೆಗಳ ಅಂತ್ಯಾಕ್ಷರಿ ಕಾರ್ಯಕ್ರಮವನ್ನು ನಡೆಸುತ್ತಿದ್ದ. ಆದ್ದರಿಂದ ಶಾಲೆ ಪುಸ್ತಕಗಳ ಬಗ್ಗೆ ಜ್ಞಾನವಿಲ್ಲದಿದ್ದರೂ, ಅಲ್ಲಿಯವರಿಗೆಲ್ಲ ಸಿನಿಮಾ ಪ್ರಪಂಚದ ಬಗ್ಗೆ ಅಪಾರ ಜ್ಞಾನವಿತ್ತು. ಈ ಸುಪ್ರಸಿದ್ಧ ಜ್ಞಾನವೇ 'ವ್ಯವಹಾರ ಜ್ಞಾನ, ಸಾಮಾನ್ಯ ಜ್ಞಾನ, ಅಸಾಮಾನ್ಯ ಜ್ಞಾನ, ವಿಶೇಷ ಜ್ಞಾನ' ಎಂಬ ಖ್ಯಾತಿಗೆ ಪಾತ್ರವಾಗಿ ವಿಶ್ವದಾದ್ಯಂತ ಬೆಳಗುತ್ತಿರುವುದು ಎಂದು ಉದ್ಧಾರಯ್ಯ ಬಲವಾಗಿ ನಂಬಿದ್ದ. ಹಾಗಾಗಿ ಅದಕ್ಕೆ ವಿಶೇಷ ಮಹತ್ವವನ್ನೂ ನೀಡಿದ್ದ.

ಎಂದಿನಂತೆ ಆ ವರುಷವೂ ವಾರ್ಷಿಕೋತ್ಸವದ ಪ್ರಯುಕ್ತ ಹೆಚ್ಚಿನ ಅಂಕಗಳನ್ನು ಪಡೆದ ಮಕ್ಕಳಿಗೆ 'ಪ್ರತಿಭಾ ಪುರಸ್ಕಾರ' ನೀಡಲು ಪಟ್ಟಿ ತಯಾರಿಸುತ್ತಿದ್ದ ಉದ್ಧಾರಯ್ಯನ ಕೈ ತಟ್ಟನೆ ಬರೆಯುವುದನ್ನು ನಿಲ್ಲಿಸಿತು.

''ಅಲ್ಲಾ, ಇದೆಂಥಾ ಅನ್ಯಾಯ ! ಈ ಮಕ್ಕಳಿಗೆ ಹೆಚ್ಚಿನ ಅಂಕಗಳೂ ಅಲ್ಲದೆ ಪುರಸ್ಕಾರ ಬೇರೆ ! ಇದು ತೀರಾ ಅನ್ಯಾಯ. ಇದರಿಂದ ಮೇಲಿನವರು ಯಾವಾಗಲೂ ಮೇಲೇ ಉಳಿದುಬಿಡುತ್ತಾರೆ. ಕೆಳಗಿನವರು ಕೆಳಗೇ ಕಳೆದು ಹೋಗುತ್ತಾರೆ. ಇದಕ್ಕೆ ಏನಾದರೊಂದು ಮಾಡಲೇ ಬೇಕು,'' ಎಂಬ ಆಲೋಚನೆ ಅವನ ಅಸಾಧಾರಣ ಮಂಡೆಯಲ್ಲಿ ಜ್ಯೋತಿಯಂತೆ ಝಗ್ಗನೆ ಬೆಳಗಿತು.

ಕಣ್ಮುಚ್ಚಿ ಧ್ಯಾನಪರವಶನಾದ. ಏನು ಮಾಡಬೇಕೆಂದು ಹೊಳೆಯಲಿಲ್ಲ. ಶಾಲೆಯ ಜವಾನ - ದಿವಾನ ಎಲ್ಲವೂ ಆದಂಥ ಮುಕ್ಕಣ್ಣನನ್ನು ಕರೆದ.

''ಏನು ?'' ಪೊಲೀಸ್ ದರ್ಪದಲ್ಲಿ ಪ್ರಶ್ನಿಸಿದ ಬಾಗಿಲಲ್ಲಿ ನಿಂತ ಮುಕ್ಕಣ್ಣ.

''ಎರಡು ಲೋಟ ಸ್ಟ್ರಾಂಗ್ ಕಾಫಿ.''

ಉದ್ಧಾರಯ್ಯ ಎರಡು ಲೋಟ ಕಾಫಿಗೆ ಆರ್ಡರ್ ಮಾಡಿದ್ದರೂ, ಅದರಲ್ಲಿ ಒಂದು ಮಾತ್ರ ಅವನಿಗೆ, ಇನ್ನೊಂದು ಮುಕ್ಕಣ್ಣನಿಗೆ ಎಂದು ಹೇಳಬೇಕಾಗಿಲ್ಲ ತಾನೆ ? ಮುಕ್ಕಣ್ಣನಿಗೂ ಸೇರಿ ಕಾಫಿ ಹೇಳದಿದ್ದರೆ, ತನಗೆ ಕಾಫಿ ಸಿಗುವುದಿಲ್ಲವೆಂಬ ಸತ್ಯಾಂಶವನ್ನು ಅವನು ಎಂದೋ ಕಂಡುಕೊಂಡಿದ್ದ.

''ಸ್ಟ್ರಾಂಗ್ ಕಾಫಿ'' ಎಂಬ ನುಡಿ ಕೇಳಿ ಮುಕ್ಕಣ್ಣನ ಮೊಗ ಮೊರದಗಲವಾಯ್ತು.

''ಈ ಮಾಸ್ಟ್ರಿಗೆ ಯಾವಾಗ್ಲೂ ಯೋಚ್ನೆ ಕೆತ್ಕೊಳ್ತಾನೇ ಇರ್ಲಿ. ಆಗ ನಂಗೆ ಇಸ್ಟ್ರಾಂಗ್ ಕಾಫಿ ಸಿಗ್ತಾನೆ ಇರ್ತೈತೆ,'' ಎಂದು ಹೇಳಿಕೊಳ್ಳುತ್ತ ಆತ ಕ್ಯಾಂಟೀನ್ ಕಡೆಗೆ ನಡೆದ.

ಕಾಫಿ ಹೀರುತ್ತಿದ್ದಂತೆ ಅದ್ಭುತ ಆಲೋಚನೆಗಳ ಸರಮಾಲೆಯೇ ತಲೆ ತುಂಬಾ ಓಲಾಡಿತು.

''ಹೌದು ಹೀಗೆಯೇ ಮಾಡಬೇಕು, ಅದೇ ಸರಿ'' ಎಂದು ತನಗೆ ತಾನೇ ಹೇಳಿಕೊಳ್ಳುತ್ತ ಕೋಣೆ ತುಂಬ ಸರಸರ ಓಡಾಡಿದ ಉದ್ಧಾರಯ್ಯ.

ಆಗಿಂದಾಗಲೇ 'ಈ ಸಲ, ಪರೀಕ್ಷೆಯಲ್ಲಿ ಅತ್ಯಂತ ಕಡಿಮೆ ಅಂಕಗಳನ್ನು ಪಡೆದು ಉತ್ತೀರ್ಣರಾದವರಿಗೆ ಪುರಸ್ಕಾರ ಮಾಡಿ ಉತ್ತೇಜಿಸಲಾಗುವುದು.' ಎಂದು ಘೋಷಿಸಿ, ಅಂಥಾ ಮಕ್ಕಳ ಪಟ್ಟಿಯನ್ನು ತಯಾರಿಸಿದ.

ಹೆಚ್ಚು ಓದಿ ಒಳ್ಳೆಯ ಅಂಕಗಳನ್ನು ಗಳಿಸಿದ ಮಕ್ಕಳಿಗೂ, ಅವರನ್ನು ಹೆತ್ತವರಿಗೂ ಘೋರ ನಿರಾಸೆಯಾಯಿತು. ಅವರಿಗೆ ವಾರ್ಷಿಕೋತ್ಸವದಲ್ಲಿ ಯಾವ ಆಸಕ್ತಿಯೂ ಉಳಿಯಲಿಲ್ಲ. 'ಉದ್ಧಾರಯ್ಯ ಹೀಗೇಕೆ ಮಾಡಿದ?' ಎಂಬ ಪ್ರಶ್ನೆ ಅವರನ್ನು ಪೆಡಂಭೂತವಾಗಿ ಕಾಡಿತು.

ಇಪ್ಪತ್ತೈದನೆಯ ವರ್ಷದ ಅದ್ದೂರಿ ವಾರ್ಷಿಕೋತ್ಸವವಾದ್ದರಿಂದ ಅಂದು ಮುಖ್ಯ ಅತಿಥಿಯಾಗಿ ಆಗಮಿಸಿದ್ದ 'ಶಿಕ್ಷಣ ಸಚಿವ' ನುಂಗಣ್ಣನ ಎದುರಿನಲ್ಲಿ ಮುಮ್ಮಡಿ ಉತ್ಸಾಹದಲ್ಲಿ ಉದ್ಧಾರಯ್ಯ ಉದ್ದದ ಭಾಷಣ ಮಾಡಿದ.

''ಎಲ್ಲಾ ವಿಷಯದಲ್ಲೂ ಕೆಳಗಿದ್ದವರನ್ನು ಮೇಲೆ ತರಬೇಕಾದದ್ದು ನಮ್ಮೆಲ್ಲರ ಆದ್ಯ ಕರ್ತವ್ಯ. ನಮ್ಮ ಸರಕಾರವೂ ಇದೇ ಧೋರಣೆಯನ್ನು ಅನುಸರಿಸಿ ಹಲವಾರು ಶ್ರೇಷ್ಠ ಕೆಲಸಗಳನ್ನು ಹಮ್ಮಿಕೊಂಡಿದೆ. ಮೊದಲನೆಯದಾಗಿ ಕೆಳಜಾತಿ ಎಂಬ ಹಣೆಪಟ್ಟಿ ಇದ್ದವರನ್ನು ಮೇಲೆ ತರುತ್ತದೆ. ಅದಕ್ಕಾಗಿ ಮೇಲಾಟ

ಆಡಿದವರನ್ನು ಮೂಲೆಗೆ ತಳ್ಳುತ್ತಿದೆ. ಎರಡನೆಯದಾಗಿ ನಮ್ಮ ಘನ ಸರಕಾರವು ಆರ್ಥಿಕವಾಗಿ ಹಿಂದುಳಿದವರನ್ನು ಮುಂದೆ ತರುತ್ತದೆ. ಅದಕ್ಕಾಗಿ ಅವರು ಲಂಚ ತೆಗೆದುಕೊಳ್ಳುವಾಗ ಕಣ್ಣುಮುಚ್ಚಿಕೊಳ್ಳುತ್ತಿದೆ. ಆರ್ಥಿಕವಾಗಿ ಮುಂದಿದ್ದು ನಮ್ಮ ದೇಶದಲ್ಲೇ ಹಣವನ್ನು ಇಟ್ಟುಕೊಂಡವನಿಗೆ ಮಾತ್ರ ನೀರು ತೆರಿಗೆ, ಗಾಳಿ ತೆರಿಗೆ, ನಡೆಯಲು ತೆರಿಗೆ, ಕೂರಲು ತೆರಿಗೆ ಎಂದು ವಿವಿಧ ರೀತಿಯ ತೆರಿಗೆಗಳನ್ನು ವಿಧಿಸಿದ್ದು ಅಧಿಕ ಧನವನ್ನು ಕಿತ್ತುಕೊಂಡು, ಅವನು ಹಣದಾಸೆಗೆ ತಿಲಾಂಜಲಿ ನೀಡುವಂತೆ ಪ್ರೋತ್ಸಾಹಿಸುತ್ತಿದೆ. ಈ ಕ್ರಮದಿಂದ ನಮ್ಮ ದೇಶವು ಸದಾ ದರಿದ್ರಾವಸ್ಥೆಯಲ್ಲಿದ್ದು, ನೆರೆದೇಶದವರ ಅನುಕಂಪಕ್ಕೆ ಪಾತ್ರವಾಗಿದ್ದುಕೊಂಡೇ ಇರುತ್ತದೆ. ವಿವಿಧ ರಾಷ್ಟ್ರಗಳಿಂದ ಅತ್ಯಧಿಕ ಸಾಲವನ್ನು ಪಡೆದು ಗಿನ್ನಿಸ್ ದಾಖಲೆ ಮಾಡುವುದೇ ನಮ್ಮ ದೇಶದ ಮೂಲೋದ್ದೇಶವಾದ್ದರಿಂದ ಇದು ಈ ರೀತಿಯೇ ಮುಂದುವರಿಯಬೇಕಾಗಿದೆ.''

ಉದ್ಧಾರಯ್ಯನ ಭಯಂಕರ ಜ್ಞಾನಕ್ಕೆ ಬೆರಗಾಗಿ ಸಭೆಯು ಮೂಗಿನ ಮೇಲೆ ಬೆರಳನ್ನಿರಿಸಿಕೊಂಡಿತು.

''ಸಿರಿವಂತನನ್ನು ವಿಚಾರಿಸಿಕೊಳ್ಳುವ ವಿಷಯದಲ್ಲಿ ಮಾನ್ಯ ಸಚಿವರೂ ಹಿಂದೆ ಬಿದ್ದಿಲ್ಲ. ಅವರೂ ಕೂಡ ಸರಕಾರದ ನೀತಿಯನ್ನೇ ಅನುಸರಿಸಿ ಸರಕಾರದ ಮೂಲೋದ್ದೇಶಕ್ಕೆ ಭಂಗ ಬಾರದ ರೀತಿಯಲ್ಲಿ ವ್ಯವಹರಿಸುತ್ತಿದ್ದಾರೆ. ಇವರು ಕೆಲವೇ ಪಠ್ಯ ಪುಸ್ತಕಗಳನ್ನು ಅಚ್ಚು ಹಾಕಿಸಿ, ಅವನ್ನು ಬಡಮಕ್ಕಳಿಗೆ ಹಂಚುತ್ತಿದ್ದಾರೆ. ಆದ್ದರಿಂದ ಪುಸ್ತಕ ಬೇಕಾದಲ್ಲಿ ಶ್ರೀಮಂತ ವಿದ್ಯಾರ್ಥಿಗಳು ಕಡ್ಡಾಯವಾಗಿ ಇಡೀ ಪುಸ್ತಕದ ನೆರಳಚ್ಚನ್ನು ತೆಗೆಸಿಕೊಳ್ಳಬೇಕು; ಅನ್ಯ ಮಾರ್ಗವಿಲ್ಲ. ಇದರಿಂದ ನೆರಳಚ್ಚು ಯಂತ್ರವನ್ನು ಇಟ್ಟುಕೊಂಡವನೂ ಉದ್ಧಾರವಾಗುತ್ತಿದ್ದಾನೆ. ಇಂಥಾ ದೇಶಸೇವಾತತ್ಪರರಾದ ಮಾನ್ಯ ಸಚಿವರಿಗೆ ಜೈ!''

ಕೂಡಲೆ ಸಭೆಯಲ್ಲಿ ಜೈಜೈಕಾರದೊಂದಿಗೆ ಕರತಾಡನವೋ ಕರತಾಡನ. ಸಭೆ ಸ್ತಬ್ಧವಾದ ಮೆಲೆ ಉದ್ಧಾರಯ್ಯನ ಸುದೀರ್ಘ ಭಾಷಣವು ಮುಂದುವರೆಯಿತು.

''ಇದೇ ನಿಟ್ಟಿನಲ್ಲಿ ಮುಂದುವರಿದು ನಾವೂ ಕೂಡ ಕೆಳಗಿರುವವರನ್ನು ಮೇಲೆ ತರುತ್ತಿದ್ದೇವೆ. ಅಂದರೆ ಇಷ್ಟು ದಿನ ಕೆಳಗೆ ನೆಲದಲ್ಲಿ ಕುಳಿತುಕೊಳ್ಳುತ್ತಿದ್ದ ನಮ್ಮ ಶಾಲಾ ಮಕ್ಕಳನ್ನು ಈಗ ನಾವು ಮಣೆಯ ಮೇಲೂ, ಮಣೆಯ ಮೇಲಿದ್ದವರನ್ನು ಬೆಂಚಿನ ಮೇಲೂ, ಬೆಂಚಿನ ಮೇಲೆ ಕುಳಿತಿದ್ದವರನ್ನು ಜಗಲಿಯ ಮೇಲೂ ಕುಳ್ಳಿರಿಸಿದ್ದೇವೆ.''

ಶಿಳ್ಳೆ, ಚಪ್ಪಾಳೆಗಳ ಗವಜಿ ಮುಗಿದ ಮೇಲೆ ಪುನಃ ಉದ್ಧಾರಯ್ಯನ ಕಂಠಶ್ರೀ ಮೊಳಗಿತು.

''ಈ ವರ್ಷ ನಾವು ಹೊಸತೊಂದು ಪ್ರಯೋಗವನ್ನು ಮಾಡುತ್ತಿದ್ದೇವೆ. ಎಷ್ಟೋ ವರ್ಷಗಳಿಂದ ನಡೆದು ಬಂದ 'ಪ್ರತಿಭಾ ಪುರಸ್ಕಾರ'ದಲ್ಲಿ ಒಂದು ಸಣ್ಣ ಬದಲಾವಣೆಯನ್ನು ಮಾಡಿದ್ದೇವೆ. ಇಲ್ಲಿಯವರೆಗೆ ಹೆಚ್ಚು ಅಂಕ ಗಳಿಸಿದ ಬುದ್ಧಿವಂತ ವಿದ್ಯಾರ್ಥಿಗಳನ್ನು ಸನ್ಮಾನಿಸಲಾಗುತ್ತಿತ್ತು. ಆದರೆ ಹೆಚ್ಚಿನ ಅಂಕವೇ ಬಂದ ಮೇಲೆ ಇದರ ಅವಶ್ಯಕತೆ ಇಲ್ಲವೆಂದು ಭಾವಿಸಿ, ಈ ಸನ್ಮಾನವನ್ನು ಕನಿಷ್ಠ ಅಂಕ ಗಳಿಸಿ ಉತ್ತೀರ್ಣರಾದ ಬುದ್ಧಮಂಕ ವಿದ್ಯಾರ್ಥಿಗಳಿಗೆ ಕೊಟ್ಟು ಉತ್ತೇಜಿಸಲು ನಿಶ್ಚಯಿಸಿದ್ದೇವೆ. ಇದರಿಂದಲೂ ನಾವು ಕೆಳಗಿರುವವರನ್ನು ಮೇಲೆತ್ತುತ್ತಿದ್ದೇವೆ. ಈ ನೂತನ ಕ್ರಮ ತಮ್ಮೆಲ್ಲರಿಗೂ ಪ್ರಿಯವಾಗುವುದೆಂದು ನಮ್ಮ ನಂಬಿಕೆ.''

''ಹೌದು, ಹೌದು'' ಎಂಬ ಉದ್ಗಾರಗಳೂ, ಉತ್ತೇಜಕ ಸ್ವರ ವಿಚಿತ್ರಗಳೂ ಸಭಿಕರಿಂದ ದೊರೆಯಿತು. ಉದ್ಧಾರಯ್ಯ ಈ ಕಿವಿಯಿಂದ ಆ ಕಿವಿಯವರೆಗೆ ಬಾಯಿ ಮಾಡಿ, ದೇಶಾವರಿ ನಗೆ ಬೀರುತ್ತಾ, ಸಂತಸದಿಂದ ತಲೆದೂಗುತ್ತ ಎಲ್ಲರಿಗೂ ವಂದಿಸಿದ.

ತಮ್ಮ ಭೀಕರವಾದ ಭಾಷಣದಲ್ಲಿ ಸಚಿವರು ತಾನು ಉದ್ಧಾರಯ್ಯನ ಭಾಷಣದಿಂದ ಬಹಳವಾಗಿ ಪ್ರಭಾವಿತರಾಗಿರುವುದಾಗಿ ತಿಳಿಸಿದರು. ದೇಶೋದ್ಧಾರಕ್ಕಾಗಿ ಟೊಂಕ ಕಟ್ಟಿ ನಿಂತಿರುವ ಉದ್ಧಾರಯ್ಯನಿಗೆ 'ಉದ್ಧಾರಭೂಷಣ' ಎಂಬ ಬಿರುದನ್ನು ಸಹ ನೀಡಿ ಗೌರವಿಸಿದರು. ಅಂತೂ ಈ ಸಲದ ಕಾರ್ಯಕ್ರಮ ಬಹಳ ಯಶಸ್ವಿಯಾಯಿತೆಂದು ಊರೆಲ್ಲಾ ಮಾತಾಡಿತು.

ಪರೀಕ್ಷೆಯ ದಿನಗಳು ಹತ್ತಿರ ಬಂದಂತೆ ಹುಡುಗರು ಆನಂದದಿಂದ, ಹೆಚ್ಚಿನ ಸಮಯವನ್ನು ಆಡುವುದರಲ್ಲಿ ಕಳೆಯತೊಡಗಿದರು. ಓದುವ ಮಕ್ಕಳಿಗೆ ಹಿರಿಯರಿಂದ ಪೆಟ್ಟು ಮೂದಲಿಕೆಗಳು ಧಾಳಾಧಾಳಾಗಿ ದೊರಕಿದವು.

''ಓದಿ ಏನು ತರ್ತೀರೋ ಮೂದೇವಿಗಳಾ ? ಬರೀ ಪಾಸಾದ್ರೆ ಸಾಕು. ಇಲ್ದಿದ್ರೆ ಬೇರೆಯೋರ್ಗೆ ಪುರಸ್ಕಾರ ಸಿಗುತ್ತೆ. ನಿಮಗೆ ಸಿಗೋದೇ ಇಲ್ಲ. ಹೀಗಾದ್ರೆ ನಾವು ಊರಲ್ಲಿ ಮುಖ ಎತ್ತಿ ತಿರುಗೋದು ಹೇಗೆ ?'' ಎಂದು ದೊಡ್ಡವರು ಮಕ್ಕಳನ್ನು ಗದರಿಸಿದರು. ಓದಲು ಬಿಡಲೇ ಇಲ್ಲ. ಉತ್ತರ ಗೊತ್ತಿದ್ದರೂ ಹೆಚ್ಚು ಅಂಕ ಬರುವಷ್ಟು ಉತ್ತರಿಸಬಾರದೆಂದು ತಾಕೀತು ಮಾಡಿದರು.

ಆ ವರ್ಷದ ಪರೀಕ್ಷೆಯಲ್ಲಿ ಓದುವ ಮಕ್ಕಳಿಗೂ ಓದದ ಮಕ್ಕಳಿಗೂ ಒಂದೇ ರೀತಿಯ ಅಂಕಗಳು ಬಂದು ಉದ್ಧಾರಯ್ಯನ ತಲೆ ಬಿಂಗ್ರಿಯಾಯ್ತು. ಅನುತ್ತೀರ್ಣರಾದವರನ್ನು ಬಿಟ್ಟು ಉಳಿದೆಲ್ಲ ಮಕ್ಕಳಿಗೆ ಒಂದೇ ರೀತಿಯ 'ಪುರಸ್ಕಾರಾರ್ಹ' ಅಂಕಗಳು ಬಂದಾಗ, ದೇಶೋದ್ಧಾರಕ ಉದ್ಧಾರಯ್ಯನಿಗೆ ದಿಕ್ಕು ತೋಚದಂದಾಯ್ತು. ಮಕ್ಕಳ ಅಂಕಪಟ್ಟಿಯನ್ನು ನೋಡುತ್ತಾ ಆತ ಕಲ್ಲಿನಂತೆ ಕುಳಿತುಬಿಟ್ಟ. ತನ್ನ ಲೆಕ್ಕಾಚಾರ ಎಲ್ಲಿ ತಪ್ಪಾಯ್ತೆಂದು ಆತನಿಗೆ ಕಡೆಗೂ ತಿಳಿಯಲಿಲ್ಲ.

ಸತ್ಯವತಿ
W/o ಡಾ॥ ಎಸ್. ಹರಿಕೃಷ್ಣನ್, ಕೌಸ್ತುಭ, ಮೈದಾನ್ ರಸ್ತೆ,
ಸುರತ್ಕಲ್, ಮಂಗಳೂರು - ೫೭೫ ೦೧೪

## ಸಾದರ ಸ್ವೀಕಾರ

**ಜನಪ್ರಿಯ ಹಣ್ಣುಗಳು** (ಪರಿಚಯ)
*ಡಾ॥ ಪಿ. ನಾರಾಯಣಸ್ವಾಮಿ*
**ಪುಟ : ೧೬೮** ಬೆಲೆ : ರೂ. ೧೦೦

**ವಿದ್ಯಾರ್ಥಿಗಳೇ ನಿಮ್ಮ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳಿ**
*ಡಾ॥ ಸಿ. ಆರ್. ಚಂದ್ರಶೇಖರ್*
**ಪುಟ : ೫೬** ಬೆಲೆ : ರೂ. ೨೦

**ಆನುವಂಶಿಕ ಸಂಕೇತ** (ವೈಜ್ಞಾನಿಕ ಕಾದಂಬರಿ)
*ಡಾ॥ ವಿರುಪಾಕ್ಷ ಕೆ. ಬಣಕಾರ*
**ಪುಟ : ೧೦೪** ಬೆಲೆ ರೂ. ೪೫

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಗಾನಗುಚ್ಛ** (ಜ್ಞಾನ-ವಿಜ್ಞಾನ ಗೀತೆಗಳು)
ವಿವಿಧ ಕವಿಗಳು.
**ಪುಟ : ೧೧೬** ಬೆಲೆ : ರೂ. ೨೫

**ಯಾಜ್ಞಸೇನಿಯ ಆತ್ಮಕಥನ** (ಕಾದಂಬರಿ)
*ಜಯದೇವ ಎಂ. ಗಾಯಕವಾಡ*
**ಪುಟ : ೧೧೮** ಬೆಲೆ ರೂ. ೮೦
**ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ**, ಸರಸ್ವತಿ ಗೋದಾಮ, ಗುಲ್ಬರ್ಗಾ - ೫೮೫ ೧೦೧

**ಇಂಚರ** (ಶ್ರೀ ವೆಂಕಟೇಶ ಗೋಡಖಿಂಡಿ ಅವರ ಪರಿಚಯ)
*ಡಾ॥ ಮಂದಾಕಿನಿ ಪುರೋಹಿತ*
**ಪುಟ : ೪೨** ಬೆಲೆ ರೂ. ೨೦
**ಡಾ॥ ಮಂದಾಕಿನಿ ಪುರೋಹಿತ**, ಹೈವೇ ಫೋನ್ಸ್, ಪಿ.ಬಿ.ರಸ್ತೆ, ಧಾರವಾಡ - ೫೮೦ ೦೦೪

**ಸ್ವಾತಂತ್ರ್ಯ ಸೂರ್ಯೋದಯ** (ಲೇಖನಗಳು)
*ಡಾ॥ ಸೂರ್ಯನಾಥ ಕಾಮತ್*
**ಪುಟ : ೮೦** ಬೆಲೆ ರೂ. ೨೫

**ಕನ್ನಡದಲ್ಲಿ ಇ-ಕಲಿಕೆ**
*ಡಾ॥ ಕೆ. ನರ್ಮದಾಂಬ*
**ಪುಟ : ೫೬** ಬೆಲೆ ರೂ. ೧೫

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಕನ್ನಡ ಸಾಹಿತ್ಯ ಪರಿಷತ್ತು**, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

**ಮೋಡ ಕಟ್ಟೇತಿ** (ಕವನ ಸಂಕಲನ)
*ಕೆ. ಸಿದ್ರಾಮ*
**ಪುಟ : ೪೬** ಬೆಲೆ ರೂ : ೩೦
**ಸ್ನೇಹವಾಹಿನಿ ಪ್ರಕಾಶನ**,
ಕೇರಾಫ್. ದೇವಕುಳೆ ರೈಲ್ವೆ ಸ್ಟೇಷನ್ ರಸ್ತೆ, ರಾಯಭಾಗ - ೫೯೧ ೩೧೭

**ಸ್ತ್ರೀ ಲೈಂಗಿಕ ವಿಜ್ಞಾನ**
*ಡಾ॥ ಪದ್ಮಿನಿ ಪ್ರಸಾದ್*
**ಪುಟ : ೬೪** ಬೆಲೆ : ರೂ. ೧೫

**ನಿಮ್ಮ ಮಾನಸಿಕ ಆರೋಗ್ಯವನ್ನು ಅಭಿವೃದ್ಧಿಪಡಿಸಿಕೊಳ್ಳುವುದು ಹೇಗೆ ?**
ಎಸ್. ವಿಶ್ವರೂಪಾಚಾರ್
**ಪುಟ : ೪೮** ಬೆಲೆ : ರೂ. ೧೫
**ವಿಶ್ವರೂಪ ಪ್ರಕಾಶನ**, ಬಿಲ್ಡಿಂಗ್ ನಂ. ೧೬೮, ೨ನೇ ಮಹಡಿ, ಕೆಎಚ್‌ಬಿ ಕಾಲೋನಿ, ಕೆಂಗೇರಿ ಉಪನಗರ, ಬೆಂಗಳೂರು - ೫೬೦ ೦೬೦
ಇದೇ ಲೇಖಕ-ಪ್ರಕಾಶಕರು ಲೈಂಗಿಕ ಚಿಕಿತ್ಸೆಗೆ ಸಂಬಂಧಿಸಿದ ಆರು ಕೃತಿಗಳನ್ನು ಹೊರತಂದಿದ್ದಾರೆ.

# ಮಾರ್ಕ್ಸ್‌ನ ಅಧ್ಯಯನ ಇಂದು ಅಗತ್ಯವೇ ?

ಡಾ|| ಬದರಿನಾಥ್ ರಾವ್

ಸಂಗ್ರಹಾನುವಾದ : ಜಿ. ರಾಮಕೃಷ್ಣ



ಇಂದಿನ ಅನೇಕ ವಿವಾದ ಮತ್ತು ಚರ್ಚೆಗಳ ನಡುವೆ ಸಾಮಾನ್ಯವಾಗಿ ಅಂಗೀಕಾರವಾಗಿದೆಯೆಂಬಂತೆ ಪ್ರತಿಪಾದಿಸಲಾಗುವ ಒಂದು ವಿಚಾರ ಮಾರ್ಕ್ಸ್‌ವಾದದ ಅಪ್ರಸ್ತುತತೆ. ದೊಡ್ಡ ಕಂಪೆನಿಗಳು ನಡೆಸುವ ಮಾಧ್ಯಮಗಳಲ್ಲಿ ಇದನ್ನು ಪದೇಪದೇ ಹೇಳುತ್ತಿರುತ್ತಾರೆ. ನಾವದನ್ನು ನಂಬಬೇಕೆಂದು ಅವರ ಅಪೇಕ್ಷೆ. ರಾಜಕೀಯ ಚರ್ಚೆಗಳಲ್ಲಿ ಧುರೀಣರೆಂಬ ಹೆಸರು ಗಳಿಸಿರುವವರ ಪೈಕಿ ಕೂಡ ಇಂತಹ ಪ್ರತಿಪಾದಕರು ಅನೇಕ ದೇಶಗಳಲ್ಲಿದ್ದಾರೆ. ಪ್ರಸಕ್ತ ಬೌದ್ಧಿಕ ಸನ್ನಿವೇಶದಲ್ಲಿ ಮಾರ್ಕ್ಸ್‌ವಾದವನ್ನು ತೆಗಳಿ ಅದರಲ್ಲಿವೆಯೆನ್ನಲಾದ ನ್ಯೂನತೆಗಳನ್ನು ಧಿಕ್ಕರಿಸಬೇಕಾದ್ದು ಪಾಂಡಿತ್ಯದ ಶಿಸ್ತು ಎಂಬ ನಂಬಿಕೆ ಕೆಲವರದು. ಹಾಗೆ ಮಾಡಲಲ್ಲದಿದ್ದರೆ ಮಾರ್ಕ್ಸ್‌ವಾದದ ಗೊಡವೆ ಬೇಕಿಲ್ಲವೆಂದು ಅವರ ತೀರ್ಮಾನ. ಹೇಳಿದ್ದೇ ಹೇಳೋ ಕಿಸಬಾಯಿದಾಸ ಎಂಬಂತೆ ಇವರೆಲ್ಲಾ ಅದೇ ಪಲ್ಲವಿ ಹಾಡುತ್ತಿರುತ್ತಾರೆ : ಮಾರ್ಕ್ಸ್‌ವಾದದಲ್ಲಿ ಅನೇಕ ಕೊರತೆಗಳಿವೆ, ಸೋವಿಯೆತ್ ಒಕ್ಕೂಟದಲ್ಲಿ ಮಾರ್ಕ್ಸ್‌ವಾದ ಸೋತಿತು, ಇತ್ಯಾದಿ. ಅವರ ಪ್ರಕಾರ ಎಲ್ಲೋ ಜುಜುಬಿ ದೇಶಗಳಾದ ಕ್ಯೂಬ ಮತ್ತು ಉತ್ತರ ಕೊರಿಯಾಗಳಲ್ಲಿ ಮಾತ್ರ ಅದಿನ್ನೂ ಜೀವಂತವಾಗಿದೆ. ಬಂಡವಾಳಶಾಹಿಯನ್ನು ಒಪ್ಪಿಕೊಳ್ಳುವ ಮೂಲಕ ಚೀಣಾ ಸಹ ಮಾರ್ಕ್ಸ್‌ವಾದವನ್ನು ಮೂಲೆಗುಂಪು ಮಾಡಿದೆಯೆಂದು ಇವರೆಲ್ಲ ಉಸಿರುತ್ತಿರುತ್ತಾರೆ.

ಇಷ್ಟೆಲ್ಲಾ ಅಬ್ಬರಗಳ ಪ್ರಚಾರದ ಮಧ್ಯೆ ನಿಜಕ್ಕೂ ಮಾರ್ಕ್ಸ್ ಅರ್ಥ ಕಳೆದುಕೊಂಡುಬಿಟ್ಟಿದ್ದಾನೆಂದು ಯಾರಾದರೂ 'ವಿದ್ವಾಂಸರು' ಭಾವಿಸಿದರೆ ಅವರನ್ನು ಕ್ಷಮಿಸಬಹುದೇನೋ! ಶೀತಲ ಯುದ್ಧದ ನಂತರದ ಯುವಪೀಳಿಗೆ (೧೯೯೦ರ ನಂತರ ಯೌವ್ವನಕ್ಕೆ ಬಂದವರು) ತಾವಾಯಿತು, ತಮ್ಮ ಹಣಸಂಪಾದನೆ ಆಯಿತು ಎಂಬ ಮನೋಭಾವ ತಳೆದಿರುವಾಗ, ಸೈದ್ಧಾಂತಿಕ ವಿಚಾರಗಳು ಅವರಿಗೆ ಅಪಥ್ಯ. ಅದೂ 'ಸೋತು ಹೋಗಿರುವ' ಸಿದ್ಧಾಂತದ ಬಗ್ಗೆ ತಲೆ ಕೆಡಿಸಿಕೊಳ್ಳುವುದು ಅವರಿಗೆ ಬೇಡ. 'ಸೋತು ಹೋಯಿತು' ಎಂಬ ತೀರ್ಮಾನ ಸ್ವೀಕರಿಸಲು ಅವರು ಸ್ವಂತದ ವಿಶ್ಲೇಷಣೆಗಳಲ್ಲಿ ತೊಡಗುವುದೂ ಇಲ್ಲ. – ಈ ಹಿನ್ನೆಲೆಯಲ್ಲಿ ''ಮಾರ್ಕ್ಸ್‌ನನ್ನು ಈಗಲೂ ಓದಬೇಕೇಕೆ'' ಎಂಬ ಪ್ರಶ್ನೆಗೆ ಮಹತ್ವವೇನಾದರೂ ಉಂಟೆ ಎನ್ನುವವರೂ ಇರಲು ಸಾಕು. ಅಂಥದರಲ್ಲೂ ಈ ವಿಚಾರದಲ್ಲಿ ಆಸಕ್ತಿ ತಳೆಯುವವರಿರುತ್ತಾರೆ. ಇಷ್ಟೊಂದು ಭಯಂಕರವಾಗಿ ಅವನನ್ನು ವಿರೋಧ ಮಾಡುತ್ತಲೇ ಬಂದಿದ್ದಾರೆಂದರೆ ಅವನಲ್ಲೇನೋ ಸತ್ವವಿರಬಹುದೇ ಎಂಬ ಕುತೂಹಲ ಅಸಹಜವೇನಲ್ಲ. ಅಲ್ಲದೆ, ಮಾರ್ಕ್ಸ್‌ವಾದದ ವಿಶ್ವದೃಷ್ಟಿಯಿಂದ ಪ್ರೇರಿತರಾದ ಸಾವಿರಾರು ಪ್ರತಿಭೆಗಳು ಇತಿಹಾಸದಲ್ಲಿ ಕಂಗೊಳಿಸು ತ್ತಿರುವಾಗ ಅದನ್ನು ಅಷ್ಟು ನಿಕೃಷ್ಟವೆಂದು ತಳ್ಳಿಹಾಕಬಹುದೇ ಎಂಬ ಪ್ರಶ್ನೆಯೂ ಅವರ ಮುಂದಿದೆ. ಇಂದಿಗೂ ಅದರ ಮೂಸೆಯಲ್ಲಿ ನಮಗೆ ಉತ್ತರ ಸಿಗಬಹುದೇನೋ ಎಂಬ ಆಶಯ ಇದರಿಂದ ಮೂಡುತ್ತದೆ. ಮಾರ್ಕ್ಸ್‌ವಾದದಲ್ಲಿ ಜೀವಂತವಾಗಿರುವು ದೇನು ಮತ್ತು ಪೊಳ್ಳಾಗಿ ಕಾಣಿಸುವುದೇನು ಎಂಬ ಪ್ರಶ್ನೆಯಲ್ಲಿ ಆಸಕ್ತಿ ಇರುವವರಿಗೆ ಜೋನಥಾನ್ ವುಲ್ಫ್‌ನ ಪುಸ್ತಕ ಬೇಕಾದಷ್ಟು ಸಾಮಗ್ರಿ ಒದಗಿಸುತ್ತದೆ.

ತತ್ತ್ವಶಾಸ್ತ್ರ ಕುರಿತು ಅನೇಕ ಗ್ರಂಥಗಳನ್ನು ಬರೆದಿರುವ ವುಲ್ಫ್ ಈ ಗ್ರಂಥವನ್ನು ರಚಿಸಿದ್ದು ತರಗತಿಗಳಲ್ಲಿ ನೀಡಿದ್ದ ಉಪನ್ಯಾಸಗಳನ್ನು ಆಧರಿಸಿ. ಅವರ ಶಿಸ್ತಿನಲ್ಲಿ ಯಾವುದೇ ಪಕ್ಷ ವಹಿಸುವ ಪ್ರವೃತ್ತಿಗೆ ಅವಕಾಶವಿಲ್ಲ. ಮಾರ್ಕ್ಸ್‌ರ ಸಾಮಾಜಿಕ ದೃಷ್ಟಿ ಹಾಗೂ ಬಹುಮುಖ ಬೌದ್ಧಿಕ ಕೊಡುಗೆಗಳನ್ನು ನಿರೂಪಿಸುವಾಗ ಲೇಖಕರಿಗೆ ಇದು ಅಮೂಲ್ಯ ಸಾಧನವಾಗುತ್ತದೆ. ಮೊದಲೆರಡು ಅಧ್ಯಾಯಗಳಲ್ಲಿ ವಿವಿಧ ವಿಷಯಗಳ ಬಗ್ಗೆ ಮಾರ್ಕ್ಸ್‌ರ ಚಿಂತನೆಯನ್ನು ಕ್ರೋಢೀಕರಿಸಲಾಗಿದೆ: ಉದಾಹರಣೆಗೆ, ಮತಧರ್ಮ, ಚಾರಿತ್ರಿಕ ಭೌತವಾದ, ದುಡಿಮೆ ಮತ್ತು ಅನಾಥ ಪ್ರಜ್ಞೆ, ಹಣ ಮತ್ತು ಸಾಲ, ಉದಾರವಾದಿತ್ವ, ವಿಮೋಚನೆ, ಇತ್ಯಾದಿ. ಈ ಪ್ರತಿಯೊಂದು ವಿಷಯದ ಬಗೆಗೂ ಮಾರ್ಕ್ಸ್‌ರ ಸಮಕಾಲೀನ ಚಿಂತನೆಗಳನ್ನು ಹಿನ್ನೆಲೆಯಾಗಿ ಕೊಡಲಾಗಿದೆ ಮತ್ತು ಅವನ್ನು ಮಾರ್ಕ್ಸ್ ಹೇಗೆ ತನ್ನ ಅನನ್ಯ ರೀತಿಯಲ್ಲಿ ಹಿಗ್ಗಿಸಿದನೆಂಬುದನ್ನು ಸೂಕ್ಷ್ಮವಾಗಿ ವಿವರಿಸಲಾಗಿದೆ. ತನ್ನ ಕಾಲದ ಬೌದ್ಧಿಕ ದಿಗಂತವನ್ನು ವಿಸ್ತರಿಸಲು ಮಾರ್ಕ್ಸ್ ಸಮರ್ಥನಾದದ್ದು ಅಂದಿನ ಎಲ್ಲ ಚರ್ಚೆಗಳಿಗೂ ಒಂದು ವಿಮರ್ಶಾತ್ಮಕ ನೆಲೆಯನ್ನು ಒದಗಿಸುವುದರಿಂದ ಮತ್ತು ಅದರಿಂದ ಮುಂದಕ್ಕೆ ಜಿಗಿಯುವುದರಿಂದ.

ಮಾರ್ಕ್ಸ್‌ರ ಬರಹಗಳಲ್ಲಿದ್ದಂತೆ ವುಲ್ಫ್ ಪ್ರತಿಪಾದನೆಯಲ್ಲೂ ಒಂದು ಬೌದ್ಧಿಕ ಪ್ರಖರತೆ ಇದೆಯಾದರೂ ಅದು ಎಲ್ಲರಿಗೂ ಎಟಕುವಂತಹ ಶೈಲಿಯಲ್ಲಿ ಬರೆಯಲಾಗಿದೆ. ತರ್ಕ-ಪ್ರತಿತರ್ಕ ಎಂದರೆ ಸಾಮಾನ್ಯವಾಗಿ ಆಲಂಕಾರಿಕ ವಾಗ್ಝರಿ, ಬೌದ್ಧಿಕ ಕಸರತ್ತು ಮತ್ತು ಕ್ಲಿಷ್ಟ ತಾರ್ಕಿಕ ಪರಿಭಾಷೆ ಇರುತ್ತದೆ. ಅಂತಹ ಪದ್ಧತಿಗೆ ಭಿನ್ನವಾಗಿ ವುಲ್ಫ್ ಸರಳವಾಗಿ ಮಾರ್ಕ್ಸ್‌ರ ಕೃತಿಗಳ ಪರಾಮರ್ಶೆ ನಡೆಸಿದ್ದಾನೆ. ಹೊಗಳಲು ಅಂಜದ ಮತ್ತು ಟೀಕಿಸಲು ಹಿಂಜರಿಯದ ವೈಖರಿ ಈ ಲೇಖಕನದು. ಮಾರ್ಕ್ಸ್‌ರ ಕೆಲವು ಪ್ರಮುಖ ಸಿದ್ಧಾಂತಗಳನ್ನು ಅತಿಸರಳೀಕೃತವೆಂದೋ ಅಪ್ರಮಾಣಿತವೆಂದೋ ತಳ್ಳಿಹಾಕಲು ಸಿದ್ಧನಿರುವಂತೆ ಬಂಡವಾಳಶಾಹಿಯ ಹರಿತವಾದ ವಿಶ್ಲೇಷಣೆಗಳನ್ನು ಮಾರ್ಕ್ಸ್‌ರ ಹೆಗ್ಗಳಿಕೆಗಳೆಂದು ಗುರುತಿಸಲು ವುಲ್ಫ್ ಸಿದ್ಧನಿದ್ದಾನೆ. ''ಇಂದಿನ ಬಂಡವಾಳಶಾಹಿ ವಿರೋಧದ ಚಳುವಳಿಯ ಪಿತಾಮಹ ಮಾರ್ಕ್ಸ್'' ಎಂದು ಸಹ ಒಂದೆಡೆ ಉಲ್ಲೇಖಿಸಲಾಗಿದೆ. ಮಾರ್ಕ್ಸ್‌ವಾದದ ಗತಿತಾರ್ಕಿಕ ಪದ್ಧತಿಯಿಂದ ಮೂಡಿಬರುವ ವಿಚಾರಗಳನ್ನು ವಿಮರ್ಶಿಸುವ ಮುನ್ನ ಮಾರ್ಕ್ಸ್‌ರ ಕೃತಿಗಳ ಅಧ್ಯಯನವು ಹೇಗೆ ಫಲಪ್ರದವಾಗುತ್ತದೆಂಬುದನ್ನು ವುಲ್ಫ್ ವಿವರಿಸಿದ್ದಾನೆ. ಎಲ್ಲರಿಗೂ ತಿಳಿದಿರುವಂತೆ ಮಾರ್ಕ್ಸ್ ಒಬ್ಬ ಬಹುಶ್ರುತ, ಬೌದ್ಧಿಕ ದಿಗ್ಗಜ; ಆತನು ಅಧ್ಯಯನ ಮಾಡದೆ ಬಿಟ್ಟ ಕ್ಷೇತ್ರಗಳು ಬಹಳ ಕಡಿಮೆ. ಇನ್ನೂ ಹುಡುಗನಿರುವಾಗಲೇ ಆತ ಕಾವ್ಯಗಳನ್ನು ಆಳವಾಗಿ ವ್ಯಾಸಂಗ ಮಾಡಿದ್ದ. ಬಹುಮಟ್ಟಿಗೆ ಎಲ್ಲ ಶ್ರೇಷ್ಠ ಸಾಹಿತ್ಯ ಕೃತಿಗಳನ್ನೂ ಪರಿಚಯಿಸಿಕೊಂಡಿದ್ದ. ಜೊತೆಗೆ ತತ್ತ್ವಶಾಸ್ತ್ರ, ಅರ್ಥಶಾಸ್ತ್ರ, ಕಾನೂನು, ಮತಧರ್ಮ ಮುಂತಾದ ಕ್ಷೇತ್ರಗಳಲ್ಲಿ ಪ್ರವೇಶ ಪಡೆದಿದ್ದ; ಯುರೋಪಿನ ಅನೇಕ ಭಾಷೆಗಳನ್ನವನು ಕಲಿತಿದ್ದ. ತನ್ನ ೧೯ನೇ ವಯಸ್ಸಿನಲ್ಲಿ ಮಾರ್ಕ್ಸ್ ಬರ್ಲಿನ್ನಿನಲ್ಲಿ ಕಾನೂನು ವಿದ್ಯಾರ್ಥಿ. ತನ್ನ ತಂದೆಗೆ ಬರೆದ ಒಂದು ಪತ್ರದಲ್ಲಿ ತಾನು ವರ್ಷಾರ್ಧದಲ್ಲಿ ಏನೇನು ಕಲಿತ, ಏನೇನು ಬರೆದ ಎಂಬುದನ್ನು ತಿಳಿಸುತ್ತಾ ಹೇಳುತ್ತಾನೆ : ಕಾವ್ಯ, ಗ್ರೀಕ್-ಲ್ಯಾಟಿನ್‌ಗಳಿಂದ ಭಾಷಾಂತರ, ಕಾನೂನು ಕುರಿತಂತೆ ಮುನ್ನೂರು ಪುಟಗಳ ಒಂದು ಗ್ರಂಥದ ರಚನೆ, ಕಲೆ-ವಿಜ್ಞಾನಗಳ ಸಂಗಮವನ್ನು ಕುರಿತ ಒಂದು ಸಂವಾದ, ಹೆಗೆಲ್‌ನ ಎಲ್ಲ ಗ್ರಂಥಗಳ ಅಧ್ಯಯನ, ಇತ್ಯಾದಿ – ಈ ವರ್ಷಾರ್ಧದ ಸಾಧನೆ, ಎಂದು. ಪತ್ರದ ಕಡೆಯಲ್ಲಿ ಆತ ಹೇಳುವುದಿದು: ''ಅಪ್ಪ, ನನ್ನ ಅಸ್ಫುಟ ಕೈಬರಹಕ್ಕಾಗಿ ನನ್ನನ್ನು ಕ್ಷಮಿಸು. ಈಗಾಗಲೇ ಬೆಳಗಿನ ಜಾವ ನಾಲ್ಕು ಗಂಟೆಯಾಗಿದೆ : ದೀಪ ಆರಿ ಹೋಗುತ್ತಿದೆ, ಕಣ್ಣುಗಳು ಎಳೆಯುತ್ತಿವೆ.''

ಬೌದ್ಧಿಕ ಸಾಮರ್ಥ್ಯದ ದೃಷ್ಟಿಯಿಂದ ಮಾರ್ಕ್ಸ್ ಒಬ್ಬ ವ್ಯಕ್ತಿಯಾಗಿರಲಿಲ್ಲ. ಅವನೊಂದು ವಿಸ್ಮಯವಾಗಿದ್ದ. ತನ್ನ ಕಾಲದ ಪಾಂಡಿತ್ಯದ ಪರಂಪರೆ ಆತನಲ್ಲಿ ಘನೀಭೂತವಾಗಿತ್ತು. ವಿದ್ವತ್ತು ಎಂದರೇನೆಂಬುದಕ್ಕೆ ಅವನೊಬ್ಬ ಜೀವಂತ ಮಾದರಿಯಾಗಿದ್ದ. ಆತನ ಅಭಿಪ್ರಾಯಗಳನ್ನು

ಮಾನ್ಯ ಮಾಡದೆಯೂ ಅವನ ಕೃತಿಗಳನ್ನು ಅಭ್ಯಾಸ ಮಾಡುವುದು ಸಾಧ್ಯವಿದೆ. ಅಂತಹ ಪ್ರತಿಭಾವಂತನ ಕೃತಿಗಳನ್ನು ಯಾರು ತಾನೆ ಮೆಚ್ಚದಿರಲು ಶಕ್ಯ! ಅವನ ಬರಹಗಳಲ್ಲಿ ಎದ್ದುಕಾಣುವ ತರ್ಕಶುದ್ಧಿ ಯಾರನ್ನೇ ಆಗಲಿ ದಂಗುಬಡಿಸುತ್ತದೆ. ಬುದ್ಧಿಮತ್ತೆಗೆ ಆತನ ಬರಹ ಒಂದು ಸವಾಲು. ಯೋಗ್ಯ ಬುದ್ಧಿಜೀವಿಯಾದರೆ ಆ ಸವಾಲನ್ನು ಸ್ವೀಕರಿಸಿಯೇ ತೀರುತ್ತಾನೆ.

ಭಾವಗಳ ಉಗಮ ಮತ್ತು ವಿಕಾಸದಲ್ಲಿ ಆಸಕ್ತಿ ಇರುವವರಾರೂ ಮಾರ್ಕ್ಸ್‌ನನ್ನು ಉಪೇಕ್ಷೆ ಮಾಡಲಾರರು. ಸಮಾಜ ವಿಜ್ಞಾನದ ಯಾವೊಂದು ಶಾಖೆಯೂ ಅವನ ವಿಮರ್ಶಾತ್ಮಕ ಕೊಡುಗೆಗಳಿಂದ ಸಮೃದ್ಧವಾಗದೆ ಉಳಿದಿಲ್ಲ. ಆತನು ಪ್ರವೇಶಿಸಿದ ಪ್ರತಿಯೊಂದು ಕ್ಷೇತ್ರದಲ್ಲೂ ಏನಾದರೊಂದು ಪ್ರಮುಖ ಹೆಜ್ಜೆಯನ್ನಿರಿಸಿರುವುದು ಅವನ ವೈಶಿಷ್ಟ್ಯ. ಸಿದ್ಧಾಂತ ಮತ್ತು ಆಚರಣೆಗಳೆರಡರಲ್ಲೂ ಅವನ ಪ್ರಭಾವ ಅನ್ಯಾದೃಶವಾದುದೆಂದು ವುಲ್ಫ್ ಹೇಳುತ್ತಾನೆ (ಪು. ೧೦೦). ಹಿಂದಿನವರು ನೀಡಿದ ಜ್ಞಾನವಿಶೇಷವೆಂದು ಮಾರ್ಕ್ಸ್ ಯಾವುದನ್ನೂ ಪ್ರಶ್ನಿಸದೆ ಬಿಡಲಿಲ್ಲ; ಆದರೆ ಅದಕ್ಕೆ ತನ್ನದೇ ಆದ ಮೆರುಗನ್ನು ನೀಡಿ ಬೆಳೆಸದೆಯೂ ಇರಲಿಲ್ಲ. ತಾನು ಗುರುತಿಸಿದ ಸಮಸ್ಯೆಗಳಿಗೆ ವಿಶಿಷ್ಟ ಪರಿಹಾರಗಳನ್ನು ಸೂಚಿಸಿರುವುದರಿಂದ ಮಾರ್ಕ್ಸ್‌ವಾದದ ಕಟ್ಟಾ ವಿರೋಧಿಗಳು ಸಹ ಮಾರ್ಕ್ಸ್‌ನ ಚಿಂತನೆಯ ಪರಿಚಯ ಮಾಡಿಕೊಳ್ಳುವುದು ಅನಿವಾರ್ಯ.

ಅವನು ಅಸಾಧಾರಣವಾದ ಚಿಂತನೆ ನಡೆಸಿದ ಒಂದು ಶಾಖೆಯೆಂದರೆ ಮತಧರ್ಮ. ಆ ಬಗ್ಗೆ ಹೇಗೆಲ್‌ನ ಸಿದ್ಧಾಂತಗಳನ್ನು ತಳ್ಳಿಹಾಕಿ ಫಾವರ್‌ಬಾಕ್‌ನ ಹಿಗ್ಗಾಮುಗ್ಗಾ ಎಳೆದಾಡಿದ್ದಾರೆ ಮತ್ತು ಅದು ಸಂಕುಚಿತ ದೃಷ್ಟಿಯೆಂದು ಬಣ್ಣಿಸಿದ್ದಾರೆ. ವರ್ಗ ವಿಭಜನೆ ಇರುವ ಸಮಾಜಗಳಲ್ಲಿ ದುಡಿಯುವವರನ್ನು ಹತೋಟಿಯಲ್ಲಿಟ್ಟುಕೊಳ್ಳಲು ಧರ್ಮವು ಒಂದು ಅಸ್ತ್ರವಾಗುತ್ತದೆಂಬ ಅವನ ಅಭಿಪ್ರಾಯವನ್ನು ಮಾನ್ಯ ಮಾಡದ ವಿಮರ್ಶಕರೂ ಇದ್ದಾರೆ. ಇತರ ಕೆಲವರಂತೆ ವುಲ್ಫ್ ಸಹ ಬಂಡವಾಳಿಗರ ತಂತ್ರಗಳಿಗೆ ಮೋಸಹೋದ ಜನ ದುಡಿಯುವ ವರ್ಗದವರು ಎಂಬ ಮಾರ್ಕ್ಸ್‌ನ ಮಾತನ್ನು ಒಪ್ಪುವುದಿಲ್ಲ. ಮಾನವ ಮೂಲತಃ ಧರ್ಮವನ್ನೇಕೆ ಹುಟ್ಟುಹಾಕಿದ ಎಂಬ ಬಗ್ಗೆ ವುಲ್ಫ್ ಮಾರ್ಕ್ಸ್‌ನ ಅಭಿಪ್ರಾಯಗಳನ್ನು ತೀವ್ರವಾಗಿ ವಿರೋಧಿಸುತ್ತಾನೆ. ಮಾನವ ದೇವರನ್ನು ಸೃಷ್ಟಿಸಿದ ಎಂಬ ಫಾವರ್‌ಬಾಕ್‌ನ ಮಾತು ಸರಿ, ಆದರೆ ಅದು ಸಾಂತ್ವನ ಪಡೆಯುವ ಉದ್ದೇಶದಿಂದಲ್ಲ ಎನ್ನುತ್ತಾನೆ ವುಲ್ಫ್. ಜಗತ್ತಿನ ವಿಸ್ಮಯವನ್ನು ಅರ್ಥೈಸುವ ಪ್ರಯತ್ನ ಅದು ಎನ್ನುವ ಈತ ಮಾರ್ಕ್ಸ್ ಗುರುತಿಸದೆ ಬಿಟ್ಟ ಇನ್ನೂ ಬೇರೆ ಅಂಶಗಳೂ ಧರ್ಮದ ಉಗಮದಲ್ಲಿರಬೇಕು ಎಂದು ತರ್ಕಿಸುತ್ತಾನೆ.

ಧರ್ಮದ ಉಗಮದ ಬಗ್ಗೆ ಎಲ್ಲವನ್ನೂ ಮಾರ್ಕ್ಸ್ ವಿಶ್ಲೇಷಣೆ ಮಾಡಿದ್ದಾರೆ ಎನ್ನಲಾಗದು. ಆದರೆ ನಶ್ವರತೆ, ದುರ್ಲಭ ಮತ್ತು ಆಗಾಗಿನ ಅವಶ್ಯಕತೆಗಳ ಪೂರೈಕೆ ಮುಂತಾದ ಪ್ರಶ್ನೆಗಳು ಕಾಡುವಾಗ ಧರ್ಮವು ಅದಕ್ಕೆ ಬಲವಾದ ಸಿದ್ಧೌಷಧಿಯಾಗಿ ಕೆಲಸ ಮಾಡುತ್ತದೆಂಬುದೂ ಅಷ್ಟೇ ನಿಜ. ಇಂದಿನ ಜಾಗತಿಕ ಸನ್ನಿವೇಶದಲ್ಲಿ ಧರ್ಮದ ಬಳಕೆ ಅತಿ ಹೆಚ್ಚಾಗಿ ಕಂಡುಬರುವುದು ಅಭದ್ರತೆ, ಬಡತನ ಮತ್ತು ಕಾರ್ಪಣ್ಯ ದಟ್ಟವಾಗಿರುವ ದೇಶಗಳಲ್ಲಿ ಎಂಬುದನ್ನು ಮನಗಾಣಬೇಕು. ಅನಾಥ ಪ್ರಜ್ಞೆಗೂ ಧರ್ಮಕ್ಕೂ ನಿಕಟ ಸಂಬಂಧವಿದೆಯೆಂದು ಗುರುತಿಸಿದ್ದು ಮಾರ್ಕ್ಸ್‌ರ ಪ್ರತಿಭೆ.

**ಇತಿಹಾಸದ ಅಂತ್ಯವಾಗಿಹೋಗಿದೆಯೆಂದು ಫುಕುಯಾಮ ಹೇಳಿ ಒಂದು ದಶಕ ಕಳೆದಿದೆ. ಅವನ ಪ್ರಕಾರ ಮಾರ್ಕ್ಸ್‌ವಾದ ಅಳಿಸಿ ಹೋಯಿತು. ಇವನನ್ನು ಅನುಸರಿಸಿ ಇನ್ನಿತರ ಹಲವರು ಆ ಭಾವನೆಗೆ ಇನ್ನಷ್ಟು ಒರಗುದಿಂಬು ಒದಗಿಸಿದ್ದಾರೆ. ಒಂದಂತೂ ಸ್ಪಷ್ಟ: ಅದೇನೆಂದರೆ, ಇತಿಹಾಸ ನಿರ್ಮಿಸುವವರು ಮಾರ್ಕ್ಸ್‌ವಾದಿಗಳು, ಎಂಬುದು. ಇಲ್ಲದಿದ್ದರೆ, ಅವರ ಅಳಿವಿನಿಂದ ಇತಿಹಾಸವೇಕೆ ಅಂತ್ಯವಾಗಬೇಕು! ೧೮೪೮ರಿಂದ ಪ್ರತಿ ದಶಕದಲ್ಲೂ ಮಾರ್ಕ್ಸ್‌ವಾದ ಸಾಯುತ್ತಲೇ ಬಂದಿದೆ, ನಮ್ಮ ಈ ವಿದ್ವಾಂಸರ ಪುಸ್ತಕಗಳಲ್ಲಿ; ಆದರೆ ಇನ್ನೂ ಅದನ್ನವರು ಸಾಯಿಸುತ್ತಲೇ ಇದ್ದಾರೆ! ೨೦೦೨ರಲ್ಲಿ ಜೋನಥಾನ್ ವುಲ್ಫ್ ಈ ಇಡೀ ಪ್ರಕರಣವನ್ನು ಮತ್ತೆ ಚರ್ಚೆಗೆ ಎತ್ತಿಕೊಂಡ. ಆತ ಲಂಡನ್ನಿನ ವಿಶ್ವವಿದ್ಯಾನಿಲಯದಲ್ಲಿ ತತ್ತ್ವಶಾಸ್ತ್ರ ಪ್ರಾಧ್ಯಾಪಕ. ಆತನ ಗ್ರಂಥವನ್ನು ಪ್ರಕಾಶಿಸಿದ್ದು ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್. ಅದನ್ನು ಪರಿಚಯಿಸಿ ವಿಮರ್ಶಿಸಿರುವವರು ಡಾ|| ಕೆ. ಬದರಿನಾಥ್ ರಾವ್. ಅಮೇರಿಕಾದ ಮಿಚಿಗನ್ ರಾಜ್ಯದಲ್ಲಿರುವ ಫ್ಲಿಂಟ್‌ನ ಕೆಟರಿಂಗ್ ವಿಶ್ವವಿದ್ಯಾನಿಲಯದಲ್ಲಿ ಇವರು ಸಮಾಜಶಾಸ್ತ್ರ ಹಾಗೂ ಏಷ್ಯಾ ಅಧ್ಯಯನ ವಿಭಾಗದಲ್ಲಿ ಉಪಪ್ರಾಧ್ಯಾಪಕರಾಗಿದ್ದಾರೆ.**

ಅಭಿಪ್ರಾಯಗಳನ್ನು ತಕ್ಕಮಟ್ಟಿಗೆ ಪರಿಷ್ಕರಿಸಿದ. ಹೇಗೆಲ್ ಪ್ರಕಾರ ದೇವರು ಭುವಿಯನ್ನು ಸೃಷ್ಟಿಸಿದ; ಏಕೆಂದರೆ, ಭುವಿಯಿಲ್ಲದೆ ದೇವರು ದೇವರಾಗಲಾರ. ಫಾವರ್‌ಬಾಕ್‌ನ ಅಭಿಪ್ರಾಯದಲ್ಲಿ ಮಾನವ ದೇವರನ್ನು ತನ್ನ ಪ್ರತಿಮೆ ಎಂಬಂತೆ ಸೃಷ್ಟಿಸಿಕೊಂಡ. ಮುಂದುವರಿದು ಮತಧರ್ಮವನ್ನು ಬಿಸುಟು ಕ್ರಾಂತಿಕಾರಿ ಮಾನವತೆಯನ್ನು ಅವಲಂಬಿಸುವಂತೆ ಅವನು ಕರೆ ನೀಡಿದ. ಇದಕ್ಕೆ ಒತ್ತುಕೊಟ್ಟ ಮಾರ್ಕ್ಸ್ ಒಂದು ಹೆಜ್ಜೆ ಮುಂದೆ ಹೋಗಿ ಹೇಳಿದ, ಮಾನವ ತನ್ನ ದುಗುಡಗಳನ್ನು ಕಡಿಮೆ ಮಾಡಿಕೊಂಡು, ಸಾಂತ್ವನ ಹೊಂದಲು ದೇವರು ಮತ್ತು ಮತಧರ್ಮಗಳೆರಡನ್ನೂ ಸೃಷ್ಟಿಸಿಕೊಂಡ, ಎಂದು. ವುಲ್ಫ್ ಪ್ರಸ್ತುತ ಪಡಿಸಿರುವಂತೆ ಮಾರ್ಕ್ಸ್‌ನ ಪ್ರಕಾರ ಮನುಷ್ಯನ ದೈನ್ಯತೆಗೆ ಅನಾಥ ಪ್ರಜ್ಞೆಯೇ ಕಾರಣ ಮತ್ತು ಮತಧರ್ಮ ಅದಕ್ಕೊಂದು ತಾತ್ಕಾಲಿಕ ಪರಿಹಾರ. ಸಾಮ್ಯವಾದಿ ಸಮಾಜ ರಚನೆಗೊಂಡಾಗ ಅನಾಥಪ್ರಜ್ಞೆಗೆ ಅವಕಾಶವಿರುವುದಿಲ್ಲವಾದ್ದರಿಂದ ಮತ ಧರ್ಮದ ಅವಶ್ಯಕತೆಯೂ ಇರುವುದಿಲ್ಲ. ಫಾವರ್ ಬಾಕ್‌ನ ಚಿಂತನೆಯನ್ನು ಮಾರ್ಕ್ಸ್ ಮೇಲಿನ ಸ್ತರಕ್ಕೆ ಒಯ್ದಿರುವುದು ಹೀಗೆ. ಧರ್ಮದ ಬಗೆಗಿನ ಮಾರ್ಕ್ಸ್ ಅಭಿಪ್ರಾಯಗಳು ಅಪಾಯಕರವೆಂದು ಭಾವಿಸಿದವರು ಅದಕ್ಕೆ ಮನಬಂದಂತೆ ಟೀಕಾಪ್ರಹಾರ ಮಾಡಿದ್ದಾರೆ. ಸಮುದಾಯಕ್ಕೆ ಮತಧರ್ಮವು ಅಫೀಮಿನಂತೆ ಎಂಬ ಅವನ ಮಾತನ್ನು ವಿಮರ್ಶಕರು



ಮಾರ್ಕ್ಸ್ ತಮ್ಮ ಬರಹಗಳಲ್ಲಿ ಮೊದಲಿನಿಂದಲೂ ಒತ್ತುಕೊಟ್ಟ ಒಂದು ಪ್ರಮುಖ ಅಂಶವೆಂದರೆ ದುಡಿಮೆ ಅಥವಾ ಉತ್ಪಾದನಾ ಚಟುವಟಿಕೆಯು ಜಗತ್ತಿನಲ್ಲಿ ಮಾನವನ ಆದ್ಯ ಕ್ರಿಯೆ ಎಂಬುದು. ದುಡಿಮೆಯಿಂದ ದೂರವಾಗುವುದು ವ್ಯಸನಕ್ಕೆ ಹಾದಿ ಮಾಡಿಕೊಡುತ್ತದೆ ಮತ್ತು ಅದರಿಂದ ಅನಾಥಪ್ರಜ್ಞೆ ಮೂಡುತ್ತದೆ. ಮತಧರ್ಮದ ಆವಿಷ್ಕಾರಕ್ಕೆ ಅದೂ ಒಂದು ಹಿನ್ನೆಲೆ. ನಾಲ್ಕು ವಿಧದ ಅನಾಥಪ್ರಜ್ಞೆ ಅಥವಾ ಪರಕೀಯತೆಯನ್ನು ಮಾರ್ಕ್ಸ್ ಹೆಸರಿಸುತ್ತಾರೆ : ಉತ್ಪಾದಿತ ವಸ್ತುವಿನಿಂದ, ಉತ್ಪಾದನಾ ಕ್ರಿಯೆಯಿಂದ, ನಮ್ಮ ಆತ್ಯಂತಿಕ ಒಡನಾಡಿಗಳಿಂದ ಮತ್ತು ಇತರೆಲ್ಲಾ ಮಾನವ ಜೀವಿಗಳಿಂದ. ಧಾರ್ಮಿಕ ಪರಕೀಯತೆಯು ಮನುಷ್ಯನ ಅತಿಮುಖ್ಯ ಲಕ್ಷಣವನ್ನು ಹೊಸಕಿಹಾಕಿ ಅವನ ಇರುವಿಕೆಯನ್ನೇ ಅತಂತ್ರವಾಗಿಸುತ್ತದೆ. ಆಗ ತನ್ನ ಸಹಜ ಸ್ವಭಾವಗಳನ್ನು ಪ್ರಕಟಿಸುವುದರಲ್ಲಿ ಕೂಡ ಮಾನವ ಸೋಲುತ್ತಾನೆ; ಬದಲಾಗಿ ಅವನ್ನು ಪರಕೀಯ ಸ್ವರೂಪದಲ್ಲಿ ಆರಾಧಿಸಲು ತೊಡಗುತ್ತಾನೆ.

ಮಾರ್ಕ್ಸ್ ಬಗ್ಗೆ ಯಾರು ಏನೇ ಹೇಳಲಿ, ಪರಕೀಯತೆಯ ಅವರ ಸಿದ್ಧಾಂತಕ್ಕೆ ಎಷ್ಟು ಆಳ - ಹರಹು ಇದೆಯೆಂಬುದನ್ನು ಯಾರೂ ತಳ್ಳಿಹಾಕುವಂತಿಲ್ಲ. ಪರಕೀಯ ಭಾವವು ಬಂಡವಾಳಶಾಹಿಯಡಿಯಲ್ಲಿ ಅತ್ಯಂತ ಗಾಢವಾಗಿರುತ್ತದೆಯಾದ್ದರಿಂದ ಮತಧರ್ಮದ ಪ್ರಭಾವವೂ ಅಷ್ಟೇ ವ್ಯಾಪಕವಾಗಿರುತ್ತದೆ. ಯಾವ ಸಮಾಜದಲ್ಲಿ

ಬಂಡವಾಳಶಾಹಿಯು ತನ್ನ ಹಿಡಿತಕ್ಕೆ ಬಂದವರನ್ನು ನುಂಗಿಹಾಕುವ ಮತ್ತು ನಾಶಗೊಳಿಸುವ ಮಟ್ಟವನ್ನು ಮುಟ್ಟುತ್ತದೋ ಅಲ್ಲಿ ಧರ್ಮವು ಜಡ್ಡುಗಟ್ಟಿದ ಮೌಢ್ಯ ಹಾಗೂ ಮತಾಂಧತೆಯ ಆಗರವಾಗುತ್ತದೆ. ಸದ್ಯದ ಭಾರತದಲ್ಲಿ ಹಿಂದುತ್ವದ ಹುಂಕಾರವು ಆ ಸ್ವರೂಪದ್ದು. ಅನೇಕ ಅರಬ್ ಮತ್ತು ಮುಸಲ್ಮಾನ ದೇಶಗಳಲ್ಲಿ ಇಸ್ಲಾಂ ಸಹ ಅಂಥದೇ ರೂಪವನ್ನು ತಾಳಿದೆ. ಅಮೆರಿಕದಲ್ಲಿ ತೀವ್ರ ಧಾರ್ಮಿಕ ಜಡ್ಡುತನದ ಪ್ರಸಂಗಗಳು ಹೆಚ್ಚುತ್ತಿರುವುದನ್ನೂ ಗಮನಿಸಬೇಕು. ಇವೆಲ್ಲಾ ಮತಧರ್ಮದ ಬಗ್ಗೆ ಮಾರ್ಕ್ಸ್ ನೀಡಿದ ವಿಶ್ಲೇಷಣೆಗಳಿಗೆ ಅನುಗುಣವಾದ ಪ್ರಕ್ರಿಯೆಗಳೇ ಆಗಿವೆ.

ಇದೆಲ್ಲವನ್ನೂ ಸಮರ್ಥವಾಗಿ ವಿವರಿಸಿರುವ ವುಲ್ಫ್ ಮಾರ್ಕ್ಸ್‌ರ ಅನಾಥಪ್ರಜ್ಞೆಯ ವಿವರಣೆಗಳಲ್ಲಿ ಕೆಲವು ಲೋಪಗಳನ್ನು ಕಾಣುತ್ತಾನೆ. ಉದಾಹರಣೆಗೆ, ಆತ ಉಲ್ಲೇಖಿಸುವ ಒಂದು ಅಂಶ ಹೀಗಿದೆ : ಪರಕೀಯತೆಯ ಪ್ರಜ್ಞೆಯು ಎಲ್ಲಾ ಯಾಂತ್ರಿಕ ಕ್ರಿಯೆಗಳ ಸಂದರ್ಭದಲ್ಲೂ ಹುಟ್ಟಿಕೊಳ್ಳುತ್ತದೆಯಾದ್ದರಿಂದ ಸಾಮ್ಯವಾದಿ ಸಮಾಜದಲ್ಲಿ ಆ ಪ್ರಜ್ಞೆ ಪೂರ್ತಿಯಾಗಿ ಅಳಿಸಿಹೋಗಲು ಸಾಧ್ಯವಿಲ್ಲ. ಅಷ್ಟರಮಟ್ಟಿಗೆ ಮಾರ್ಕ್ಸ್‌ರ ಪ್ರತಿಪಾದನೆಯಲ್ಲಿ ನ್ಯೂನತೆ ಇದೆಯೆನ್ನುವ ವುಲ್ಫ್, ಬಂಡವಾಳಶಾಹಿಯಲ್ಲಿ ಪರಕೀಯತೆಯ ಪ್ರಜ್ಞೆಯು ಪರಾಕಾಷ್ಠೆಯಲ್ಲಿರುತ್ತದೆಂಬುದನ್ನು ಒಪ್ಪುತ್ತಾನೆ. ಸಾಮ್ಯವಾದಿ ಸಮಾಜದಲ್ಲಿ ಅದು ಇರುತ್ತದೋ ಇಲ್ಲವೋ ಎಂಬುದು ಇನ್ನೂ ಅನುಭವಕ್ಕೆ ಬಂದಿಲ್ಲವಲ್ಲ! ಪರಕೀಯತೆಯ ಅಭಾವದಲ್ಲಿ ವ್ಯಕ್ತಿತ್ವ ಹೇಗಿರುತ್ತದೆಂಬುದನ್ನು ಊಹಿಸಿಕೊಳ್ಳಬೇಕಾಗಿದೆ, ಅಷ್ಟೆ. – ಹೀಗೆನ್ನುವ ವುಲ್ಫ್‌ಗೆ ಸೂಕ್ತ ಉತ್ತರ ಮಾರ್ಕ್ಸ್‌ರ ಕೃತಿಗಳಲ್ಲಿ ಹೇರಳವಾಗಿ ಲಭ್ಯವಿದೆ, ನಿಗಾ ಇಟ್ಟು ತಿಳಿಯುವ ಮನಸ್ಸಿರಬೇಕು, ಅಷ್ಟೆ!

ಇತಿಹಾಸದ ಭೌತವಾದಿ ಅರ್ಥೈಸುವಿಕೆಯು ಮಾರ್ಕ್ಸ್‌ರ ಚಿಂತನೆಯಲ್ಲಿ ಪ್ರಮುಖ ಸ್ಥಾನದಲ್ಲಿದೆ. ಸಮಾಜದ ವಿಕಾಸದ ಹಾದಿಯನ್ನು ತಿಳಿಸಿಕೊಡುವ ಸೂತ್ರ ಅದೇ. ಬಂಡವಾಳಶಾಹಿಯು ಉತ್ಪಾದಕ ಶಕ್ತಿಗಳನ್ನು ಕುಗ್ಗಿಸುತ್ತದೆ ; ತನ್ನ ಲಾಭದ ಪ್ರಮಾಣಕ್ಕೆ ಅಗತ್ಯವಾಗುವಷ್ಟನ್ನು ಮೀರಿ ಅದು ಉತ್ಪಾದನೆಗೆ ಕುಮ್ಮಕ್ಕು ಕೊಡುವುದಿಲ್ಲ. ಈ ಲಕ್ಷಣವೇ ಅದರ ಅವಸಾನಕ್ಕೆ ಕಾರಣವಾಗಿ ಮುಂದಿನ ಹಂತಗಳಾದ ಸಮಾಜವಾದ, ಸಾಮ್ಯವಾದಗಳಿಗೆ ಆಸರೆಯಾಗುತ್ತದೆ. ಮಾರ್ಕ್ಸ್‌ರ ಈ ಪ್ರತಿಪಾದನೆಗೆ ಸಾಕಷ್ಟು ಪ್ರಮಾಣಾಧಾರವಿಲ್ಲವೆಂಬುದು ವುಲ್ಫನ ಆಕ್ಷೇಪ. ಸಾಮ್ಯವಾದಿ ಆರ್ಥಿಕ ಸಂರಚನೆಯೂ ಸೇರಿದಂತೆ ಎಲ್ಲ ಆರ್ಥಿಕ ವ್ಯವಸ್ಥೆಗಳೂ ಉತ್ಪಾದಕ ಶಕ್ತಿಗಳಿಗೆ ಲಗಾಮು ಹಾಕುತ್ತವೆಂದು ಆತ ವಾದಿಸುತ್ತಾನೆ. ಮುಂದುವರಿದು ಅವನೆನ್ನುತ್ತಾನೆ : ಬಂಡವಾಳಶಾಹಿಯ ಗರ್ಭದಲ್ಲಿ ಸಾಮ್ಯವಾದವು ಅಂಕುರಿಸುತ್ತದೆ ಎಂಬುದೊಂದು ತಪ್ಪು ಕಲ್ಪನೆ, ಎಂದು. ಆಯಾ ಸನ್ನಿವೇಶಗಳಿಗೆ ತಕ್ಕುದಾಗಿ ಪರಿವರ್ತನೆ ಹೊಂದಲು ಕಲಿತರೆ, ಬಂಡವಾಳಶಾಹಿಯು ಅಳಿಯಬೇಕಾಗಿಲ್ಲವೆಂದೂ ಆತ ತರ್ಕಿಸುತ್ತಾನೆ. ಈಗಾಗಲೇ ಅಂತಹ ಪ್ರಕ್ರಿಯೆ ಆರಂಭವಾಗಿದೆಯೆಂದು ಕೂಡ ಅವನ ಇಂಗಿತವಾಗಿದೆ. ತನ್ನ ಪ್ರಮೇಯಗಳಿಗೆ ಮಾರ್ಕ್ಸ್ ಪ್ರಮಾಣವನ್ನು ಒದಗಿಸಲಿಲ್ಲವೆಂದು ಆಕ್ಷೇಪಿಸಿದ ವುಲ್ಫ್ ಸ್ವತಃ ತನ್ನ ಯಾವ ಪ್ರಮೇಯಕ್ಕೂ ಪ್ರಮಾಣ ಒದಗಿಸುವ ಗೋಜಿಗೆ ಹೋಗಿಲ್ಲದಿರುವುದು ಸ್ವಾರಸ್ಯವಾಗಿದೆ. ಜಾಗತೀಕರಣಕ್ಕೆ ಪರ್ಯಾಯವೇ ಇಲ್ಲವೆಂದು ಸಂಭ್ರಮಿಸುವ ರಾಜಕೀಯ ಮತ್ತು ಆರ್ಥಿಕ ಪ್ರವೀಣರ ಸಾಲಿಗೆ ವುಲ್ಫ್ ಸೇರಿಕೊಂಡುಬಿಟ್ಟಿದ್ದಾನೆ.

ಇದರ ಜೊತೆಗೆ ಈಗಾಗಲೇ ಬೇರೆಯವರು ಹಲವು ಬಾರಿ ಎತ್ತಿರುವ ಪ್ರಶ್ನೆಗಳನ್ನು ವುಲ್ಫ್ ಮತ್ತೆ ಎತ್ತಿದ್ದಾನೆ: ಬಂಡವಾಳಶಾಹಿಯು ನಶಿಸುತ್ತದೆಂದು ಹೇಳಿದ್ದು ಮಾರ್ಕ್ಸ್‌ನ ತಪ್ಪು, ಮಾನವನಿಗೆ ದುಡಿಮೆ ಮತ್ತು ಉತ್ಪಾದನೆಗಳಲ್ಲದೆ ಬೇರೆ ಆಕಾಂಕ್ಷೆಗಳೂ ಇವೆಯೆಂಬುದನ್ನು ಮಾರ್ಕ್ಸ್ ಗ್ರಹಿಸಲಿಲ್ಲ, ತನ್ನ ಭವಿಷ್ಯವಾಣಿಗೆ ಸರಿಹೊಂದುವ ಸಿದ್ಧಾಂತಗಳನ್ನು ಮಾರ್ಕ್ಸ್ ಹೊಸೆದುಬಿಟ್ಟ, ಇತ್ಯಾದಿ. ಇವಕ್ಕೆಲ್ಲಾ ನೂರಾರು ಬಾರಿ ಈಗಾಗಲೇ ಮಾರ್ಕ್ಸ್‌ವಾದಿಗಳು ಸ್ಪಂದಿಸಿದ್ದಾರೆ; ವುಲ್ಫ್ ಎತ್ತಿರುವ ಯಾವ ಪ್ರಶ್ನೆಯೂ ಹೊಸದೇನಲ್ಲ. ಈ ಚರ್ವಿತಚರ್ವಣದಲ್ಲಿ ಏನೋ ಅಗಾಧವಾದ ಸ್ವಂತಿಕೆ ಇದೆಯೆಂದು ಆತ ಗರ್ವಪಟ್ಟರೆ ಆತನಿಗೆ ಕ್ಷಮೆ ಇದೆಯೆನ್ನ ಬಹುದು! ಮಾರ್ಕ್ಸ್‌ರ 'ಮಿಗುತಾಯ ಮೌಲ್ಯ'ದ ಸಿದ್ಧಾಂತವನ್ನೂ ವುಲ್ಫ್ ಪ್ರಶ್ನಿಸಿದ್ದಾನೆ; ಮೌಲ್ಯವನ್ನು ದುಡಿಮೆಯ ಆಧಾರದಲ್ಲಿ ನಿಗದಿಗೊಳಿಸುವ ಪದ್ಧತಿ ಯನ್ನೂ ಅಲ್ಲಗಳೆಯುತ್ತಾನೆ. ಇದಕ್ಕೆ ಅವನು ಗಹನವಾದ ಕಾರಣಗಳನ್ನೇನೂ ಕೊಟ್ಟಿಲ್ಲ. ಬಾಲಿಶವೆನ್ನಬಹುದಾದ ಒಂದು ಉದಾಹರಣೆಯಿಂದ ಅವನು ತೃಪ್ತನಾಗಿದ್ದಾನೆ. ಪಿಕಾಸೋನ ಕಲಾಕೃತಿ ರಚಿಸಲು ಕೆಲವು ಘಳಿಗೆಗಳು ಮಾತ್ರ ಸಾಕಾದುವು. ಆದರೆ ಅವಕ್ಕೆ ಲಕ್ಷಗಟ್ಟಲೆ ಬೆಲೆ ಇದೆ! ವುಲ್ಫ್ ಹೀಗೆ ಲಘುವಾಗಿ ಟೀಕಿಸುವಾಗ ಮಾರ್ಕ್ಸ್‌ರ ಮೂಲಪ್ರಶ್ನೆಯಾದ ಲಾಭದ ಮೂಲದ ಬಗ್ಗೆ ಏನನ್ನೂ ಹೇಳಿಲ್ಲ. ಬದಲಾಗಿ ಅವನು ಪಾಂಡಿತ್ಯಪೂರ್ಣವಾಗಿ ಒಪ್ಪುವುದಿದು: ''ಏನೋ ನನಗೆ ಅದು ತಿಳಿಯದು. ಬೇರೆಯವರಿಗೆ ತಿಳಿಯದ ಅಥವಾ ಲಭಿಸದ ಅವಕಾಶಗಳ ಸದುಪಯೋಗದಿಂದ ಬಂಡವಳಿಗನು ಲಾಭ ಗಳಿಸುತ್ತಾನೋ ಏನೋ!'' ಮಾರ್ಕ್ಸ್‌ರ ಅಧ್ಯಯನ ಮಾಡಿದವರಾರೂ ಇಂತಹ ಹುರುಳಿಲ್ಲದ ಪೇಲವ ಹೇಳಿಕೆಗಳನ್ನು ನೀಡಬಾರದೆಂದಷ್ಟೇ ಹೇಳಬಹುದು.

ವುಲ್ಫನ ಕಡೆಯ ಅಸ್ತ್ರ ಕೂಡ ಹಳಸಿದ ಹೂರಣವೇ. ಅವನ ತೀರ್ಮಾನ ಇದು : ಬಂಡವಾಳಶಾಹಿಯ ಪತನವಾಗಿ ಸಾಮ್ಯವಾದ ಬಂದರೆ ಅದೂ ಸ್ಥಿರವಾಗಿ ನಿಲ್ಲಲಾರದು. ಏಕೆಂದರೆ, ನಾವು ಸ್ವಭಾವತಃ ಸ್ವಾರ್ಥಿಗಳು. ಮಾರುಕಟ್ಟೆ ಮತ್ತು ಲಾಭದ ಗಳಿಕೆ ಇಲ್ಲದಿದ್ದರೆ ದುಡಿಮೆಗೆ ಪ್ರೇರಣೆ ಎಲ್ಲಿರುತ್ತದೆ ? ಜನ ಕೆಲಸ ಮಾಡುವುದನ್ನೇ ನಿಲ್ಲಿಸಿಬಿಟ್ಟಾರು ! ರಾತ್ರಿಯೆಲ್ಲಾ ರಾಮಾಯಣ ಕೇಳಿ ರಾಮನಿಗೂ ಸೀತೆಗೂ ಸಂಬಂಧವೇನು ಎಂದು ಕೇಳಿದವನಿಗೆ ಸಮಾನ ಈ ವುಲ್ಫ್ ಪಂಡಿತ. ಮಾರ್ಕ್ಸ್‌ನನ್ನು ಓದಿದ್ದೇನೆ ಎನ್ನುತ್ತಾನೆ, ಬೇರೆಯವರೂ ಓದಬೇಕೆನ್ನುತ್ತಾನೆ; ಆದರೆ ಓದಿದ ನಂತರ ಗ್ರಹಿಸಿದ್ದು ಮಾತ್ರ ಶೂನ್ಯ ! ಆದರೆ ಮಾರ್ಕ್ಸ್‌ರ ಅಸಾಧಾರಣ ಪ್ರತಿಭೆಯ ಬಗ್ಗೆ ಇನ್ನೊಮ್ಮೆ ಚರ್ಚೆ ಆರಂಭವಾಗುವುದಕ್ಕೆ ಸಾಮಗ್ರಿ ಒದಗಿಸಿದ್ದಾನೆಂಬುದು ವುಲ್ಫ್‌ನ ಪರವಾಗಿ ಹೇಳಬೇಕಾದ ಮಾತು. ✦

# ಡಾ॥ ಎಂ. ಚಿದಾನಂದಮೂರ್ತಿಗಳ ಅನರ್ಘ್ಯ ವಿಚಾರ ಪ್ರಣಾಳಿಕೆ

ನಮ್ಮ ನಾಡಿನ ಬಹುದೊಡ್ಡ ಸಂಶೋಧಕರೆಂದು, ಸಂಸ್ಕೃತಿ ಚಿಂತಕರೆಂದು, ಕನ್ನಡ ಚಳುವಳಿಗಾರರೆಂದು ಕೀರ್ತಿ-ಹೆಸರು ಪಡೆದಿರುವ ಡಾ॥ ಎಂ. ಚಿದಾನಂದಮೂರ್ತಿಯವರು ವಚನ ಸಾಹಿತ್ಯ, ವಚನ ಚಳುವಳಿ, ವಚನ ಸಂಸ್ಕೃತಿ ಕುರಿತಂತೆ ಆಚಾರ್ಯ ಸದೃಶ ಕೆಲಸ ಮಾಡಿದ್ದಾರೆ. ಅವರ ಚಿಂತನೆ-ಬರಹಗಳ ಬಹುಭಾಗವನ್ನು ವಚನಗಳು - ವಚನಕಾರರು ಆಕ್ರಮಿಸಿಕೊಂಡಿದ್ದಾರೆ. ವಚನ ಸಂಸ್ಕೃತಿಯ 'ಆತ್ಮಸಾಕ್ಷಿ'ಯೆಂದೆ ಅವರನ್ನು ಜನರು ಗುರುತಿಸುತ್ತಾ ಬಂದಿದ್ದಾರೆ. ವಚನ ಸಾಹಿತ್ಯವನ್ನು ಅವರು ಬೇರೆ ಬೇರೆ ಅಧ್ಯಯನ ವಿಧಾನಗಳಲ್ಲಿ ಪರಿಶೋಧಿಸುವ ಪ್ರಯತ್ನ ಮಾಡಿದ್ದಾರೆ. ಸಮಾಜ ವಿಜ್ಞಾನಗಳ ನೆಲೆಯಿಂದಲೂ ಅದನ್ನು ಕುರಿತ ಅನುಸಂಧಾನ ಅವರು ನಡೆಸಿದ್ದಾರೆ. ಸಮಾಜ ವಿಜ್ಞಾನಿಗಳ ಪರಿಪ್ರೇಕ್ಷ್ಯದಲ್ಲಿ ವಚನ ಸಾಹಿತ್ಯವನ್ನು ಕುರಿತಂತೆ ಅಧ್ಯಯನಗಳು ಹೆಚ್ಚು ನಡೆದಿಲ್ಲವೆಂದು ಅವರು ವಿಷಾದಿಸುತ್ತಾರೆ. ಅವರ ಅಧ್ಯಯನಗಳ ಆಳ-ಹರವು ತುಂಬಾ ವಿಶಾಲವಾದುದು. ಶಾಸನಗಳ ಅಧ್ಯಯನ, ಜಾನಪದ, ಚರಿತ್ರೆ, ಮಾನವ ಶಾಸ್ತ್ರ, ಭಾಷಾಶಾಸ್ತ್ರ, ಧರ್ಮ, ಕನ್ನಡ ಹೋರಾಟ – ಹೀಗೆ ಹತ್ತು ಹಲವು ಕ್ಷೇತ್ರಗಳಲ್ಲಿ ಅವರು ಕೆಲಸ ಮಾಡಿದ್ದಾರೆ.

ಇತ್ತೀಚೆಗೆ ಅವರು ಹೊಸದೊಂದು ಅಧ್ಯಯನ ಕ್ಷೇತ್ರ ಪ್ರವೇಶಿಸಿರುವಂತೆ ಕಾಣುತ್ತದೆ. ಈಗ ಅವರು 'ಹಿಂದುತ್ವ' – 'ಹಿಂದೂಶಾಹಿ' – ಕುರಿತಂತೆ ಚಿಂತನೆ–ಜಿಜ್ಞಾಸೆ, ಹಾಗೂ ಚಳುವಳಿಯಲ್ಲಿ ತೊಡಗಿದ್ದಾರೆ. ಹಿಂದೂಶಾಹಿಯನ್ನು ಅವರು ತಮ್ಮ ಚಿಂತನೆ - ಬರಹಗಳ ಮಾರ್ಗದರ್ಶಿ ಸೂತ್ರವನ್ನಾಗಿ ಮಾಡಿಕೊಂಡಿದ್ದಾರೆ. ಈ ದಿಶೆಯಲ್ಲಿ ಅವರ ಇತ್ತೀಚಿಗಿನ ಕೃತಿ 'ವೀರಶೈವಧರ್ಮ : ಭಾರತೀಯ ಸಂಸ್ಕೃತಿ'ಯನ್ನು ನಾವು ಪರಿಶೀಲಿಸಬೇಕಾಗಿದೆ. ಈ ಗ್ರಂಥದ ಉಪಶೀರ್ಷಿಕೆ 'ಹಿಂದೂ ಲಿಂಗಾಯತ' ಎಂಬುದು ಅವರ ಹಿಂದುತ್ವ – ಹಿಂದೂಶಾಹಿ ವಿಚಾರವನ್ನು ಸ್ಪಷ್ಟವಾಗಿ ದೃಢಪಡಿಸುತ್ತದೆ. ಈ ಉಪಶೀರ್ಷಿಕೆಯನ್ನು ಅವರು ಆವರಣಗಳಲ್ಲಿ ನೀಡಿದ್ದಾರೆ. ಇದೊಂದು ಅರ್ಥಪೂರ್ಣ ಸಂಗತಿಯಾಗಿದೆ. ಅನಾದಿಕಾಲದಿಂದಲೂ ವೀರಶೈವವು ಹಿಂದೂಧರ್ಮದ ಅವಿಭಾಜ್ಯ – ಅಂತರ್ಗತ ಭಾಗವಾಗಿ ಬೆಳೆದುಕೊಂಡು ಬಂದಿದೆಯೆಂದೂ, ಅದು ವೇದಾಗಮ ಪ್ರಣೀತ ವೈದಿಕತೆಯ ಒಂದು ಪರಿಚ್ಛೇದವೆಂದೂ ಅವರು ಪ್ರಸ್ತುತ ಗ್ರಂಥದಲ್ಲಿ ಪ್ರತಿಪಾದಿಸಿದ್ದಾರೆ. ಈ ಗ್ರಂಥದ ಒಂಬತ್ತು ಪುಟಗಳ ಪ್ರಸ್ತಾವನೆಯಲ್ಲಿ ಅವರು ತಮ್ಮ 'ಹಿಂದೂಶಾಹಿ ವಿಚಾರ ಪ್ರಣಾಳಿಕೆ'ಯ ಸ್ಥೂಲಚಿತ್ರವನ್ನು ನೀಡಿದ್ದಾರೆ. ಈ ಗ್ರಂಥದಲ್ಲಿ ಅವರು ಪ್ರತಿಪಾದಿಸುತ್ತಿರುವ ವಿಚಾರವನ್ನು 'ಲಿಂಗಾಯತ ಬ್ರಾಹ್ಮಣೀಕರಣ'ವೆಂದು ಕರೆಯಬಹುದಾಗಿದೆ.

ಅವರದು ತುಂಬಾ ಸರಳವಾದ ಪ್ರಮೇಯವಾಗಿದೆ. ಈ ದೇಶದಲ್ಲಿನ ಪ್ರಧಾನ ಧರ್ಮ – ಪ್ರಧಾನ ಸಂಸ್ಕೃತಿಯೆಂದರೆ ಹಿಂದೂ ಧರ್ಮ – ಹಿಂದೂ ಸಂಸ್ಕೃತಿ. ಉಳಿದೆಲ್ಲ ಪಂಥ, ಸಂಪ್ರದಾಯ - ವಿಚಾರಗಳೆಲ್ಲವೂ ಪ್ರಧಾನ ಧಾರೆಯ ಅನುಬಂಧಗಳು. ಹಿಂದೂಶಾಹಿ ಕೇಂದ್ರವಾದರೆ ಉಳಿದವು ಪರಿಧಿ. ಅದು ಶಿಷ್ಟವಾದರೆ ಉಳಿದವು ಪರಿಶಿಷ್ಟ. ಅದು ಪ್ರಧಾನವಾದರೆ ಉಳಿದವು ಅಧೀನ. ಅವರ ಪ್ರಕಾರ ಇಂದು ಪ್ರಧಾನ - ಅಧೀನ, ಶಿಷ್ಟ - ಪರಿಶಿಷ್ಟ, ಕೇಂದ್ರ - ಪರಿಧಿ ಇವುಗಳ ನಡುವಿನ ಅಸಮತೋಲನ - ಅಸಮಾನ ಸಂಬಂಧಕ್ಕೆ ಧಕ್ಕೆ ಬಂದುಬಿಟ್ಟಿದೆ. ಅಧೀನದಲ್ಲಿನ ಸಂಗತಿಗಳು 'ಪ್ರಧಾನ'ದ ಮಟ್ಟಕ್ಕೆ ಏರುವ ಪ್ರಯತ್ನ ಮಾಡುತ್ತಿರುವುದನ್ನು ಕಂಡು ಅವರಿಗೆ ಆಘಾತವಾಗಿಬಿಟ್ಟಿದೆ. ಪ್ರಧಾನ ಧಾರೆಯ ಪ್ರಧಾನತೆಯನ್ನು, ಶ್ರೇಷ್ಠತೆಯನ್ನು ಎತ್ತಿಹಿಡಿಯುವ ಕೈಂಕರ್ಯದ ಭಾಗವಾಗಿ ಅವರು ಪ್ರಸ್ತುತ ಗ್ರಂಥವನ್ನು ಸಿದ್ಧಪಡಿಸಿದ್ದಾರೆ. ಕನಿಷ್ಠವು ಶ್ರೇಷ್ಠವಾಗುವ, ಪರಿಧಿಯು ಕೇಂದ್ರವಾಗುವ, ಅಧೀನವು ಪ್ರಧಾನವಾಗುವ, ಪರಿಶಿಷ್ಟವು ಶಿಷ್ಟವಾಗುವ ಮಹಾನ್ ಸಾಮಾಜಿಕ ಪ್ರಕ್ರಿಯೆಯನ್ನು ಕಂಡು ಅವರು ತುಂಬಾ ವ್ಯಾಕುಲಗೊಂಡಿರುವಂತೆ ಕಾಣುತ್ತದೆ. 'ವೀರಶೈವ'ವನ್ನು ಶ್ರೇಷ್ಠವಾಗಿಸುವ, 'ಲಿಂಗಾಯತ'ವನ್ನು ಕನಿಷ್ಠವಾಗಿಸುವ ಪ್ರಸ್ತುತ ಗ್ರಂಥದ ಮೂಲ ಉದ್ದೇಶವನ್ನು ಅವರು 'ವೀರಶೈವ' ಎಂಬುದನ್ನು ತಮ್ಮ ಗ್ರಂಥದ ಮೂಲ ಶೀರ್ಷಿಕೆಯನ್ನಾಗಿಯೂ 'ಲಿಂಗಾಯತ'ವನ್ನು ಉಪಶೀರ್ಷಿಕೆಯನ್ನಾಗಿಯೂ ಮಾಡಿ ಕೊಳ್ಳುವುದರ ಮೂಲಕ ಸಾಧಿಸಿಕೊಂಡಿದ್ದಾರೆಂದು ಹೇಳಬಹುದು. ಲಿಂಗಾಯತವು ಅವರಿಗೆ ಕನಿಷ್ಠ. ಈ ಕಾರಣಕ್ಕೆ ಅವರು ಅದನ್ನು ಉಪಶೀರ್ಷಿಕೆಯನ್ನಾಗಿ ಮಾಡಿದ್ದಾರೆ ಮತ್ತು ಅದನ್ನು ಆವರಣಗಳ ನಡುವೆ ನೀಡಿದ್ದಾರೆ.

ಅವರು ಪ್ರಸ್ತುತ ಗ್ರಂಥದಲ್ಲಿ ಕಟ್ಟುತ್ತಿರುವ ವಿಚಾರ ಪ್ರಣಾಳಿಕೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಅವರಿಗೆ ಲಿಂಗಾಯತರು ಹಿಂದುಗಳೋ ಅಲ್ಲವೋ ಎಂಬುದಾಗಲಿ, ಜನಗಣಗತಿಯಲ್ಲಿ ಲಿಂಗಾಯತವನ್ನು ಒಂದು ಧರ್ಮವೆಂದು ಮನ್ನಿಸಬೇಕೆಂಬ ಜನರ ಬೇಡಿಕೆಯ ತಿರಸ್ಕಾರವಾಗಲಿ ಇಲ್ಲಿ ತುಂಬಾ ಮುಖ್ಯವಾಗಿದೆ ಅನ್ನಿಸುವುದಿಲ್ಲ. ಅದು ಕೇವಲ ಪ್ರಾಸಂಗಿಕ - ಆನುಷಂಗಿಕ. ಅವರ ಪ್ರಧಾನ ಕಾಳಜಿ ವಚನ ಸಂಸ್ಕೃತಿಯ – ಬಸವನ ಭರ್ತ್ಸನೆ ಹಾಗೂ ಲಿಂಗಾಯತರ ಬ್ರಾಹ್ಮಣೀಕರಣ ಎಂಬುದು ಗಮನಿಸಬೇಕಾದ ಸಂಗತಿ ಯಾಗಿದೆ. ವೈದಿಕತೆಯ ವೇದಾಗಮಗಳ ಶ್ರೇಷ್ಠತೆ – ಜ್ಯೇಷ್ಠತೆಯನ್ನು ಸಾಧಿಸಲು ಇಲ್ಲಿ ಅವರು ತಮ್ಮೆಲ್ಲ ಬುದ್ಧಿಶಕ್ತಿ, ಶ್ರಮ-ಸಂಪನ್ಮೂಲಗಳನ್ನು ವ್ಯಯಿಸಿದ್ದಾರೆ. ಈ ಉದ್ದೇಶದ ಸಾಧನೆಗೆ ಅವರು 'ಲಿಂಗಾಯತ'ವನ್ನು, 'ವಚನ ಸಂಸ್ಕೃತಿ'ಯನ್ನು ಕನಿಷ್ಠಗೊಳಿಸುವ ಅಗತ್ಯವಿರಲಿಲ್ಲ.

ಚಿದಾನಂದಮೂರ್ತಿಗಳು ಕಟ್ಟಿರುವ ಪ್ರಮೇಯದ ನೆಲೆ ಬೆಲೆ ಏನು ? ಅವರು ವಚನ ಸಂಸ್ಕೃತಿಯನ್ನು ಪರಿಭಾವಿಸಿ ಕೊಂಡಿರುವ ಬಗೆ ಯಾವುದು ? ಅವರು ಇಲ್ಲಿ ಹೇಳುತ್ತಿರುವ 'ಸತ್ಯ'ವೆನ್ನುವುದುದು ಹುಟ್ಟಿದ್ದೋ ಅಥವಾ ಕಟ್ಟಿದ್ದೋ ? ವಚನ ಸಂಸ್ಕೃತಿಯು ಹಿಂದೂಶಾಹಿಯ ಅನುಬಂಧವೇ ? ಲಿಂಗಭೇದ ನಿರಾಕರಣೆಯು ಅವರು ಹೇಳುವಂತೆ ವೀರಶೈವದ ವೈಶಿಷ್ಟ್ಯ ವಲ್ಲವೆ ? ಲಿಂಗಾಯತರನ್ನು ಬ್ರಾಹ್ಮಣೀಕರಣಕ್ಕೆ ಒಳಪಡಿಸುವು ದರ ಮೂಲಕ ಅವರು ಏನನ್ನು ಸಾಧಿಸಲು ಪ್ರಯತ್ನಿಸುತ್ತಿದ್ದಾರೆ ? – ಇವೇ ಮುಂತಾದ ಪ್ರಶ್ನೆಗಳನ್ನು ಪ್ರಸ್ತುತ ಪ್ರಬಂಧದಲ್ಲಿ ಚರ್ಚಿಸಲು ಪ್ರಯತ್ನಿಸಲಾಗಿದೆ.

**ಸತ್ಯನಿಷ್ಠೆ – ಸತ್ಯಾರಾಧನೆ**

ಡಾ॥ ಎಂ. ಚಿದಾನಂತಮೂರ್ತಿಗಳು ತಮ್ಮನ್ನು ತಾವು 'ಸತ್ಯಾರಾಧಕರು' ಎಂದು ಕರೆದುಕೊಳ್ಳಲು ಇಷ್ಟಪಡುತ್ತಾರೆ. ಪ್ರಸ್ತುತ ಗ್ರಂಥದ ಕವಚದ ಹಿಂಬದಿ ಪುಟದಲ್ಲಿ ಅವರು ತಮ್ಮ ಕೃತಿ ಮಹತ್ವವನ್ನು ಹೀಗೆ ವರ್ಣಿಸಿದ್ದಾರೆ.

''ಯಾವುದೇ ಸಂಶೋಧನೆಯಂತೆ, ಸತ್ಯವನ್ನು ಗೆಲ್ಲಿಸುವ ಪ್ರಯತ್ನ ಇದಾಗಿದೆ.''

''ಲೇಖಕ ಸತ್ಯದ ಕಕ್ಷೆಯಲ್ಲಿದ್ದಾನೆಂಬ ದೃಢ ವಿಶ್ವಾಸವೇ ಅವನ ಆಸ್ತಿಯಾಗಿದೆ.''

ಕೃತಿಯ ಪ್ರಸ್ತಾವನೆಯಲ್ಲಿ ಸತ್ಯದ ಬಗ್ಗೆ ಅವರು ಹೀಗೆ ಬರೆದಿದ್ದಾರೆ:

''ಈ ಕೃತಿ ಸತ್ಯಪ್ರಿಯರಿಗೆ ಖಂಡಿತವಾಗಿಯೂ ಪ್ರಿಯವಾಗಿ ಕಾಣುವುದಲ್ಲದೆ..........''

ಇವರ ಗುರುಗಳಾಗಿದ್ದ ತೀ.ನಂ.ಶ್ರೀ. ಅವರು ಬೇರೆ



ವೀರಶೈವ ಧರ್ಮ : ಭಾರತೀಯ ಸಂಸ್ಕೃತಿ (ಹಿಂದೂ ಲಿಂಗಾಯತ) ಎಂಬ ತಮ್ಮ ಗ್ರಂಥವನ್ನು ಡಾ॥ ಎಂ. ಚಿದಾನಂದಮೂರ್ತಿಯವರು ಮೂರು ವರ್ಷಗಳ ಹಿಂದೆ ಪ್ರಕಟಿಸಿದರು. ಅದನ್ನು ಕುರಿತ ವಿಚಾರಪೂರಿತ ವಿಮರ್ಶೆ ಇಲ್ಲಿದೆ. ಲೇಖನದ ಒಂದು ಭಾಗವನ್ನು ಇಲ್ಲಿ ಪ್ರಕಟಿಸಲಾಗಿದೆ. ಉಳಿದ ಭಾಗವನ್ನು ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲಾಗುತ್ತದೆ.

ಡಾ॥ ಟಿ. ಆರ್. ಚಂದ್ರಶೇಖರ

ಸಂದರ್ಭದಲ್ಲಿ ಇವರ ಬಗ್ಗೆ ಬರೆದಿರುವ ಮಾತುಗಳನ್ನು ಇಲ್ಲಿ ತಮ್ಮ ಸತ್ಯನಿಷ್ಠೆಗೆ ಪ್ರಮಾಣಭೂತವೆಂಬಂತೆ ಬಳಸಿಕೊಂಡಿದ್ದಾರೆ. ಅವರ ಮಾತುಗಳು ಹೀಗಿವೆ :

''...... ಆದರೆ ಯಾರೂ ಕೂಡ ಚಿದಾನಂದಮೂರ್ತಿಗಳ ಸತ್ಯನಿಷ್ಠೆಯನ್ನಾಗಲಿ, ಹೃದಯ ಶುದ್ಧಿಯನ್ನಾಗಲಿ ಪ್ರಶ್ನಿಸಲಾರರೆಂದು ನನ್ನ ನಂಬಿಕೆ.''

ಅವರ ಪ್ರಕಾರ ಅವರ ಸಂಶೋಧನೆಯ ಮೂಲಗುರಿ ಸತ್ಯಶೋಧನೆ. ಅವರ ಪ್ರಕಾರ ಪ್ರಸ್ತುತ ಗ್ರಂಥದಲ್ಲಿ ಸತ್ಯವನ್ನು ಬಿಟ್ಟು ಮತ್ತೇನೂ ಇಲ್ಲ. ಸತ್ಯದ ಹಾದಿಯಲ್ಲಿ ಅವರು ನಡೆಸುತ್ತಿರುವ ಶಕ್ತಿ ಸತ್ಯವೇ ಆಗಿದೆ. ''ನನ್ನ ಸಂಶೋಧನೆಯಾಗಲಿ, ಕನ್ನಡ ಚಳವಳಿಯಾಗಲಿ, ಬದುಕಾಗಲಿ, ಸತ್ಯಶೋಧದ ಭಿನ್ನ ಮಾರ್ಗಗಳೆಂದೇ ಭಾವಿಸಿದ್ದೇನೆ'' ಎಂದು ಅವರು ಬರೆದುಕೊಂಡಿದ್ದಾರೆ.

ಇಷ್ಟೊಂದು ದೀರ್ಘವಾಗಿ ಇದನ್ನು ಇಲ್ಲಿ ಚರ್ಚಿಸಲು ಒಂದು ಉದ್ದೇಶವಿದೆ. ಲೇಖಕರು ಹೇಳುವ ಸತ್ಯವನ್ನು ಕುರಿತಂತೆ ವಿದ್ವಾಂಸರಲ್ಲಿ ತೀವ್ರ ಚರ್ಚೆಗಳಾಗಿವೆ. ಸಮಾಜ ವಿಜ್ಞಾನಗಳಲ್ಲಿ ಸತ್ಯವನ್ನು ಕುರಿತಂತೆ ತಳೆದಿರುವ ನಿಲುವು ಏನೆಂದರೆ 'ಸತ್ಯವೆನ್ನುವುದು ಹುಟ್ಟಿದ್ದಲ್ಲ; ಅದು ಕಟ್ಟಿದ್ದು' ಎಂಬುದಾಗಿದೆ. ಸತ್ಯವೆಂಬುದು ಸಂಬಂಧವಾಚಿ - ಸಾಪೇಕ್ಷ -ಸಂದರ್ಭ-ಸ್ಪಂದಿ ಸಂಗತಿಯಾಗಿದೆ. ಸತ್ಯವೆಂಬುದು ಇರುವುದಿಲ್ಲ, ಅದೊಂದು ನಿರಪೇಕ್ಷ-ನಿರಂಕುಶ ಸಂಗತಿಯಲ್ಲ. ಅದು ಸ್ಥಾವರವಲ್ಲ. ಅದನ್ನು ಕಟ್ಟಲಾಗುತ್ತದೆ-ಕಟ್ಟಿಕೊಳ್ಳಲಾಗುತ್ತದೆ. ನಮ್ಮಂತಹ ಏಣಿ ಶ್ರೇಣಿಗಳಿಂದ ಕೂಡಿರುವ ಸಮಾಜದಲ್ಲಿ 'ಸತ್ಯಗಳು' ಇರಲು ಸಾಧ್ಯವೇ ವಿನಾ 'ಸತ್ಯ' ವಿರಲು ಸಾಧ್ಯವಿಲ್ಲ.

ಲೇಖಕರು ಪ್ರಸ್ತುತ ಗ್ರಂಥದಲ್ಲಿ ಕಟ್ಟಲು ಪ್ರಯತ್ನಿಸಿರುವ ಹಿಂದೂಶಾಹಿ ವಿಚಾರ ಪ್ರಣಾಳಿಕೆಯೂ ಕೂಡ ಕಟ್ಟಿದ ಸತ್ಯವೇ ವಿನಾ ಹುಟ್ಟಿದ ಸತ್ಯವಲ್ಲ. ತಾವು ಕಟ್ಟುತ್ತಿರುವ ಸತ್ಯಕ್ಕೆ ಅಗತ್ಯವಾದ ಪುರಾವೆಗಳನ್ನು ಅವರು ಇಲ್ಲಿ ಕಲೆಹಾಕಿದ್ದಾರೆ. ಅವರು ಇಲ್ಲಿ ಯಾವುದನ್ನು ಸತ್ಯವೆಂದು ಪ್ರತಿಪಾದಿಸುತ್ತಿದ್ದಾರೋ ಅದು ಅವರಿಗೆ ಮತ್ತು ಅವರನ್ನು ಪೋಷಿಸುತ್ತಿರುವ ವರಿಗೆ ಮತ್ತು ಅವರ ಬೆನ್ನಹಿಂದೆ ನಿಂತಿರುವವರಿಗೆ ಸತ್ಯವಾಗಿದೆ ವಿನಾ ಎಲ್ಲರಿಗೂ ಅಲ್ಲ. ಚಿದಾನಂದಮೂರ್ತಿಗಳಿಗೆ ಸತ್ಯವೆನ್ನುವುದು ವಸ್ತುನಿಷ್ಠ ಹಾಗೂ 'ಅದೋ ಅಲ್ಲಿದೆ' ಎಂಬಂತಹ ಸಂಗತಿ. ಸತ್ಯವೆಂಬುದೊಂದು 'ಅಲ್ಲಿದೆ' ಎಂಬುದೇ ಇಲ್ಲಿನ ನಂಬಿಕೆಯಾಗಿದೆ. ಚಿದಾನಂದಮೂರ್ತಿಗಳಿಗೆ ಹಾಗೂ ಅವರ ವಿಚಾರ ಪ್ರಣಾಳಿಕೆ ಒಪ್ಪಿಕೊಂಡಿರುವವರಿಗೆ ಸತ್ಯವೆಂಬುದು ಅವಿಚ್ಛಿನ್ನ- ಅಖಂಡ - ಅಭಿನ್ನ.

ಸತ್ಯವೆಂಬುದು ನಾವು ಕಟ್ಟಿಕೊಂಡ ಒಂದು ಉಪಾಧಿ ಎಂಬುದು ಚಿದಾನಂದಮೂರ್ತಿ ಗಳಿಗೆ ಗೊತ್ತಿಲ್ಲ. ಸತ್ಯವೆಂಬುದು ವಿಶ್ಲೇಷಣೆ ಮಾಡಿ ಪ್ರಜ್ಞಾಪೂರ್ವಕವಾಗಿ ಕಟ್ಟಿಕೊಳ್ಳುವ ಒಂದು ರಚನೆ. ರಾಜಕೀಯ-ಸಾಮಾಜಿಕ-ಆರ್ಥಿಕ-ಸಾಂಸ್ಕೃತಿಕ-ಚಾರಿತ್ರಿಕ ಸಂದರ್ಭದಲ್ಲಿ ಸತ್ಯವನ್ನು ರೂಪಿಸಲಾಗುತ್ತದೆ. ಅದೊಂದು ಅವಲಂಬಿ ಉಪಾಧಿ. ಸತ್ಯವೆಂಬುದು ಬಹುರೂಪಿಯಾದ ಸಂಗತಿ.

ವೇದಾಗಮ ಪ್ರಣೀತ ಚಾತುರ್ವರ್ಣ್ಯ ವ್ಯವಸ್ಥೆಯಲ್ಲಿ ಅಸ್ಪೃಶ್ಯತೆಯೆಂಬುದು ಸತ್ಯ. ಆದರೆ ಇತರರಿಗೆ ಅದು ಸತ್ಯವಲ್ಲ. ಹೆಂಗಸರು ಧಾರ್ಮಿಕ ಕ್ರಿಯೆ ನಡೆಸಲು ಅನರ್ಹರು ಎಂಬುದೊಂದು ವೈದಿಕ ಸತ್ಯ. ಇತರರಿಗೆ ಅದು ಸತ್ಯವಲ್ಲ. ಅವೈದಿಕತೆಯಲ್ಲಿ ಮಹಿಳೆಯರಿಗೆ ಸಮಾನ ಅವಕಾಶ ನೀಡಲಾಗಿದೆ. 'ಹೆಣ್ಣು ಪ್ರಕೃತಿ : ಗಂಡು ಸಂಸ್ಕೃತಿ' ಎನ್ನುವುದೊಂದು ಹಿಂದಿನ ಸತ್ಯ. ಅದು ಸತ್ಯವಲ್ಲವೆಂಬುದು ಇಂದು ಸ್ಪಷ್ಟವಾಗಿದೆ. ಚಾತುರ್ವರ್ಣ್ಯ ವೆಂಬುವುದೊಂದು ಸತ್ಯ. ಆ ವ್ಯವಸ್ಥೆಯಲ್ಲಿ ಸೇರದಿರುವ ವರ್ಗಕ್ಕೆ ಅದು ಸತ್ಯವಲ್ಲ.

ಕಾಲ-ದೇಶದ ನೆಲೆಯಲ್ಲಿ ಸತ್ಯವು ಅರ್ಥವನ್ನು ಪಡೆದುಕೊಳ್ಳುತ್ತದೆ. ಅದಕ್ಕೆ ಅರ್ಥವನ್ನು ಆರೋಪಿಸಲಾಗುತ್ತದೆ ವಿನಾ ಅದಕ್ಕೆ 'ತನ್ನದೇ' ಎಂಬ ಅರ್ಥವಿರುವುದಿಲ್ಲ. ಯಾವುದನ್ನು ನಾವು ಹೇಗೆ ಪರಿಭಾವಿಸಿಕೊಳ್ಳುತ್ತೇವೆಯೋ ಹಾಗೆ ಅದು ಅರ್ಥವನ್ನು ಪಡೆದುಕೊಳ್ಳುತ್ತದೆ. ವಿದ್ವಾಂಸರು ಯಾವುದನ್ನು ಸತ್ಯವೆಂದು ಹೇಳುತ್ತಿರುತ್ತಾರೋ ಅದು ಹಾಗೆಂದು ಹೇಳುವವರ - ಭಾವಿಸಿಕೊಂಡವರ ಭಾವಜಗತ್ತಿನಲ್ಲಿ ಒಡಮೂಡಿದ, ಪರಿಷ್ಕಾರ ಪಡೆದ ಒಂದು ಉಪಾಧಿ. ಅಧ್ಯಯನಕರ್ತನ ಭಾವಜಗತ್ತಿಗೂ ಮತ್ತು ಅಧ್ಯಯನಕರ್ತನು ಪ್ರತಿಪಾದಿಸುತ್ತಿರುವ ಸತ್ಯಕ್ಕೂ ಸಂಬಂಧವಿರುತ್ತದೆ.

**ಭಾಗ - ೨ : ಲಿಂಗಾಯತರ ಬ್ರಾಹ್ಮಣೀಕರಣ ಪ್ರಮೇಯ**

ಲಿಂಗಾಯತರು ಸಂಸ್ಕೃತ ಭಾಷೆಯ ಬಗ್ಗೆ ತಳೆದ ನಿಲುವನ್ನು ಭದ್ರವಾಗಿ ಬಳಸಿಕೊಂಡು, ಅದರ ಹಿಂದಿನ ಕಾರಣ ಮೀಮಾಂಸೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಅಥವಾ ತಪ್ಪಾಗಿ ಗ್ರಹಿಸಿಕೊಂಡು ಚಿದಾನಂದಮೂರ್ತಿಯವರು ತಮ್ಮ 'ಲಿಂಗಾಯತರ ಬ್ರಾಹ್ಮಣೀಕರಣ'ದ ಯೋಜನೆಯನ್ನು ಇಲ್ಲಿ ರೂಪಿಸಿದ್ದಾರೆ. ಲಿಂಗಾಯತರ ಮಠಗಳು ಲಾಗಾಯ್ತಿನಿಂದ ಸಂಸ್ಕೃತ ಪಾಠಶಾಲೆಗಳನ್ನು ನಡೆಸಿಕೊಂಡು ಬರುತ್ತಿರುವುದನ್ನು ಅವರು ತಮ್ಮ ಪ್ರಮೇಯಕ್ಕೆ ಮುಖ್ಯ ಆಧಾರವನ್ನಾಗಿ ಮಾಡಿಕೊಂಡಿದ್ದಾರೆ. ತಮ್ಮ ಗ್ರಂಥದಲ್ಲಿ ಲಿಂಗಾಯತ ಮಠಗಳು ನಡೆಸುತ್ತಿರುವ ೩೬ ವೇದಸಂಸ್ಕೃತ ಪಾಠಶಾಲೆಗಳ ಪಟ್ಟಿಯನ್ನು ನೀಡಿದ್ದಾರೆ (ಪುಟ ೧೮೧-೧೮೩). ವಚನಕಾರರ ಸಂಸ್ಕೃತ ಶ್ಲೋಕಗಳ ಉಲ್ಲೇಖಗಳನ್ನು ಅವರು ತಮ್ಮ ವಾದಕ್ಕೆ ಬಳಸಿಕೊಂಡಿರುವ ಮತ್ತೊಂದು ಪುರಾವೆಯಾಗಿದೆ. ಸಂಸ್ಕೃತ ಭಾಷೆ, ಅದರ ಸಾಹಿತ್ಯ ಕುರಿತಂತೆ ಯಾವ ಯಾವ ಲಿಂಗಾಯತ ಮುಖಂಡರು - ವಿದ್ವಾಂಸರು ಎಷ್ಟೆಷ್ಟು ಅಭಿಮಾನದಿಂದ ಮಾತನಾಡಿದ್ದಾರೆ ಎಂಬುದನ್ನು ಅವರು ಇಲ್ಲಿ ತಮ್ಮ ವಾದಕ್ಕೆ ಸಾಕ್ಷಿಯಾಗಿ ಬಳಸಿಕೊಂಡಿದ್ದಾರೆ. ರಾವ್‌ಬಹದ್ದೂರ್ ಹಳಕಟ್ಟಿಯವರ ಅಭಿಪ್ರಾಯಗಳನ್ನು ನಿದರ್ಶನವಾಗಿ ಅವರು ಉಲ್ಲೇಖಿಸುತ್ತಾರೆ. ಕೋರ್ಟು-ಕಚೇರಿಗಳಲ್ಲಿ ಮೊಕದ್ದಮೆಗಳನ್ನು ಹೂಡಿ, ಮಹಾರಾಜರಲ್ಲಿ ಫಿರ್ಯಾದು ಮಾಡಿ ಬ್ರಾಹ್ಮಣಿಕೆಯ ಅಂತಸ್ತು-ಸ್ಥಾನ-ಮಾನ ಪಡೆದುಕೊಳ್ಳಲು ಲಿಂಗಾಯತರು ಎಷ್ಟೊಂದು ಪ್ರಯತ್ನಪಟ್ಟರು ಎಂಬುದನ್ನು ಅವರು ತಮ್ಮ ಗ್ರಂಥದಲ್ಲಿ ವಿವರವಾಗಿ ಚರ್ಚಿಸಿದ್ದಾರೆ.

ವಚನ ಸಂಸ್ಕೃತಿ – ಲಿಂಗಾಯತ ಹೇಗೆ ವೈದಿಕತೆಯ ಅವಿಭಾಜ್ಯ ಅಂಗ ಎಂಬುದನ್ನು ಸಾಧಿಸಲು ಅವರು ಅನೇಕ ಬಗೆಯ ಆಧಾರಗಳನ್ನು ನೀಡುತ್ತಾರೆ. ಆದರೆ ಅಂತಹ ವ್ಯವಸ್ಥೆ - ಪ್ರಣಾಳಿಕೆಯಿಂದ – ವೈದಿಕತೆಯಿಂದ ಹೊರಬರಲು ವಚನಕಾರರು ಎಂತಹ ಹೋರಾಟ ನಡೆಸಿದರು, ಅದಕ್ಕಾಗಿ ಅವರು ಎಂತಹ ಚಳುವಳಿ ಕಟ್ಟಿದರು, ವೈದಿಕತೆಗೆ ಪ್ರತಿಯಾಗಿ ಎಂತಹ ವಿಚಾರ ಪ್ರಣಾಳಿಕೆ ಕಟ್ಟಿದರು ಎಂಬುದೆಲ್ಲ ಲೇಖಕರಿಗೆ ತಮ್ಮ ಬೃಹತ್ ಹಿಂದೂಶಾಹಿ ವಿಚಾರ ಪ್ರಣಾಳಿಕೆ ಎದುರಿಗೆ 'ಯಃಕಶ್ಚಿತ್' ಆಗಿ ಕಂಡುಬಂದಿದೆ. ವಚನ ಸಂಸ್ಕೃತಿಯ ಮೂಲದಲ್ಲಿ ವಚನಕಾರರು ಎತ್ತಿದ ಆಸ್ಫೋಟಕಾರಿ ಸಂಘರ್ಷವಾದಿ ನೆಲೆಗಳು ಅವರಿಗೆ ಕಾಣಿಸುವುದಿಲ್ಲ.

ವಚನಕಾರರು ಎದುರಿಸಿದ 'ಕನ್ನಡ-ಸಂಸ್ಕೃತ'ಗಳ ನಡುವಿನ ಸಂಘರ್ಷ ಅವರಿಗೆ ಕಾಣುವುದಿಲ್ಲ. 'ವೈದಿಕ - ಶೂದ್ರ - ದಲಿತ' ಇವುಗಳ ಮುಖಾಮುಖಿ ಅವರಿಗೆ ಮುಖ್ಯವಾಗುವುದಿಲ್ಲ. ಮಠ - ದೇವಾಲಯಗಳ ಬಗೆಗಿನ ವಚನಕಾರರ 'ವಿಗ್ರಹ ಭಂಜನ' ವಿಚಾರಗಳು ಮುಖ್ಯವೆನಿಸುವುದಿಲ್ಲ. ಈ ಗ್ರಂಥದಲ್ಲಿ ಅವರು ಮಂಡಿಸಿರುವ ವಿಚಾರಕ್ಕೆ ಸಂಬಂಧಿಸಿದಂತೆ ಕಂಡುಬರುವ ಮುಖ್ಯ ಸಮಸ್ಯೆಯೆಂದರೆ ಅವರು ವಚನ ಸಂಸ್ಕೃತಿಯನ್ನು ವೈದಿಕತೆಯ ನೆಲೆಯಲ್ಲಿ ಪರಿಭಾವಿಸಿಕೊಳ್ಳುತ್ತಿರುವ ಕ್ರಮ. ವೈದಿಕತೆಯ ನೆಲೆಯಿಂದ ವಚನ ಸಂಸ್ಕೃತಿಯನ್ನು ಪರಿಭಾವಿಸಿಕೊಂಡಿರುವುದರಿಂದ ಅವರಿಗೆ ಅಲ್ಲಿ ಅಡಗಿರುವ ಲೌಕಿಕವಾದಿ - ಅನುರಕವಾದಿ - ವೈದಿಕ ವಿರೋಧಿ ವಿಚಾರಗಳು ಕಾಣುವುದಿಲ್ಲ.

ಸಂಸ್ಕೃತ ಪಾಠಶಾಲೆಗಳನ್ನು ತೆರೆಯಲು ಲಿಂಗಾಯತರು ಯಾಕೆ ಉತ್ಸಾಹ ತೋರಿದರು ? ಅವುಗಳನ್ನು ಅವರು ಯಾಕೆ ನಡೆಸಿಕೊಂಡು ಬರುತ್ತಿದ್ದಾರೆ ? ವಚನಕಾರರು ಸಂಸ್ಕೃತದ ಉಕ್ತಿಗಳನ್ನು ದಂಡಿಯಾಗಿ ಯಾಕೆ ಉಲ್ಲೇಖಿಸುತ್ತಾರೆ ? ಈ ಬಗೆಯ ಪ್ರಶ್ನೆಗಳಿಗೆ ಅವರು ವೈದಿಕತೆಯ ನೆಲೆಯಲ್ಲಿ ಉತ್ತರ ಕಂಡುಕೊಳ್ಳಲು ಪ್ರಯತ್ನಿಸುತ್ತಾರೆ. ಸಂಸ್ಕೃತ ಹಾಗೂ ಸಂಸ್ಕೃತ ಪಾಠಶಾಲೆಗಳ ಬಗೆಗಿನ ಲಿಂಗಾಯತರ ರಾಜಕಾರಣ ಅವರಿಗೆ ಅರ್ಥವಾಗಿಲ್ಲ.

ಭಾಷೆ ಮತ್ತು ಸಂಸ್ಕೃತಿ ಮೇಲೆ ಬ್ರಾಹ್ಮಣರು ಸಾಧಿಸಿದ್ದ ಏಕಸ್ವಾಮ್ಯವನ್ನು ಮುರಿಯುವುದು ಲಿಂಗಾಯತರ ಸಂಸ್ಕೃತದ ಹಿಂದಿನ ರಾಜಕಾರಣವಾಗಿತ್ತು. ಸಂಸ್ಕೃತವು ಯಾರ ಗುತ್ತಿಗೆಯೂ ಅಲ್ಲ ಎಂಬುದನ್ನು ಜಗತ್ತಿಗೆ ತೋರಿಸಿಕೊಡುವುದು ಲಿಂಗಾಯತರಿಗೆ ಮುಖ್ಯವಾಗಿತ್ತು. ಬ್ರಾಹ್ಮಣರಿಗಿಂತ ನಾವೇನು ಕಡಿಮೆಯಲ್ಲ ಎಂಬುದನ್ನು ಲಿಂಗಾಯತರು ಸಾಬೀತು ಪಡಿಸಬೇಕಾಗಿತ್ತು. ಲಿಂಗಾಯತರಿಗೆ ಸಂಸ್ಕೃತವು ಸಂಘರ್ಷದ ಒಂದು ಸಾಧನವಾಗಿತ್ತು. ಒಂದು ಭಾಷೆಯ ಮೇಲಿನ ಪ್ರಭುತ್ವದಿಂದ ಬ್ರಾಹ್ಮಣರು ಏನೆಲ್ಲ ಸವಲತ್ತು - ಸಂಪತ್ತು ಪಡೆದಿದ್ದಾರೆ ಎಂಬುದು ಲಿಂಗಾಯತರಿಗೆ ಅರ್ಥವಾಗಿತ್ತು. ಹಾಗಾದರೆ ಅದನ್ನೇ ತಮ್ಮದಾಗಿಸಿಕೊಳ್ಳುವುದು ಲಿಂಗಾಯತರ ರಾಜಕಾರಣವಾಗಿತ್ತು. ಇದು ಈ ಲೇಖಕರಿಗೆ ಬ್ರಾಹ್ಮಣೀಕರಣವಾಗಿ ಕಂಡಿದೆ, ವೈದಿಕತೆಯ ಭಾಗವಾಗಿ ಕಂಡಿದೆ. ವಾಸ್ತವವಾಗಿ ಅದರ ಧಿಕ್ಕಾರ ಇಲ್ಲಿನ ಧ್ವನಿಯಾಗಿತ್ತು. ದ್ವಿಜ ಸಂಸ್ಕೃತಿಯ ವಿರುದ್ಧ ಶೂದ್ರರು - ದಲಿತರು ನಡೆಸಿಕೊಂಡು ಬಂದ ಹೋರಾಟದ ಸೂಕ್ಷ್ಮ ಎಳೆಗಳನ್ನು ಗುರುತಿಸುವುದು ಅವರಿಗೆ ಸಾಧ್ಯವಾಗಿಲ್ಲ. ಸಂಸ್ಕೃತದ ಮೂಲಕ, ಸಂಸ್ಕೃತ ಪಾಠಶಾಲೆಗಳ ಮೂಲಕ ಶೂದ್ರರು - ದಲಿತರು ಸಮಾಜದಲ್ಲಿ ಪರಿಧಿಯಿಂದ ಕೇಂದ್ರಕ್ಕೆ, ಪರಿಶಿಷ್ಟದಿಂದ ಶಿಷ್ಟಕ್ಕೆ, ಅಧೀನತೆಯಿಂದ ಪ್ರಧಾನತೆಗೆ ಬರುವ ಮಾರ್ಗವನ್ನು ಕಂಡುಕೊಂಡರು. ಈ ರಾಜಕಾರಣ ಲೇಖಕರಿಗೆ ಅರ್ಥವಾಗಿಲ್ಲ. ಯಾವುದನ್ನು ಶೂದ್ರರಿಗೆ ದಲಿತರಿಗೆ ಬ್ರಾಹ್ಮಣರು ನಿರಾಕರಿಸಿದ್ದರೋ ಅವುಗಳನ್ನು ಪಡೆದುಕೊಳ್ಳಲು ಲಿಂಗಾಯತರು ನಡೆಸಿದ ಪ್ರಯತ್ನದ ಮಹತ್ವವನ್ನು ಗುರುತಿಸುವುದು ಲೇಖಕರಿಗೆ ಸಾಧ್ಯವಾಗಿಲ್ಲ.

*(ಆಗಸ್ಟ್ ಸಂಚಿಕೆಯಲ್ಲಿ ಮುಂದುವರಿಯುತ್ತದೆ)*

(ಆಗಸ್ಟ್ ಸಂಚಿಕೆಯಲ್ಲಿ ಮುಂದುವರಿಯುತ್ತದೆ)

**ಡಾ|| ಟಿ. ಆರ್. ಚಂದ್ರಶೇಖರ**
'ವಚನ', ಪೋಸ್ಟಲ್ ರಸ್ತೆ, ಅಮರಾವತಿ, ಹೊಸಪೇಟೆ - ೫೮೩ ೨೦೧

*ಶಾಂತಿಯ ಬದಲು ಯುದ್ಧವನ್ನು ಆಯ್ದುಕೊಳ್ಳುವಷ್ಟು ಯಾರೂ ಮೂರ್ಖರಾಗಿರುವುದಿಲ್ಲ.*
*ಶಾಂತಿ ಕಾಲದಲ್ಲಿ ಮಕ್ಕಳು ತಮ್ಮ ತಂದೆಯಂದಿರ ಸಂಸ್ಕಾರ ನೆರವೇರಿಸಿದರೆ,*
*ಯುದ್ಧ ಸಮಯದಲ್ಲಿ ತಂದೆಯಂದಿರು ತಮ್ಮ ಮಕ್ಕಳ ಸಂಸ್ಕಾರ ನೆರವೇರಿಸುತ್ತಾರೆ.*
*– ಪುರಾತನ ಗ್ರೀಸಿನ ದೊರೆ ಕ್ರೊಯಿಸಸ್*

ಹಳೆಯ ಮಾದರಿಯ ಪುಟ್ಟ ಲೋಕಲ್ ಗಾಡಿಯಲ್ಲಿ ಮುಂದುವರೆದು ಸಲ್ಮೋನಾವನ್ನು ಸೇರಿಸುವ ಮುಖ್ಯ ರೈಲು ಮಾರ್ಗವನ್ನು ತಲುಪಲು ರಾತ್ರಿ ಎಕ್ಸ್‌ಪ್ರೆಸ್‌ನಲ್ಲಿ ರೋಮ್ ಬಿಟ್ಟ ಪಯಣಿಗರು ಪುಟ್ಟ ನಿಲ್ದಾಣವಾದ ಫ್ಯಾಬ್ರಿಯಾನೊದಲ್ಲಿ ಬೆಳಗಿನ ಜಾವದವರೆಗೂ ಕಾದಿರಬೇಕಾಯಿತು.

ಆ ಮುಂಜಾನೆಯ ನಸುಕಿನಲ್ಲಿ ರೈಲೊಂದು ನಿರ್ವಿಕಾರವಾಗಿ ಹೊಗೆಕಾರುತ್ತ ನಿಂತಿತ್ತು. ಆ ಹೊತ್ತಿಗಾಗಲೇ ಒಂದು ರಾತ್ರಿ ಕಳೆದ ಐವರು ಪ್ರಯಾಣಿಕರಿರುವ ಎರಡನೆ ದರ್ಜೆಯ ಕ್ಯಾರೇಜ್ ಒಂದು ಅಲ್ಲಿತ್ತು. ಅದೊಂದು ಹೊಗೆ ತುಂಬಿ ಗಿಜಿಗುಡುವ ಬೋಗಿ. ಅದರೊಳಕ್ಕೆ ಬಹಳ ದುಃಖ ಪೀಡಿತಳಾದ ಧಡೂತಿ ಹೆಂಗಸೊಬ್ಬಳನ್ನು ಆಕೃತಿ ಕಳೆದುಕೊಂಡ ಮೂಟೆಯೊಂದನ್ನು ಸೇರಿಸುವಂತೆ ತುರುಕಲಾಯಿತು. ಅವಳ ಹಿಂದೆ ಸಿಗರೇಟು ಸೇದುತ್ತ ಮುಲುಕುತ್ತ ಬರುತ್ತಿದ್ದ ಅವಳ ಗಂಡ - ಸಣ್ಣ ಆಕೃತಿಯ ಕೃಶವಾದ ಶರೀರದ, ಮೈಯ್ಯಲ್ಲಿ ನಿತ್ರಾಣ ತುಂಬಿದ, ಸಾವು ಬಿಳುಪಿನ ಮುಖದ, ಕಿರಿದಾದ ಹೊಳಪಿನ ಕಣ್ಣುಗಳ ನಾಚಿಕೆ ಹಾಗೂ ಚಡಪಡಿಕೆ ತೋರುತ್ತಿದ್ದ ಮನುಷ್ಯ ಅವನಾಗಿದ್ದ.

ಅವನು ಹಾಗೂ ಹೀಗೂ ಮಾಡಿ ಕೊನೆಗೂ ಕೂರಲು ಒಂದು ಸೀಟ್ ದೊರಕಿಸಿಕೊಂಡ. ತನ್ನ ಹೆಂಡತಿಗೆ ಸಹಾಯ ಮಾಡಿದ್ದಕ್ಕೆ ಹಾಗೂ ಅವಳಿಗೆ ಕೂರಲು ಅನುವು ಮಾಡಿಕೊಟ್ಟದ್ದಕ್ಕೆ ತನ್ನ ಸಹಪ್ರಯಾಣಿಕರಿಗೆ ವಿನಯಪೂರ್ವಕವಾಗಿ ಧನ್ಯವಾದಗಳನ್ನು ಸಲ್ಲಿಸಿದ. ನಂತರ ಅವಳೆಡೆಗೆ ತಿರುಗಿ ಅವಳ ಕೋಟಿನ ಕಾಲರನ್ನು ಕೆಳಕ್ಕೆ ಎಳೆಯುತ್ತ ಅವಳನ್ನು ನಯವಾಗಿ ವಿಚಾರಿಸಿದ,

''ನೀನು ಆರಾಮವಾಗಿದ್ದೀಯಾ, ಚಿನ್ನ?''

ಹೆಂಡತಿ ಈ ಮಾತಿಗೆ ಏನನ್ನೂ ಹೇಳದೆ ತನ್ನ ಮುಖವನ್ನು ಮುಚ್ಚಿಕೊಳ್ಳಲು ಕಾಲರನ್ನು ಮತ್ತೊಮ್ಮೆ ತನ್ನ ಕಣ್ಣಿನವರೆಗೂ ಎಳೆದುಕೊಂಡಳು.

''ಥತ್, ಹೇಸಿಗೆ ಪ್ರಪಂಚ'' - ಗಂಡ ವಿಷಾದದ ನಗೆಯಿಂದ ಗೊಣಗಾಡಿದ.

ಕೆಲವು ವಿಚಾರಗಳನ್ನು ತನ್ನ ಸಹಪ್ರಯಾಣಿಕರಿಗೆ ತಿಳಿಸುವುದು ತನ್ನ ಕರ್ತವ್ಯವೆಂದು ಅವನು ಭಾವಿಸಿದ. ಅವಳು ತನ್ನ ಹೆಂಡತಿ. ಬಹಳ ದುಃಖದಲ್ಲಿದ್ದಾಳೆ. ಅವಳಿಗೆ ಅನುಕಂಪದ ಅವಶ್ಯಕತೆಯಿದೆ. ಏಕೆಂದರೆ ಅವಳ ಒಬ್ಬನೇ ಒಬ್ಬ ಮಗ ಇಪ್ಪತ್ತು ವರ್ಷದ ಹುಡುಗನನ್ನು ಯುದ್ಧ ಸೆಳೆದೊಯ್ಯುತ್ತಿದೆ. ಆ ಮಗನಿಗಾಗಿ ತಾವಿಬ್ಬರೂ ತಮ್ಮ ಇಡೀ ಜೀವನವನ್ನೇ ಮೀಸಲಾಗಿರಿಸಿದ್ದರಿಂದ ರೋಮ್‌ಗೆ ಅವನ ಹಿಂದೆ ಹೋಗಲು ಸಲ್ಮೋನಾದಲ್ಲಿರುವ ತಮ್ಮ ಮನೆಯನ್ನು ಖಾಲಿಮಾಡಿದ್ದಾಗಿಯೂ ಅವನು ಹೇಳಿದ. ರೋಮ್‌ಗೆ ತಮ್ಮ ಮಗ ವಿದ್ಯಾರ್ಥಿಯಾಗಿ ಹೋದ ವಿಚಾರ, ಅಲ್ಲಿ ಅವನು ಸ್ವ-ಇಚ್ಛೆಯಿಂದ ಯುದ್ಧಕ್ಕೆ ಸೇರಲು ಅನುಮತಿ ದೊರಕಿಸಿಕೊಂಡದ್ದು, ಏನೇ ಆಗಲಿ ಕನಿಷ್ಠಪಕ್ಷ ಆರು ತಿಂಗಳವರೆಗೆ ಯುದ್ಧಭೂಮಿಗೆ ಅವನನ್ನು ಕಳುಹಿಸುವುದಿಲ್ಲವೆಂಬ ಭರವಸೆಯಿತ್ತವರು ಇದ್ದಕ್ಕಿದ್ದ ಹಾಗೆ ಇನ್ನು ಮೂರು ದಿನಗಳಲ್ಲಿ ಅವನು ಯುದ್ಧಕ್ಕೆ ಹೊರಟಿರುವುದರಿಂದ ತಾವು ಬಂದು ಅವನನ್ನು ಕಳುಹಿಸಿಕೊಡಬೇಕೆಂಬ ಅವರ 'ವಯರ' ತಮ್ಮ ಕೈ ಸೇರಿದ್ದು ಮೊದಲಾದ ಸಮಾಚಾರಗಳನ್ನು ಅವರಿಗೆ ಹೇಳಿದ.

ಆ ಜನ – ಬಹಳಮಟ್ಟಿಗೆ – ತನ್ನಂತೆ ಅದೇ ಪರಿಸ್ಥಿತಿಯಲ್ಲಿರುವವರು. ಅವರಲ್ಲಿ ಅವನ ಆ ಎಲ್ಲ ವಿವರಗಳು ಅನುಕಂಪದ ನೆರಳನ್ನಾದರೂ ಉತ್ತೇಜಿಸುವುದಿಲ್ಲವೆಂದು ಖಚಿತವಾದ ನಂತರ ಆ ಹೆಂಗಸು ತನ್ನ ದೊಡ್ಡ ಕೋಟಿನಡಿಯಲ್ಲಿ ಮೈ ನುಲುಚಿಕೊಳ್ಳುತ್ತಾ ತಿರುಚಿಕೊಳ್ಳುತ್ತಾ ಒಮ್ಮೊಮ್ಮೆ ಕಾಡುಮೃಗದಂತೆ ಗುರುಗುಟ್ಟುತ್ತಿದ್ದಳು. ಇದುವರೆಗೂ ವಿಶೇಷವಾಗಿ ಗಮನವಿರಿಸಿ ಕೇಳುತ್ತಿದ್ದವನೊಬ್ಬ ಹೇಳಿದ.

''ನಿಮ್ಮ ಮಗ ಈಗ ತಾನೆ ಯುದ್ಧಕ್ಕೆ ಹೋಗುತ್ತಿದ್ದಾನೆ ಎಂಬುದಕ್ಕೆ ನೀವು ದೇವರಿಗೆ ನಿಮ್ಮ ಕೃತಜ್ಞತೆಗಳನ್ನು ಸಲ್ಲಿಸಬೇಕು. ನಮ್ಮವನನ್ನು ಅಲ್ಲಿಗೆ ಯುದ್ಧದ ಮೊದಲ ದಿನವೇ ಕಳುಹಿಸಲಾಗಿತ್ತು. ಈಗಾಗಲೇ ಅವನು ಎರಡು ಬಾರಿ ಗಾಯಗೊಂಡು ವಾಪಸ್ ಬಂದಿದ್ದು ಮತ್ತೆ ಯುದ್ಧಕ್ಕೆ ಕಳುಹಿಸಲ್ಪಟ್ಟಿದ್ದಾನೆ!''

''ನನ್ನದೇನಂತೀರಿ. ನನ್ನ ಇಬ್ಬರು ಮಕ್ಕಳು ಮತ್ತು ನನ್ನ ಅಣ್ಣನ ಮೂವರು ಮಕ್ಕಳು ಯುದ್ಧದಲ್ಲೇ ಇದ್ದಾರೆ!'' ಮತ್ತೊಬ್ಬ ಪ್ರಯಾಣಿಕನೆಂದ.

''ಇರಬಹುದು. ನಮ್ಮ ವಿಷಯದಲ್ಲಿ ಅವನು ನಮ್ಮ ಒಬ್ಬನೇ ಮಗ!'' ಗಂಡ ತನ್ನ ಅಭಿಪ್ರಾಯ ಕೊಡುವ ಧೈರ್ಯ ಮಾಡಿದ.

''ಅದರಲ್ಲೇನು ವ್ಯತ್ಯಾಸ? ಅತಿಯಾದ ಗಮನಿಸುವಿಕೆಯಿಂದ ನಿಮ್ಮ ಒಬ್ಬನೇ ಮಗನನ್ನು ನೀವು ಹಾಳುಮಾಡಬಹುದು. ಆದರೆ ನಿಮಗೆ ಇವನಲ್ಲದೆ ಬೇರೆ ಮಕ್ಕಳೇನಾದರೂ ಇದ್ದಲ್ಲಿ ಅವರನ್ನೆಲ್ಲ ಪ್ರೀತಿಸುವುದಕ್ಕಿಂತಲೂ ಹೆಚ್ಚಿಗೇನೂ ಇವನನ್ನು ಪ್ರೀತಿಸಲಾರಿರಿ. ತಂದೆಯ ಪ್ರೀತಿಯನ್ನು ಬ್ರೆಡ್ಡಿನಂತೆ ತುಂಡುಗಳನ್ನಾಗಿ ಮಾಡಿ ಆ ತುಣುಕುಗಳನ್ನು ಮಕ್ಕಳಲ್ಲಿ ಸಮಪಾಲು ಬರುವಂತೆ ಹಂಚಲು ಬರುವುದಿಲ್ಲ. ಮಗ ಒಬ್ಬನೇ ಇರಲಿ ಅಥವಾ ಮಕ್ಕಳು ಹತ್ತು ಜನರೇ ಇರಲಿ ತಂದೆಯಾದವನು ತನ್ನೆಲ್ಲ ಪ್ರೀತಿಯನ್ನು ಯಾವ ಭೇದಭಾವವಿಲ್ಲದೆ ಪ್ರತಿಯೊಂದು ಮಗುವಿಗೂ ನೀಡುತ್ತಾನೆ ಮತ್ತು ನಾನೀಗ ನನ್ನ



ಇಬ್ಬರು ಮಕ್ಕಳಿಗಾಗಿ ಬಾಧೆಪಡುತ್ತಿದ್ದರೆ ನಾನು ಪ್ರತಿಯೊಬ್ಬನಿಗೂ ಬಾಧೆಪಡುವುದು ಅರ್ಧರ್ಧದಷ್ಟಲ್ಲ, ಆದರೆ ಪೂರ್ತಿಯಾಗಿ........''

''ನಿಜ...... ನಿಜ......'' ನಿಟ್ಟುಸಿರುಗರೆದ ದಿಕ್ಕು ತೋಚದ ಗಂಡ. ''ಆದರೆ ಒಂದು ವೇಳೆ (ಅದು ನಿಮ್ಮ ವಿಷಯದಲ್ಲಿ ಎಂದೂ ಆಗಲಿಕ್ಕಿಲ್ಲ ಎಂದೇ ನಾವೆಲ್ಲ ಆಶಿಸುತ್ತೇವೆ) ಒಬ್ಬ ತಂದೆಯ ಇಬ್ಬರು ಮಕ್ಕಳು ಯುದ್ಧಭೂಮಿಯಲ್ಲಿದ್ದರೆ, ಅವರಲ್ಲಿ ಒಬ್ಬನನ್ನು ಕಳೆದುಕೊಂಡರೆ ಅವನನ್ನು ಸಂತೈಸಲು ಇನ್ನೊಬ್ಬ ಉಳಿದಿರುತ್ತಾನೆ..... ಆಗ.....!''

''ಹೌದು,'' ಮಾತಿನಲ್ಲಿ ಮಧ್ಯ ಪ್ರವೇಶಿಸಿ ಮತ್ತೊಬ್ಬ ಉತ್ತರಿಸಿದ. ''ಅವನನ್ನು ಸಂತೈಸಲು ಒಬ್ಬ ಮಗ ಉಳಿಯುತ್ತಾನೆ. ಆದರೆ ಆ ಒಬ್ಬ ಮಗನಿಗಾಗಿ ಅವನು ಬದುಕಿ ಉಳಿಯಬೇಕಾಗುತ್ತದೆ. ಅದೇ ಒಬ್ಬನೇ ಮಗನ ತಂದೆಯ ವಿಷಯದಲ್ಲಿ ಮಗನು ಸತ್ತು ಹೋದರೆ ತಂದೆಯೂ ಸಹ ಸಾಯುವುದರ ಮೂಲಕ ತನ್ನ ಬೇಗುದಿಗೇ ಕೊನೆ ಎಳೆಯುತ್ತಾನೆ. ಈ ಎರಡೂ ಸಂದರ್ಭಗಳಲ್ಲಿ ಯಾವುದು ತೀರಾ ಕೆಟ್ಟದ್ದು? ನಿನ್ನದಕ್ಕಿಂತಲೂ ನನ್ನ ಪರಿಸ್ಥಿತಿ ಅದೆಷ್ಟು ಕೆಟ್ಟದ್ದೂ ಅಂತ ನಿಮಗೆ ಕಾಣೋಲ್ವೆ ?''

'ನಾನ್ಸೆನ್ಸ್', ಆರಕ್ತವಾಗಿದ್ದ ಅತಿಯಾದ ಬಿಳಿಚಿಕೊಂಡ ಬೂದುಬಣ್ಣದ ಕಣ್ಣುಗಳ ಕೆಂಚುಮುಖದ ಧಡೂತಿ ಪಯಣಿಗನೊಬ್ಬ ಮಧ್ಯೆ ಮಾತನಾಡಿದ.

ಅವನು ಏದುಸಿರು ಬಿಡುತ್ತಿದ್ದ. ಅವನ ನಿಶ್ಶಕ್ತ ದೇಹ ಒಳಗೊಳ್ಳಲಾರದಂತಹ ಅವನೊಳಗಿನ ಕ್ರೌರ್ಯ ಅನಿಯಂತ್ರಿತ ಚೈತನ್ಯದಿಂದ ಅವನ ಉಬ್ಬಿದ ಕಣ್ಣುಗಳ ಮೂಲಕ ಚಿಮ್ಮಿ ಹೊರಬರುವಂತೆ ಭಾಸವಾಗುತ್ತಿತ್ತು.

'ನಾನ್ಸೆನ್ಸ್', ಅವನು ತನ್ನ ಮುಂದಿನ ಎರಡು ಹಲ್ಲುಗಳು ಕಳಚಿದ್ದು ಕಾಣದಂತೆ ತನ್ನ ಕೈಯಿಂದ ಮರೆಮಾಚುವ ಪ್ರಯತ್ನ ಮಾಡುತ್ತಾ ಪುನಃ ನುಡಿದ. 'ನಾನ್ಸೆನ್ಸ್, ನಮ್ಮ ಸ್ವಂತ ಲಾಭಕ್ಕಾಗಿ ನಾವು ನಮ್ಮ ಮಕ್ಕಳನ್ನು ಹೆರುತ್ತೇವೆಯೇ ?'

ಇತರ ಪ್ರಯಾಣಿಕರು ವ್ಯಥೆಯಿಂದ ಅವನನ್ನು ಎವೆಯಿಕ್ಕದೆ ನೋಡಿದರು. ಯುದ್ಧ ಪ್ರಾರಂಭವಾದಂದಿನಿಂದ ಯುದ್ಧಭೂಮಿಯಲ್ಲಿ ತನ್ನ ಮಗನನ್ನು ಬಿಟ್ಟಿದ್ದವನೊಬ್ಬ ನಿಟ್ಟುಸಿರುಗರೆದು ನುಡಿದ : ''ನೀನು ಹೇಳಿದ್ದು ಸರಿ. ನಮ್ಮ ಮಕ್ಕಳು ನಮಗೆ ಸೇರಿದವರಲ್ಲ, ಅವರು ದೇಶಕ್ಕೆ ಸೇರಿದವರು.......!''

''ಶುದ್ಧ ಬೊಗಳೆ'' ಧಡೂತಿ ಪಯಣಿಗ ಮಾರ್ನುಡಿದ. ''ನಮ್ಮ ಮಕ್ಕಳನ್ನು ಹೆರುವಾಗ ನಾವು ನಮ್ಮ ದೇಶದ ಬಗೆಗೆ ಚಿಂತಿಸುತ್ತೇವೆಯೆ ? ನಮ್ಮ ಮಕ್ಕಳು ಏಕೆ ಹುಟ್ಟುತ್ತಾರೆ ಎಂದರೆ... ಇರಲಿ ಏಕೆಂದರೆ ಅವರು ಹುಟ್ಟಲೇಬೇಕು ಮತ್ತು ಅವರು ಜೀವ ತಳೆದಾಗ ನಮ್ಮ ಜೀವವನ್ನು ತಮ್ಮಲ್ಲಿ ಧರಿಸಿ ಬರುತ್ತಾರೆ. ಇದು ಸತ್ಯವಾದದ್ದು. ನಾವು ಅವರಿಗೆ ಸೇರಿದವರು. ಆದರೆ ಅವರು ನಮಗೆ ಎಂದೂ ಸೇರಿದವರಲ್ಲ. ಅವರಿಗೆ ಇಪ್ಪತ್ತು ವರ್ಷವಾದಾಗ ನಾವು ಆ ವಯಸ್ಸಿನಲ್ಲಿ ಹೇಗಿದ್ದೆವೋ ಹಾಗೆಯೇ ಇರುತ್ತಾರೆ. ನಮಗೂ ಒಬ್ಬ ತಂದೆ ತಾಯಿ ಅಂತ ಇದ್ದರು. ಆದರೆ ಅದರ ಜೊತೆಗೆ ಇನ್ನೆಷ್ಟೋ ಇತರ ಬೇರೆಯವೂ ಸಹ ಇದ್ದವು... ಹುಡುಗಿಯರು, ಸಿಗರೇಟುಗಳು, ಭ್ರಮೆಗಳು, ಹೊಸ ಟೈಗಳು... ಮತ್ತು ದೇಶ. ಹೇಗೂ ಅದರ ಕರೆಗೆ ಓಗೊಡುತ್ತಿದ್ದೆವು – ನಮಗೆ ಇಪ್ಪತ್ತು ಆದಾಗ – ಅಪ್ಪ ಅಮ್ಮ ಬೇಡ ಅಂದಿದ್ದರೂ ಸಹ. ಈಗ ನಮ್ಮ ಈ ವಯಸ್ಸಿನಲ್ಲಿ ನಮ್ಮ ದೇಶಪ್ರೇಮ ನಮ್ಮ ಮಕ್ಕಳ ಮೇಲಿರುವ ನಮ್ಮ ಪ್ರೇಮಕ್ಕಿಂತಲೂ ಹೆಚ್ಚಿನದಾಗಿದೆ ಎನ್ನಿ. ಆದರೂ...... ನಮ್ಮಲ್ಲಿ ಯಾರಾದರೂ ಯುದ್ಧ ಭೂಮಿಯಲ್ಲಿರುವ ತಮ್ಮ ಮಗನ ಜಾಗವನ್ನು ತೆಗೆದುಕೊಳ್ಳಲು ಸಾಧ್ಯವಾದರೆ ಹೋಗದೇ ಇರುವವರಿದ್ದಾರೆಯೇ ?''

ಸುತ್ತಲೂ ಮೌನವಿತ್ತು. ಪ್ರತಿಯೊಬ್ಬರೂ ಒಪ್ಪಿಗೆ ಸೂಚಿಸುವಂತೆ ತಲೆಯಾಡಿಸುತ್ತಿದ್ದರು.

ಧಡೂತಿ ಮನುಷ್ಯ ತನ್ನ ಮಾತು ಮುಂದುವರಿಸಿದ : ''ನಮ್ಮ ಮಕ್ಕಳು ಇಪ್ಪತ್ತು ವರ್ಷವಾದಾಗ ನಾವೇಕೆ ಅವರ ಭಾವನೆಗಳನ್ನು ಪರಿಗಣಿಸಬಾರದು, ಗೌರವಿಸಬಾರದು ? ಅವರ ವಯಸ್ಸಿಗೆ ಅವರು ನಮ್ಮ ಮೇಲಿನ ಪ್ರೀತಿಗಿಂತಲೂ ಹೆಚ್ಚಾಗಿ ತಮ್ಮ ದೇಶಪ್ರೇಮವನ್ನು ಕುರಿತು ಯೋಚಿಸಬೇಕಾದ್ದು ಸಹಜವಲ್ಲವೇ ? (ನಾನು ಸಭ್ಯ ನಡತೆಯ ಹುಡುಗರನ್ನು ಕುರಿತು ಮಾತನಾಡುತ್ತಿದ್ದೇನೆ ಬಿಡಿ). ಹೊರಗೆ ಅಡ್ಡಾಡಲು ಆಗದೆ ಮನೆಯಲ್ಲೇ ಉಳಿಯಬೇಕಾದ ವಯಸ್ಸಾಗಿರುವ ನಮ್ಮಂಥವರ ಯೋಗಕ್ಷೇಮವನ್ನು ಅವರು ನೋಡಿಕೊಳ್ಳಬೇಕಾದುದು ಸಹಜವಲ್ಲವೆ ? ಹಸಿವಿನಿಂದ ಸಾಯದೇ ಇರುವುದಕ್ಕಾಗಿ ನಾವು ತಿನ್ನಬೇಕಾದ ರೊಟ್ಟಿಯಂತೆ ದೇಶ ಒಂದು ಸಹಜವಾದ ಅಗತ್ಯವಾದರೆ, ದೇಶ ಇರುವುದಾದರೆ, ಯಾರಾದರೂ ಹೋಗಿ ಅದನ್ನು ರಕ್ಷಿಸಬೇಕು. ನಮ್ಮ ಮಕ್ಕಳು ತಮಗೆ ಇಪ್ಪತ್ತಾದಾಗ ಹೋಗುತ್ತಾರೆ. ಅವರು ನಮ್ಮಿಂದ ಕಣ್ಣೀರ ಬಯಸುವುದಿಲ್ಲ, ಏಕೆಂದರೆ ಅವರು ಸತ್ತರೆ ಸಂತೋಷದಿಂದ ಬಂದೂಕಿನ ಜ್ವಾಲೆಗಳಲ್ಲಿ ದಹಿಸಲ್ಪಟ್ಟು ಸಾಯುತ್ತಾರೆ. (ನಾನು ಸಭ್ಯ ನಡತೆಯ ಹುಡುಗರನ್ನು ಕುರಿತು ಮಾತನಾಡುತ್ತಿದ್ದೇನೆ ಬಿಡಿ). ಜೀವನದ ಕುರೂಪದ ಮಗ್ಗುಲುಗಳು, ಅದರ ಬೇಸರ, ಅದರ ಸಣ್ಣತನ, ಭ್ರಾಮಕ ನಿವಾರಣೆಯ ಕಹಿತನಗಳಿಲ್ಲದೆ ಸಂತೋಷದಿಂದ ಈಗ ಒಬ್ಬನು ಸಣ್ಣ ವಯಸ್ಸಿಗೇ ಸಾಯುವುದಾದರೆ... ಅವನಿಗಾಗಿ ಹೆಚ್ಚಿಗೆ ಏನನ್ನು ಕೇಳಬಲ್ಲೆವು ? ನನ್ನಂತೆ ಪ್ರತಿಯೊಬ್ಬನೂ ಅಳುವುದನ್ನು ನಿಲ್ಲಿಸಬೇಕು, ಪ್ರತಿಯೊಬ್ಬನೂ ನಗಬೇಕು ಅಥವಾ..... ನನ್ನಂತೆ ದೇವರಿಗೆ ಕೃತಜ್ಞತೆಯನ್ನಾದರೂ ಸಲ್ಲಿಸಬೇಕು – ಏಕೆಂದರೆ ನನ್ನ ಮಗ ತಾನು ಸಾಯುವ ಮೊದಲು ತಾನು ಬಯಸಬಹುದಾದ ಅತ್ಯಂತ ಶ್ರೇಷ್ಠವಾದ ರೀತಿಯಲ್ಲಿ ತನ್ನ ಜೀವನವನ್ನು ಕೊನೆಗಾಣಿಸಿಕೊಂಡಿದ್ದಕ್ಕೆ ಸಂತೃಪ್ತಿಯಿಂದ ಸಾಯುತ್ತಿದ್ದೇನೆ ಅಂತ ಒಂದು ಸುದ್ದಿ ಕಳುಹಿಸಿದ. ಅದಕ್ಕೆ ನೀವು ಕಾಣುವ ಹಾಗೆ ನಾನು ದುಃಖವನ್ನು ಸಹ ತಳೆದಿಲ್ಲ.....''

ಅವನು ತಾನು ಧರಿಸಿದ ಹಗುರವಾದ ಚಿಗರಿ ಚರ್ಮದ ಕೋಟನ್ನು ಪ್ರದರ್ಶಿಸುವ ಉದ್ದೇಶದಿಂದ ಅದನ್ನೊಮ್ಮೆ ಜಾಡಿಸಿಕೊಂಡ. ಅವನ ಕಳಚಿಹೋದ ಹಲ್ಲುಗಳ ಖಾಲಿ ಜಾಗದ ಮೇಲಿದ್ದ ನೀಲಿಗಟ್ಟಿದ ಅವನ ತುಟಿ ನಡುಗುತ್ತಿತ್ತು. ಅವನ ಕಣ್ಣುಗಳು ನೀರು ತುಂಬಿ ಅಚಲವಾಗಿದ್ದವು. ಆ ಕೂಡಲೇ ಅವನು ಅಳುವಿನ ಬಿಕ್ಕಳಿಕೆಯಾಗಬಹುದಾದುದನ್ನು ಕೀರಲು ನಗೆಯಾಗಿಸಿ ಅದರೊಂದಿಗೆ ತನ್ನ ಮಾತು ಮುಗಿಸಿದ.

''ಸರಿಯಾದ ಮಾತು.... ಸರಿಯಾದ ಮಾತು......'' ಇತರರು ಸಮ್ಮತಿಸಿದರು.

ಮೂಲೆಯಲ್ಲಿ ಮೂಟೆಯಂತೆ ತನ್ನ ಕೋಟಿನಡಿಯಲ್ಲಿ ಮುದುಡಿ ಕುಳಿತೇ ಇದ್ದ ಆ ಹೆಂಗಸು ಎಲ್ಲರ ಮಾತುಗಳನ್ನು ಕೇಳುತ್ತಿದ್ದಳು. ಆಕೆ ಕಳೆದ ಮೂರು ತಿಂಗಳಿಂದ ಪ್ರಯತ್ನಿಸುತ್ತಿದ್ದಾಳೆ – ತನ್ನ ಗಂಡನ ಹಾಗೂ ತನ್ನ ಸ್ನೇಹಿತರ ಮಾತುಗಳಲ್ಲಿ ದುಃಖದಾಳದಲ್ಲಿದ್ದ ತನ್ನನ್ನು ಸಂತೈಸುವಂಥದು ಏನಾದರೂ ಸಿಕ್ಕೀತೆ ಅಂತ. ತಾಯಿಯಾದವಳು ಯಾವ ರೀತಿ ತನ್ನ ಮಗನನ್ನು ಬರಿಯ ಸಾವಿಗಲ್ಲದೆ ಬಹುಶಃ ಅಪಾಯಕಾರಿಯಾದ ಜೀವನಕ್ಕೆ ಕಳುಹಿಸುವಲ್ಲಿ ಹೇಗೆ ತ್ಯಾಗ ಮಾಡಬೇಕು ಎಂಬುದರ ಕುರಿತು ಏನಾದರೂ ತೋರೀತೆ ಅಂತ. ಅವರು ಆಡಿದ ಅನೇಕ ಮಾತುಗಳಲ್ಲಿ ಒಂದೇ ಒಂದು ಸಾಂತ್ವನದ ನುಡಿಯನ್ನು ಅವಳು ಕೇಳದಿದ್ದಾಗ ಅವಳು ಯೋಚಿಸಿದಂತೆ ಯಾರೊಬ್ಬರೂ ಅವಳ ಭಾವನೆಗಳನ್ನು ಹಂಚಿಕೊಳ್ಳುವುದನ್ನು ಅವಳು ಕಾಣದಿದ್ದಾಗ ಅವಳ ದುಃಖದ ತೀವ್ರತೆ ಹೆಚ್ಚಾಯಿತು.

ಆದರೆ ಈಗ ಆ ಪ್ರಯಾಣಿಕನ ಮಾತುಗಳು ಅವಳನ್ನು ಆಶ್ಚರ್ಯಚಕಿತಳನ್ನಾಗಿ ಹಾಗೂ ಬಹಳ ಮಟ್ಟಿಗೆ ದಿಗ್ಭ್ರಾಂತಳನ್ನಾಗಿಸಿದವು. ತಪ್ಪು ಬೇರೆಯವರದಲ್ಲ ಹಾಗೂ ಅವರಿಗೆ ತನ್ನನ್ನು ಅರ್ಥಮಾಡಿಕೊಳ್ಳಲಾಗಲಿಲ್ಲ ಎಂಬುದಕ್ಕೆ ಬದಲಾಗಿ ತಮ್ಮ ಮಕ್ಕಳ ಅಗಲುವಿಕೆಗಲ್ಲದೆ ಅವರ ಸಾವಿಗೂ ಸಹ ಅಳದೆ ಸ್ವತಃ ತ್ಯಾಗ ಮಾಡಲಿಚ್ಛಿಸುವ ಆ ತಂದೆ-ತಾಯಿಯರ ಎತ್ತರಕ್ಕೆ ತಾನು ಏರಲಾರೆನೆಂಬ ವಿಚಾರ ಅವಳಿಗೆ ಇದ್ದಕ್ಕಿದ್ದ ಹಾಗೆ ಮನವರಿಕೆಯಾಯಿತು.

ಅವಳು ತನ್ನ ತಲೆಯನ್ನು ಮೇಲೆತ್ತಿದಳು. ಧಡೂತಿ ಮನುಷ್ಯ ತನ್ನ ಮಗ ಯಾವ ರೀತಿ ವಿಷಾದವಿಲ್ಲದೆ ಸಂತೋಷದಿಂದ ತನ್ನ ರಾಜನಿಗಾಗಿ ಮತ್ತು ತನ್ನ ದೇಶಕ್ಕಾಗಿ ವೀರನಂತೆ ಕೆಡೆದನೆಂಬುದನ್ನು ಕುರಿತು ಕೆಲವು ವಿವರಗಳನ್ನು ತನ್ನ ಜೊತೆಗಾರರಿಗೆ ನೀಡುತ್ತಿದ್ದುದನ್ನು ಅವಳು ಅತ್ಯಂತ ಆಸಕ್ತಿಯಿಂದ ಕೇಳಿಸಿಕೊಳ್ಳಲು ಪ್ರಯತ್ನಿಸುತ್ತಾ ತಾನು ಕುಳಿತ ಮೂಲೆಯಿಂದ ಮೇಲೆದ್ದು ಬಾಗಿದ್ದಳು. ಅವಳಿಗೆ ಅನಿಸಿತು, ತಾನು ಎಂದೂ ಕನಸಿನಲ್ಲೂ ಕಾಣದಂಥ ಪ್ರಪಂಚದಲ್ಲಿ ಅದುವರೆಗೂ ಅಪರಿಚಿತವಾದ ಪ್ರಪಂಚದಲ್ಲಿ ಮುಗ್ಗರಿಸಿದ್ದೇನೆ ಅಂತ. ತನ್ನ ಮಗುವಿನ ಸಾವನ್ನು ಕುರಿತು ಎನಿತೂ ಉದ್ವೇಗವಿಲ್ಲದೆ ಮಾತನಾಡುವ ಆ ಧೈರ್ಯಶಾಲಿ ತಂದೆಯನ್ನು ಅಭಿನಂದಿಸಲು ಪ್ರತಿಯೊಬ್ಬರೂ ಸೇರುತ್ತಿದ್ದುದನ್ನು ಕೇಳಲು ಅವಳಿಗೆ ಅದೆಷ್ಟೋ ಸಂತೋಷವಾಯಿತು.

ಆಗ ಇದ್ದಕ್ಕಿದ್ದಂತೆ ಅದುವರೆಗೂ ಆಡಲಾದ ಯಾವ ಮಾತನ್ನೂ ತಾನು ಕೇಳಿಸಿಕೊಂಡಿಲ್ಲವೇನೋ ಎಂಬಂತೆ, ಬಹುಪಾಲು ತಾನೊಂದು ಕನಸಿನಿಂದ ಎಚ್ಚರಗೊಳ್ಳುವವಳಂತೆ ಹೀಗೆಂದು ಕೇಳುತ್ತಾ ಮುದುಕನೆಡೆಗೆ ತಿರುಗಿದಳು :

''ಅಂದ್ರೆ..... ನಿಮ್ ಮಗ ನಿಜವಾಗ್ಲೂ ಸತ್ತಿದ್ದಾನಾ ?''

ಪ್ರತಿಯೊಬ್ಬರೂ ಅವಳನ್ನೇ ಬಿಟ್ಟಕಣ್ಣಿನಿಂದ ನೋಡಿದರು. ಆ ಮುದುಕನೂ ಸಹ. ಅವನು ತನ್ನ ದೊಡ್ಡದಾದ ಉಬ್ಬಿದ, ಭಯಂಕರವಾಗಿ ನೀರಾಡುತ್ತಿದ್ದ ತೆಳು ಬೂದಿಬಣ್ಣದ ಕಣ್ಣುಗಳಿಂದ ಅವಳ ಮುಖದ ಮೇಲೆ ಆಳವಾದ ನೋಟವನ್ನು ಕೇಂದ್ರೀಕರಿಸುತ್ತ ಅವಳೆಡೆಗೆ ತಿರುಗಿದನು. ಸ್ವಲ್ಪ ವೇಳೆಯವರೆಗೆ ಅವನು ಉತ್ತರಿಸಲು ಪ್ರಯತ್ನಿಸಿದನು. ಆದರೆ ಅವನಿಂದ ಮಾತುಗಳೇ ಬರಲಿಲ್ಲ. ಆ ಮೂರ್ಖ ಅಸಂಬದ್ಧ ಪ್ರಶ್ನೆ ಕೇಳಿದ್ದಕ್ಕೆ ಅವನು ಅವಳನ್ನು ಬಹುಶಃ ಆಗಲೇ ನೋಡುತ್ತಿದ್ದಾನೋ ಎಂಬಂತೆ ನೋಡಿಯೇ ನೋಡಿದ. ತನ್ನ ಮಗ ನಿಜವಾಗಿ ಸತ್ತಿದ್ದಾನೆ. ಮರಳಿ ಬಾರದಂತೆ, ಎಂದೆಂದೂ ಮರಳಿ ಬಾರದಂತೆ ಹೊರಟು ಹೋಗಿದ್ದಾನೆ ಅಂತ ಅವನ ಮನಸ್ಸಿಗೆ ಇದ್ದಕ್ಕಿದ್ದಂತೆ ಕೊನೆಗೂ ಖಾತ್ರಿಯಾಗಿಹೋಯಿತು. ಅವನ ಮುಖ ಚಿಕ್ಕದಾಯಿತು. ಭಯಂಕರವಾಗಿ ಕಿವಿಚಲ್ಪಟ್ಟಿತು. ಆಗ ಅವನು ತ್ವರಿತವಾಗಿ ತನ್ನ ಜೇಬಿನಿಂದ ಕರವಸ್ತ್ರವನ್ನು ಈಚೆಗೆಳೆದು ಪ್ರತಿಯೊಬ್ಬರೂ ಅತ್ಯಾಶ್ಚರ್ಯದಿಂದ ನೋಡುತ್ತಿರಲು ಮನನೋಯುವ, ಎದೆಬಿರಿಯುವ ಅಂಕೆ ಮೀರಿದ ಬಿಕ್ಕಳಿಕೆಯಿಂದ ರೋದಿಸತೊಡಗಿದನು.

ಕನ್ನಡಕ್ಕೆ : ಎ. ಪ್ರಾಣೇಶ್ ರಾವ್
೧೪೬೬೪/೨೯, 'ಶ್ರೀ ಸುಧೀಂದ್ರ', ಇಂಡಸ್ಟ್ರಿಯಲ್ ಎಸ್ಟೇಟ್ ಹಿಂಭಾಗ, ರಾಜೀವನಗರ, ಹೊಸಪೇಟೆ-೫೮೩ ೨೦೩

# ವರ್ಷ ವೈಭವ



**ಮ**ಳೆಗಾಗಿ ಕಾಯುತ್ತಾ ಕುಳಿತು ಕತ್ತೆತ್ತಿ ನೋಡಿದಾಗ ಮೋಡಗಳು ಕಂಡರೇ ಸಮಾಧಾನ, ತೃಪ್ತಿ. ಆದ್ದರಿಂದ ನಭಾವಲೋಕನಕ್ಕೆ ತಾತ್ಕಾಲಿಕ ರಜೆ ಮಂಜೂರು ಮಾಡಬಹುದು. ಆದರೂ ಮಳೆ ಹೊತ್ತ ಮೋಡಗಳ ನಡುವೆ ಕಿಂಡಿಯೊಂದು ಕಾಣಬಹುದು. ಅದರ ಮೂಲಕ ಕಾಣುವ ವೈಭವವೇ ನಕ್ಷತ್ರ ಲೋಕದ ಆಕರ್ಷಣೆಯನ್ನು ಜೀವಂತವಾಗಿ ಇರಿಸುತ್ತದೆ. ನೆತ್ತಿಯ ಮೇಲೆ ಕಂಗೊಳಿಸುವ ಎರಡು ಪ್ರಕಾಶಮಾನ ನಕ್ಷತ್ರಗಳು ಚಿತ್ರಾ (ಕನ್ಯಾರಾಶಿಯದು) ಮತ್ತು ಸ್ವಾತಿ (ಸಹದೇವ, ಬೂಟಿಸ್, ನಕ್ಷತ್ರ ಪುಂಜದ್ದು). ಉತ್ತರದಲ್ಲಿ ಪರಿಚಿತ ಸಪ್ತರ್ಷಿಮಂಡಲ. ಮೋಡ ತುಂಬಿರುವುದರಿಂದ ಇತರ ನಕ್ಷತ್ರಗಳು ಕಾಣುತ್ತಿಲ್ಲ ಎಂದು ನೀವು ಊಹಿಸಬಹುದು. ಆದರೆ ನೆತ್ತಿಯಿಂದ ಆಗ್ನೇಯ, ನೈಋತ್ಯಗಳತ್ತ ದೃಷ್ಟಿಹರಿಸಿದಿರಾದರೆ (ಅಲ್ಲಿ ಮೋಡಗಳು ಕಿಟಕಿ ತೆರೆದಿಟ್ಟು ನಿಮಗೆ ಅನುವು ಮಾಡಿಕೊಟ್ಟದ್ದೇ ಆದರೆ) ಆಕಾಶಗಂಗೆಯ ಅದ್ಭುತ ದೃಶ್ಯ ನೋಡಲು ಸಿಗುತ್ತದೆ. ವೃಶ್ಚಿಕ ರಾಶಿಯ ಸುಂದರ ವಿನ್ಯಾಸ, ಜ್ಯೇಷ್ಠಾ, ಅನುರಾಧಗಳ ಹೊಳಪು, ಕಾಫಿಯ ಹಿಡಿ ಪಾತ್ರೆಯನ್ನು (ಕೆಟಲ್) ಹೋಲುವ ಧನುರಾಶಿ ಇವು ಸುತ್ತಲಿನ ಕಪ್ಪು ಮೋಡದ ಹಿನ್ನೆಲೆಯಲ್ಲೂ ಮನ ಸೆಳೆಯುವುವು. ಹಾಗೆಯೇ ಬೇಸಿಗೆ ತ್ರಿಕೋಣ ಎಂದು ಕರೆಯಿಸಿಕೊಳ್ಳುವ ದನೆಬ್ (ರಾಜಹಂಸ ಸಿಗ್ನಸ್ ನಕ್ಷತ್ರ ಪುಂಜದ್ದು), ಅಲ್ಟೇರ್ (ಶ್ರವಣ, ಅಕ್ವಿಲಾ ಅಥವಾ ಗರುಡ ನಕ್ಷತ್ರ ಪುಂಜದ್ದು) ಮತ್ತು ವೇಗಾ (ಅಭಿಜಿತ್, ಲೈರಾ ಅಥವಾ ವೀಣಾ ನಕ್ಷತ್ರ ಪುಂಜದ್ದು) – ಇವು ತೆಳ್ಳನೆಯ ಮೋಡದ ಹಿನ್ನೆಲೆಯಲ್ಲಿಯೂ ಕಾಣುವುವು. ಆಕಾಶಗಂಗೆಯ ಒಂದು ಭಾಗ ಇವುಗಳ ಮೂಲಕವೂ ಹಾದು ಹೋಗುವುದು. ಆದ್ದರಿಂದ ಮೋಡ ಸ್ವಲ್ಪವೇ ಬಿಡುವು ಕೊಟ್ಟಾಗಲೂ ಈ ವರ್ಷ ವೈಭವವನ್ನು ನೋಡಿ ಆನಂದಿಸಬಹುದು.




ಇಲ್ಲಿಯವರೆಗೂ ಸಂಜೆಯ ಆಕಾಶದಲ್ಲಿ ಬೆಳಗುತ್ತಿದ್ದ ಗುರುಗ್ರಹ ಪಶ್ಚಿಮದ ಅಂಚಿಗೆ ಸರಿದಿದೆ. ಮೋಡಗಳ ಹಿಂದೆ ಮರೆಯಾಗಿದ್ದರೂ ಸಣ್ಣದೊಂದು ಕಿಂಡಿ ದೊರೆತಾಗ ಕಾಣಬಹುದು. ಸಂಜೆ ಇನ್ನಾವುದೇ ಗ್ರಹ ಕಾಣುವುದಿಲ್ಲ. ಮಳೆಗಾಲಕ್ಕೆಂದು ಅವೂ ರಜೆ ತೆಗೆದುಕೊಂಡುಬಿಟ್ಟಿವೆಯೇನೋ ಎಂದು ನಿರಾಶರಾಗಬೇಕಿಲ್ಲ. ತಿಂಗಳ ಕೊನೆಗೆ ರಾತ್ರಿ ಸುಮಾರು ೧೦ ಗಂಟೆಗೆ ಮಂಗಳ ಗ್ರಹ ಉದಯಿಸುತ್ತದೆ. ಮುಂದಿನ ತಿಂಗಳು ಪ್ರಕಾಶದ ಗರಿಷ್ಠವನ್ನು ಮುಟ್ಟುವ ಸಿದ್ಧತೆಯಲ್ಲಿರುವ ಇದು ಈಗಾಗಲೇ ಸಾಕಷ್ಟು ಪ್ರಕಾಶಮಾನವಾಗಿದೆ. ಮಧ್ಯರಾತ್ರಿಯಲ್ಲಿ ಕತ್ತೆತ್ತಿ ನೋಡಿದವರು ಇದನ್ನು ಕಂಡರೆ, ಇದು ಯಾವ ಹೊಸ ಕಾಯ? UFO ಇರಬಹುದೇ? ಸೂಪರ್ನೋವಾ ಇರಬಹುದೇ? ಎಂದೆಲ್ಲಾ ಚಿಂತಿಸಬಹುದು. ಸುತ್ತಲೂ ಸಾಕಷ್ಟು ಪ್ರಕಾಶಮಾನವಾದ ನಕ್ಷತ್ರಗಳು ಇಲ್ಲ. (ಕುಂಭರಾಶಿ) ಆದ್ದರಿಂದ ನಕ್ಷತ್ರವೇ? ಅಲ್ಲವೇ? ಗ್ರಹವೇ? ಎಂಬೆಲ್ಲಾ ಅನುಮಾನಗಳು ಉಂಟಾಗುವುವು. ಬೆಳಗಿನ ಜಾವ ಮಂಗಳ ಗ್ರಹ ಪಶ್ಚಿಮದಲ್ಲಿ ಕಾಣುತ್ತದೆ. ಪೂರ್ವದಲ್ಲಿ ದಿಗಂತದ ಅಂಚಿನಲ್ಲಿ, ಶುಕ್ರ, ಬುಧ, ಶನಿ ಕಾಣುತ್ತವೆ. ಜುಲೈ ೧ ರಂದು ಪಕ್ಕಪಕ್ಕದಲ್ಲೇ ಕಾಣುವ ಈ ಎರಡೂ ಚುಕ್ಕೆಗಳನ್ನು ಗಮನಿಸುತ್ತಾ ಬನ್ನಿ. ತಿಂಗಳ ಕೊನೆಗೆ ಉಳಿಯುವುದು ಶನಿಗ್ರಹ ಮಾತ್ರ. ಅದು ದಿನದಿನಕ್ಕೆ ಮೇಲೇರಿದಂತೆ ಕಾಣುವುದು. ದಿನ ದಿನಕ್ಕೆ ಪೂರ್ವದ ಅಂಚಿಗೆ ಸರಿಯುವ ಬುಧ ತಿಂಗಳ ಕೊನೆಗೆ ಕಾಣದಾಗುತ್ತದೆ. ಆದರೆ ಸಂಜೆಯ ಆಕಾಶದಲ್ಲಿ ಪಶ್ಚಿಮ ದಿಗಂತದಲ್ಲಿ ಕಾಣುತ್ತದೆ. ೩೦ ರಂದು ಮಘ (ರೆಗ್ಯುಲಸ್) ಮತ್ತು ಗುರು ಗ್ರಹದ ಸಮೀಪದಲ್ಲಿ ಕಾಣುತ್ತದೆ.

ದಿನದಿನಕ್ಕೆ ಪೂರ್ವದ ಅಂಚಿಗೆ ಸರಿಯುವಂತೆ ಕಾಣುವ ಶುಕ್ರಗ್ರಹವನ್ನು ತಿಂಗಳ ಕೊನೆಗೆ ಗುರುತಿಸುವುದೇ ಕಷ್ಟವಾಗುವುದು.

ಜುಲೈ ೮ರಂದು ಪೂರ್ವದಿಕ್ಕಿನಲ್ಲಿ ಕಾಣುವ ನೋಟ



ಬರುವ ತಿಂಗಳಿನಿಂದ ಸಂಜೆಯ ಆಕಾಶದಲ್ಲಿ ಕಾಣುವುದರ ಸೂಚನೆ ಇದು.

ಮೇ ತಿಂಗಳಿನಲ್ಲಿ ಶುಕ್ರ ಗ್ರಹವನ್ನು ಚಂದ್ರ ಮರೆ ಮಾಡಿದ ಆಚ್ಛಾದನೆ ನಡೆಯಿತಲ್ಲವೇ? ಈ ತಿಂಗಳು ಮಂಗಳ ಗ್ರಹವನ್ನು ೧೭ ರಂದು ಚಂದ್ರ ಮರೆಮಾಡುವುದು. ಆದರೆ ಈ ಘಟನೆ ನಮಗೆ ಕಾಣುವುದಿಲ್ಲ. ೧೭ರ ಬೆಳಗಿನ ಜಾವ ಚಂದ್ರ ಅದನ್ನು ಸಮೀಪಿಸುತ್ತಿರುವುದನ್ನು ಮಾತ್ರ ಕಾಣಬಹುದು.

ಭೂಮಿ ದೀರ್ಘ ವೃತ್ತದ ಕಕ್ಷೆಯಲ್ಲಿ ಸೂರ್ಯನನ್ನು ಸುತ್ತುವುದರಿಂದ ಅದರ ದೂರ (ಸೂರ್ಯನಿಂದ) ಬದಲಾಗುತ್ತಿರುತ್ತದೆ. ಅನೇಕರು ಈ ಕಾರಣದಿಂದ ಋತುಮಾನಗಳುಂಟಾಗುತ್ತದೆ ಎಂದು ತಪ್ಪು ತಿಳಿದುಕೊಂಡಿದ್ದಾರೆ. ಈಗ ನಮಗೆ ಬೇಸಿಗೆ, ಆದರೆ ಸೂರ್ಯನಿಂದ ನಾವೀಗ ಗರಿಷ್ಠ ದೂರದಲ್ಲಿದ್ದೇವೆ. ಜುಲೈ ೪ ರಂದು ಭೂಮಿ - ಸೂರ್ಯರ ದೂರ ಗರಿಷ್ಠ ೧೫೨.೫ ಮಿಲಿಯನ್ ಕಿ.ಮೀ. ಆದಾದ ನಂತರ ಕ್ರಮೇಣ ಈ ದೂರ ಕಡಿಮೆಯಾಗಿ ಜನವರಿಯಲ್ಲಿ ಕನಿಷ್ಠವಾಗುತ್ತದೆ.

ಜುಲೈ ಕೊನೆಯ ವಾರದಲ್ಲಿ ಶನಿಗ್ರಹದ ದೂರ ಸೂರ್ಯನಿಂದ ಕನಿಷ್ಠವಾಗಿರುತ್ತದೆ. ಅದರ ಕಕ್ಷೆಯೂ ದೀರ್ಘವೃತ್ತವೇ.

### ಖಗೋಳ ದಿನಚರಿ

| | |
|---|---|
| ಜುಲೈ ೧ | ಶನಿ-ಬುಧಗಳ ನಡುವೆ ಕನಿಷ್ಠ ಕೋನ (ಎರಡೂ ಪಕ್ಕಪಕ್ಕದಲ್ಲೇ ಬೆಳಗಿನ ಜಾವ ಪೂರ್ವದಲ್ಲಿ ಕಾಣುತ್ತವೆ) |
| ೨ | ಚಂದ್ರ-ಗುರು-ಇವುಗಳ ನಡುವೆ ಕನಿಷ್ಠ ಕೋನ (ಚಂದ್ರನ ಪಕ್ಕ ಕಾಣುವ ಚುಕ್ಕೆಯೇ ಗುರುಗ್ರಹ) |
| ೪ | ಭೂಮಿ ಅಪರವಿ ಬಿಂದುವಿನಲ್ಲಿ (ಭೂಮಿ- ಸೂರ್ಯ ಇವುಗಳ ನಡುವಿನ ದೂರ ಕನಿಷ್ಠ) |
| ೭ | ಚಾಂದ್ರಮಾಸದ ಮೊದಲಪಾದ (ಚಂದ್ರಾಸ್ತ ನಡುರಾತ್ರಿಯಲ್ಲಿ) |
| ೮ | ಶನಿ-ಶುಕ್ರಗಳ ನಡುವೆ ಕನಿಷ್ಠ ಕೋನ (ಬೆಳಗಿನ ಜಾವ ಪೂರ್ವದಿಕ್ಕಿನಲ್ಲಿ ಅಕ್ಕಪಕ್ಕದಲ್ಲೇ ಕಾಣುವ ಎರಡು ಗ್ರಹಗಳಲ್ಲಿ ಪ್ರಕಾಶಮಾನವಾದದ್ದು ಶುಕ್ರ. ಇನ್ನೊಂದು ಶನಿ) |
| ೧೪ | ಹುಣ್ಣಿಮೆ (ಬೆಳಗಿನ ಜಾವ ೦೦.೫೧ಕ್ಕೆ) |
| ೧೭ | ಮಂಗಳ ಮತ್ತು ಚಂದ್ರನ ನಡುವೆ ಕನಿಷ್ಠ ಕೋನ |
| ೨೧ | ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಯಲ್ಲಿ) |
| ೨೬ | ಬುಧ-ಗುರು ಗ್ರಹಗಳ ನಡುವೆ ಕನಿಷ್ಠ ಕೋನ (ಸಂಜೆ ಪಶ್ಚಿಮದಂಚಿನಲ್ಲಿ ಕಾಣುವ ಎರಡು ಚುಕ್ಕೆಗಳಿವು) |
| ೨೮ | ಬೆಳಗಿನ ಜಾವ ಪೂರ್ವದಲ್ಲಿ ಶುಕ್ರ, ಶನಿ ಮತ್ತು ಚಂದ್ರ - ಇವುಗಳನ್ನು ಅಕ್ಕಪಕ್ಕದಲ್ಲೇ ಕಾಣಬಹುದು. ಛಾಯಾಗ್ರಾಹಕರಿಗೆ ಒಳ್ಳೆಯ ಅವಕಾಶ |
| ೨೯ | ಅಮಾವಾಸ್ಯೆ |
| ೩೦ | ಗುರುಗ್ರಹ-ಚಂದ್ರ – ಇವುಗಳ ನಡುವೆ ಕನಿಷ್ಠ ಕೋನ ಮಂಗಳ ಗ್ರಹದ ಹಿನ್ನಡೆ ಆರಂಭ. |
| ೩೧ | ಬುಧ - ಚಂದ್ರ - ಇವುಗಳ ನಡುವೆ ಕನಿಷ್ಠ ಕೋನ |

ಡಾ|| ಬಿ. ಎಸ್. ಶೈಲಜಾ
ಜವಹರಲಾಲ ನೆಹರೂ ತಾರಾಲಯ, ಬೆಂಗಳೂರು - ೫೬೦ ೦೦೧

# ಬುವಿಯ ತಾಪ



ಆದಿಯಲ್ಲೆಲ್ಲಿಲ್ಲು ಶೂನ್ಯ, ನಿರಾಮಯ:
ಗುಂಗಾನ, ಏಕತಾನ –
ತುದಿ ಮೊದಲು ಇರದಂಥ ಕಾಲಮಾನ.
ಅಗೋ! ಭೀಕರ ಸ್ಫೋಟ : ಬಿಗ್ ಬ್ಯಾಂಗ್: ಮಹಾಬಾಜಣೆ!
ಇಲ್ಲದೊಡಲೊಳಗಿಂದ ಹಬ್ಬಿದ ಮಹಾಪೂರ.
ಬೆಳಕ ಬಾಣಲೆಯಲ್ಲಿ ಹುರಿದ ಕೆಂಡ, ಬ್ರಹ್ಮಾಂಡ.

ಥಳಗುಡುವ ನಕ್ಷತ್ರಲೋಕ, ಹಾಲ ಹೊಳೆ,
ಹಿಗ್ಗಿ ಕುಗ್ಗುವ ಲೀಲೆ, ಡಬ್‌ಲಪ್ ಡಬ್ ಸ್ಪಂದನ,
ವ್ಯೋಮದುದ್ದಗಲಕ್ಕು ಪೊರಕೆ ಬಾಲವ ಬೀಸಿ
ಅಲೆವ ರಾಕ್ಷಸ ಕೋಟೆ, ಕೊಳ್ಳಿದೆವ್ವ.
ಈ ಎಲ್ಲ ಗೊಂದಲದ ನಟ್ಟನಡುವಲ್ಲೇ
ಒಪ್ಪ ಓರಣ –
ಹುಟ್ಟು ಸಾವಿಗೆ ಸಜ್ಜು.

ಬೆಳಕಿನುಂಡೆಗಳಲ್ಲಿ ಒಂದು ಪುಟ್ಟ ರೀಲು,
ಜುಜುಬಿ, ನಿಜ, ಆದರೂ ಮಾರ್ತಾಂಡ, ಚಂಡಪ್ರಚಂಡ:

ತೊಳತೊಳಗಿ ಬೇಸತ್ತು ಬಸವಳಿದ ನೇಸರಿನ
ಮೈ ಮುರಿದು ಸಿಡಿಸಿಡಿದು ತಿರುತಿರುಗಿ ದುಂಡಾಗಿ
ಹೊಡೆದುವು ಗಿರಕಿ, ಆಯ್ತು ಸೌರವ್ಯೂಹ.
ನಡುವೆ ಜಗಜಗ ಬೆಂಕಿ, ಸುತ್ತ ತಣ್ಣನೆ ಮೈಯ ರುದ್ರಾಕ್ಷಿಗಳ ಮಾಲೆ :
ಬುವಿಯ ಚೆಲುವೇ ಚೆಲುವು!
ಅವಳ ಮುಖ ಕಮಲಕ್ಕೆ ಚಂದ್ರನೇ ಕನ್ನಡಿ.

ಸೃಷ್ಟಿಕರ್ತ ಪರಬೊಮ್ಮ, ಧ್ಯಾನಮಗ್ನ,
ಕಣ್ತೆರೆದು ನೋಡಿದ : 'ಇದೇನೀ ಕೌತುಕ!
ಹೇಗಾಯಿತು ಇದೆಲ್ಲ? ನಾನೆ ನೆನಸಿರಲಿಲ್ಲ!
ಇರಲಿ, ಮಾಡುತ್ತೇನೆ ಈಗೊಂದು ವೈಖರಿ –
ಬೇರಾವ ಲೋಕದಲು ಇಲ್ಲದ ಪರಿ.'
ಧರಣಿ ದೇವಿಯ ಮೈಯ ಮೃತ್ತಿಕೆಯೆ ಸಾಮಗ್ರಿ;
ಸೇರಿತು ಒಳಗೆ ಗಾಳಿ - ದೇವರೂದಿದ ಉಸಿರು ;
ವಿಶ್ವಾತ್ಮದೊಳಬೆಂಕಿ; ಬಸಿದ ನೀರು;
ಬಯಲೆ ತಳೆದಾಕಾರ ಆಯ್ತೀಗ ಜೀವ ಝುರಿ!
ಕೊಳೆತ ಮಣ್ಣಿನ ಒಳಗೆ ತೊಳಗು ಹಣತೆ :

ಪಾಚಿ, ಹಾವಸೆ, ಬಳ್ಳಿ, ಹುಲ್ಲು, ಗಿಡ ಮರ ಪೊದೆ,
ಹೂ ಹಣ್ಣು ಮೃಗ ಪಕ್ಷಿ ಮೀನು ಮೊಸಳೆ –
ದೈತ್ಯದೇಹಿಯ ಸೊಕ್ಕು, ಸೂಕ್ಷ್ಮ ಜೀವಿಯ ಬಿಕ್ಕು.
ಎಂಥಾ ಚೋದ್ಯ ಇದೀಗ ! ಬುವಿಯ ಬಸಿರು !
ಜೀವವಿಲ್ಲದ ಮಣ್ಣು ಈಗ ಹೆಣ್ಣು –
ಅಗಣಿತ ಗಣ ಸಂತಾನ.

ಮನದಲ್ಲೆ ನಸುನಕ್ಕ ಪರಬೊಮ್ಮ :
'ಭಲೆ, ಭೂಮಿದೇವಿ !
ಏರ್ಪಡಿಸಬೇಕೀಗ ನಿನಗೆ ರಕ್ಷೆ :
ನೇಸರಿನ ಕಿರಣಕ್ಕೆ ಕಮರದ ವ್ಯವಸ್ಥೆ.'
ಗಾಳಿ ಮಳೆ ತಂಪು. ಅಗ್ನ್ಯಸ್ತ್ರ ತಡೆಯಲಿಕೆ ಓಜೋನಿನ ರಗ್ಗು.
ಗುರುತ್ವಾಕರ್ಷಣೆಯೆ ಎಲ್ಲ ಜೀವಕು ರಜ್ಜು.

ಮತ್ತೆ ಚಿಂತಿಸಿದ, ಸೃಷ್ಟಿಕರ್ತ:
ಈ ಮಹಾ ತೋಟಕ್ಕೆ ಬೇಕೊಬ್ಬ ಮೇಟಿ.
ಹೇ ! ಪ್ರೆಸ್ಟೋ ! ಪವಾಡ ! ಬಂದನಿಗೊ ಮಾನವ –
ಬಾಲವಿಲ್ಲದ ಮಂಗ : ವಾ-ನರ, ಈ ನರ !
ಭೂಮಿಯಂಗಳದಲ್ಲಿ ಮೈವೆತ್ತ ಸತ್ತ್ವ.

ಬಳಿ ಕರೆದ ಪರಬೊಮ್ಮ : "ಬಾ ಮಗೂ ! ಕೂರು
ಈ ಜೀವ, ಸಂಪತ್ತು - ಎಲ್ಲ ನಿನ್ನದು ಈಗ.
ಬದುಕು,ಬದುಕಿಸು, ಒಲಿದು ರಕ್ಷಿಸು ಜೀವರಾಶಿಯನ್ನ.
ನೆನಪಿರಲಿ ನಾನೀಗ ಬೋಧಿಸುವ ಮಂತ್ರ –
ಬಲು ಸುಲಭ : "ದ ! ದ ! ದ !" : ಮೂರು ಸಾರಿ "ದ"."

ದೇವರಂತರ್ಧಾನ. ಅವನ ಹಿಂದೆಯೆ ದಟ್ಟ ಕಪ್ಪು ಮೋಡ:
ದ ! ದ ! ದ ! ಮಾರ್ಮೊಳಗು ! ಏನಿದೀ ತ್ರಿವಿಧ 'ದ' ?
ಗುಡುಗು ಬಾರಿಸುತಿತ್ತು ಮತ್ತದೇ ದ ! ದ ! ದ !
ಮಿಂಚು ಬೀಸಿತು ಚಾಟಿ. ಮಳೆಗರೆಯಿತು : ದ ! ದ ! ದ !
'ದ' - ದಯಾವಂತನಾಗು ! ಸಕಲ ಜೀವಿಗಳನ್ನು ಸಂರಕ್ಷಿಸು !
ರಾಕ್ಷಸನೆ ಆಗದಿರು !
ಎರಡನೆಯದೂ 'ದ' : ದಮಿಸು, ನಿಗ್ರಹಿಸು ಇಂದ್ರಿಯವ !
ಭೋಗಲಾಲಸೆ ಬೇಡ, ದೇವತೆಗಳಂತೆ.
ಮತ್ತೆ ಮೂರನೆ ಬಾರಿ ಉಚ್ಚರಿಸಿದ್ದೂ 'ದ' :
'ದತ್ತ' – ಇದರರ್ಥ : ದಾನ ಮಾಡು. ಆಸೆ ಬಿಡು.
ಬದುಕು, ಬದುಕಿಸು, ಹೋಗು ! ನಿಡಿದು ಬಾಳು !

ಮಳೆ ಕಳೆದು ನೆಲ ತೊಳೆದು
ಬಟ್ಟ ಬಯಲಲ್ಲೆಲ್ಲ ಬೆಳ್ಳಿ ಬೆಳಕು.
ಪ್ರಕೃತಿ ಬಂಗಾರ ! ಎಂಥ ಸುಂದರ ಲೋಕ !
ದೇವ ಕರುಣಾಮಯ. ಮನುಜನಿಗು ವಿಸ್ಮಯ :
ಸುತ್ತೆಲ್ಲ ಹಬ್ಬಿರುವ ಹಸುರು ಕಾನು,
ತೊರೆ ಬಾನು ಸಿರಿ ಸುಗ್ಗಿ ಹಿಗ್ಗಿ ಮೊಗ್ಗು.

ಆದರಾಕ್ಷಣದಲ್ಲೆ ಮಾನವನ ಮನದಲ್ಲಿ ಮೊಳೆತಿತ್ತು ಮಹದಾಶೆ.
ಸುಳಿಯಿತಾಶಾಪಾಶ. ದೇವರಾಣತಿ ಮರೆತ ಮನುಜ.
ದೇವರೆಲ್ಲಿದ್ದಾನೆ ? ಇಲ್ಲಿ? ಇಲ್ಲಿ? ಇಲ್ಲಿ?
ತಾನೆ ದೇವರು ! ಒಡೆಯ !
ಎಲ್ಲ ಅವತಾರವೂ ತನ್ನದೇ, ನಿಶ್ಚಯ ! –

ಮತ್ಸ್ಯನಾಗಿ ಕಬಳಿಸಿದ ! ಕೂರ್ಮನಾಗಿಯು ಹೊತ್ತ ಹೊನ್ನ ಬೆಟ್ಟವನ್ನ
ವರಾಹನೂ ಆದ ! ಬುವಿಯನ್ನೇ ಮೀಟಿದ !
ನರಸಿಂಹನೂ ಆಗಿ ನೆಲವನ್ನೆ ಬಗೆದ,
ಈಡಿಪಸ್ಸನ ಹಾಗೆ ತಾಯನ್ನೆ ಭೋಗಿಸಿದ !
ವಾಮನನೆ ತ್ರಿವಿಕ್ರಮ : ನೆಲಬಾನು ಅಳೆದ, ಆಳಿದ !
ಮೂರನೆಯ ಪಾದಕ್ಕೆ ತಾವೆಲ್ಲಿ? ಯೋಚಿಸಿದ :
ಜೀವಿ ಕೋಟಿಯ ತುಳಿದ ! ಮಾರ್ಮಲೆದ !
ಪರಶುರಾಮನ ಕೊಡಲಿಯೆತ್ತಿ ಕಾಡನೆ ಕಡಿದ !
ತೂಗು ತಕ್ಕಡಿ ಮೇಲೆ ಕುಣಿದಾಡಿದ !
ಬಲರಾಮನ ನೇಗಿಲೂರಿ ಉತ್ತು ಬಿತ್ತಿದ ಮೃತ್ಯು ಬೀಜವನ್ನ !
ಹೂಡಿದ ರಾಮನ ಬಾಣ : ಓಜೋನ್ ರಗ್ಗೊಳಗೆಲ್ಲ ತೂತು ಕೊರೆದ !
ಇದ್ದಬದ್ದದ್ದೆಲ್ಲ ಪಕಪಕನೆ ಕಬಳಿಸಿದ !
ತಿಂದೆಸೆದ ಕಸಗುಪ್ಪೆ ! ಆಗಸಕು ಹಾರಿಸಿದ !
ಹೊಗೆ ಬಿಟ್ಟ ! ಹರಿಯಿಸಿದ ಎಲ್ಲೆಲ್ಲು ನಂಜಿನ ಹೊಳೆ !

ಕನಲಿತು ಇಡೀ ವಿಶ್ವ ! ಬಾರಿಸಿತು ಸಿಡಿಲುಂಡೆ ;
ಧೋ ! ಧೋ ! ಧೋ ! ಅಗ್ನಿ ವರ್ಷ !
ಹಿಮಕರಗಿ ಜಲರಾಶಿ ಪ್ರಳಯ ನಾಟ್ಯ !

ಇಡೀ ಬ್ರಹ್ಮಾಂಡದಲಿ ಯಾವುದೋ ಮೂಲೆಯಲಿ
ಬುವಿಯ ಸಿರಿಮಡಿಲಲ್ಲಿ ಜರುಗಿದ ಪವಾಡ ಹೀಗೆ
ಕೊನೆಗೊಳ್ಳಬೇಕೆ ?
ಆಗದಾಗದು ! ಮುಳಿದು ನಿಂದನಿದೊ ಪರಬೊಮ್ಮ !
'ಮುರಿಯಲೇ ಬೇಕೀಗ ಮಾನವನ ಹಮ್ಮು ಬಿಮ್ಮ !'



ಎಚ್ಚೆಸ್ಕೆ
೪೧, ಆರನೆಯ ಮುಖ್ಯರಸ್ತೆ, ಸರಸ್ವತೀಪುರ, ಮೈಸೂರು-೫೭೦ ೦೦೯




# ವಿಶ್ವಸಂಸ್ಥೆಯನ್ನು ಬಲಗೊಳಿಸುವುದು ಜರೂರು ಅಗತ್ಯ

**ಸೀಯಾರ್ಕೆ**

ವಿಶ್ವಸಂಸ್ಥೆಯನ್ನೂ ಪ್ರಪಂಚದ ಜನಾಭಿಪ್ರಾಯವನ್ನೂ ಕಡೆಗಣಿಸಿ ಅಮೆರಿಕ ಇರಾಕಿನ ಮೇಲೆ ನಡೆಸಿದ ದುರಾಕ್ರಮಣ ಹಾಗೂ ನಂತರದ ಬೆಳವಣಿಗೆಗಳು ಶಾಂತಿ ಪಾಲನೆಯಲ್ಲಿ, ಯುದ್ಧ ತಡೆಗಟ್ಟುವುದರಲ್ಲಿ, ವಿವಾದಗಳನ್ನು ಸಂಧಾನಗಳ ಮೂಲಕ ಬಗೆಹರಿಸುವುದರಲ್ಲಿ ವಿಶ್ವಸಂಸ್ಥೆಯ ಉಪಯುಕ್ತತೆಯ ಬಗ್ಗೆ ವಿಶ್ವದಾದ್ಯಂತ ಜನತೆಯಲ್ಲಿ ಸಂಶಯ ಮೂಡಿಸಿದೆ. ಇರಾಕಿನ ಮೇಲೆ ಅಮೆರಿಕದ ದಾಳಿಯನ್ನು ವಿರೋಧಿಸಿದ್ದ ಫ್ರಾನ್ಸ್, ಜರ್ಮನಿ, ರಷ್ಯಾ, ಚೀಣಾ ದೇಶಗಳು ಯುದ್ಧಾನಂತರ ಅಮೆರಿಕದ ಒತ್ತಾಯಗಳಿಗೆ ಮಣಿದು ಭದ್ರತಾ ಮಂಡಳಿಯಲ್ಲಿ ಅಮೆರಿಕ ಮಂಡಿಸಿದ್ದ ನಿರ್ಣಯಕ್ಕೆ ಅನುಮೋದನೆ ನೀಡಿದ್ದು ಸಂಶಯಕ್ಕೆ ಮತ್ತಷ್ಟು ಪುಷ್ಟಿ ನೀಡಿದೆ. ಅಮೆರಿಕದ ಅವಕೃಪೆಗೆ ಒಳಗಾಗುವ ಭೀತಿಯಿಂದ ಭದ್ರತಾ ಮಂಡಲಿಯ ಸದಸ್ಯ ರಾಷ್ಟ್ರಗಳು ಇರಾಕಿನ ಮೇಲೆ ಅಮೆರಿಕ ನಡೆಸಿದ ಅಕ್ರಮವಾದ ದುರಾಕ್ರಮಣಕಾರಿ ಯುದ್ಧಕ್ಕೆ ಅಂಗೀಕಾರದ ಮುದ್ರೆ ಒತ್ತಿದಂತೆ ಆಗಿದೆ ನಿರ್ಣಯದ ಅನುಮೋದನೆ. ಭದ್ರತಾ ಮಂಡಲಿಯ ನಿರ್ಣಯ ಇರಾಕಿನಲ್ಲಿ ನಾಗರಿಕ ಸರಕಾರದ ಸ್ಥಾಪನೆಗೆ ಯಾವುದೇ ಗಡುವನ್ನು ನಿಗದಿಮಾಡದೆ, ಅಮೆರಿಕ ಹಾಗೂ ಬ್ರಿಟನ್ನಿನ ಆಕ್ರಮಣಕಾರಿ ಸೇನೆಯ ಆಡಳಿತೆ ಮುಂದುವರಿಯುವುದಕ್ಕೆ ಅವಕಾಶ ನೀಡಿದೆ. ಒಂದು ರೀತಿಯಲ್ಲಿ ಈ ನಿರ್ಣಯ ಅಮೆರಿಕ ಇರಾಕಿನ ಮೇಲೆ ನಡೆಸಿದ ದುರಾಕ್ರಮಣಕ್ಕೆ ಬೆಂಬಲ ನೀಡಿದೆ ಮತ್ತು ಇರಾಕಿನ ವಸಾಹತೀಕರಣಕ್ಕೆ ಅಂಗೀಕಾರ ನೀಡಿದೆ ಎಂದು ಹೇಳಬಹುದು. ಈ ಇಡೀ ಪ್ರಕರಣವು ಬಲಾಢ್ಯ ರಾಷ್ಟ್ರವೊಂದು ಏನೇ ಪಾತಕ ಎಸಗಿದರೂ ಪಾರಾಗಬಹುದು ಎಂಬುದನ್ನು ತೋರಿಸಿದೆ. ಇದು ನಿಜಕ್ಕೂ ಅಪಾಯಕಾರಿಯಾದ ಬೆಳವಣಿಗೆ ಹಾಗೂ ಅಂತರರಾಷ್ಟ್ರೀಯ ಸುರಕ್ಷತತೆಗೆ ಮಾರಕ.

ಎರಡನೇ ಮಹಾಯುದ್ಧದ ನಂತರ ೧೯೪೫ರಲ್ಲಿ ಸ್ಥಾಪನೆಗೊಂಡ ವಿಶ್ವಸಂಸ್ಥೆಯು ಪ್ರಾರಂಭದಲ್ಲಿ ಕೆಲವೇ ಸದಸ್ಯರಾಷ್ಟ್ರಗಳನ್ನು ಹೊಂದಿತ್ತು. ಆದರೆ ಈಗ ಅದರ ಸದಸ್ಯರಾಷ್ಟ್ರಗಳ ಸಂಖ್ಯೆ ಸುಮಾರು ಇನ್ನೂರು ಆಗಿದೆ. ಅದು ಅಸ್ತಿತ್ವಕ್ಕೆ ಬಂದು ಐವತ್ತೆಂಟು ವರ್ಷಗಳಲ್ಲಿ ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಸ್ಥಾಪನೆಗೊಂಡಾಗಿನ ಪರಿಸ್ಥಿತಿಗೆ ಅನುಗುಣವಾಗಿ ಅಂದು ಈ ಜಾಗತಿಕ ಸಂಸ್ಥೆಯ ನಿಯಮಾವಳಿಗಳನ್ನು ರಚಿಸಲಾಯಿತು. ಅದರಲ್ಲಿ ಬಹಳ ಮುಖ್ಯವಾದ್ದು ಐದು ಅಗ್ರರಾಷ್ಟ್ರಗಳನ್ನು ಸಂಸ್ಥೆಯು ಕಾರ್ಯ ನಿರ್ವಾಹಕ ಅಂಗವಾದ ಭದ್ರತಾಮಂಡಳಿಯ ಖಾಯಂ ಸದಸ್ಯರನ್ನಾಗಿಸಿ, ಅವುಗಳ ಸಮ್ಮತಿ ಇಲ್ಲದೆ ಯಾವುದೇ ತೀರ್ಮಾನ ಅಂಗೀಕಾರಾರ್ಹವಲ್ಲ ಎಂಬುದು. ಈ ಐದು ರಾಷ್ಟ್ರಗಳಿಗೆ ವೀಟೋ ಹಕ್ಕು ನೀಡಿದ್ದು ಆ ಕಾರಣದಿಂದಲೇ. ಅಂದಿನ ಪರಿಸ್ಥಿತಿಯಲ್ಲಿ ಅಮೆರಿಕ ಹಾಗೂ ಪಶ್ಚಿಮರಾಷ್ಟ್ರಗಳು ತಮ್ಮ ಬಹುಮತದಿಂದಾಗಿ ಸಂಸ್ಥೆಯ ಮೇಲೆ ಸವಾರಿ ಮಾಡದಿರಲೆಂದು ಈ ವೀಟೋ ನಿಯಮ ಅಸ್ತಿತ್ವಕ್ಕೆ ಬಂತು. ಇಂದಿನ ಪರಿಸ್ಥಿತಿಯೇ ಬೇರೆ. ಇದುವರೆಗೆ ಈ ಜಾಗತಿಕ ಸಂಘಟನೆಯ ನಿಯಮಾವಳಿಗಳಲ್ಲಿ, ಕಾರ್ಯ ವಿಧಾನದಲ್ಲಿ ಅಗತ್ಯವಾದ ಯಾವ ಸುಧಾರಣೆಗಳೂ ಆಗಿಲ್ಲ ಎಂಬುದು ಗಮನಿಸಬೇಕಾದ ಸಂಗತಿ. ಯುದ್ಧವನ್ನು ತಡೆಯುವ ಅದರ ಗುರಿ ಪರಿಣಾಮಕಾರಿಯಾಗಿ ಕಾರ್ಯಗತವಾಗಿಲ್ಲದಿದ್ದರೂ, ಸಂಘರ್ಷವನ್ನು ನಿಲ್ಲಿಸಿ ಸಂಬಂಧಪಟ್ಟ ಪಕ್ಷಗಳನ್ನು ಸಂಧಾನದಲ್ಲಿ ತೊಡಗಿಸುವುದರಲ್ಲಿ ವಿಶ್ವಸಂಸ್ಥೆ ಪ್ರಮುಖ ಪಾತ್ರ ವಹಿಸಿದೆ. ಆದರೆ ಬಲಾಢ್ಯ ರಾಷ್ಟ್ರಗಳ ಮೊಂಡುತನದಿಂದಾಗಿ ಅದು ಪೂರ್ಣವಾಗಿ ಕಾರ್ಯಗತವಾಗಿಲ್ಲ. ಕೊರಿಯಾ ಯುದ್ಧದಿಂದ ಮೊದಲಾಗಿ ಎರಡನೇ ಕೊಲ್ಲಿ ಯುದ್ಧದವರೆಗೆ ಹಲವು ಯುದ್ಧಗಳು ಜರುಗಿವೆ. ಇವುಗಳಲ್ಲಿ ಅಮೆರಿಕ ಒಂದಲ್ಲ ಒಂದು ರೀತಿಯಲ್ಲಿ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಭಾಗಿಯಾಗಿದೆ. ಆದರೆ ಅಮೆರಿಕ ವಿಶ್ವಸಂಸ್ಥೆಯ ಹಾಗೂ ಪ್ರಪಂಚದ ಜನತೆಯ ಅಭಿಮತವನ್ನು ಧಿಕ್ಕರಿಸಿ ದುರಾಕ್ರಮಣಕಾರಿ ಯುದ್ಧವನ್ನು ನಡೆಸಿದ್ದು ಈಗಲೇ. ಅದೂ ವಿನಾಕಾರಣ ಮುಯ್ಯಿ ತೀರಿಸಿಕೊಳ್ಳಲು ಮಧ್ಯ ಪ್ರಾಚ್ಯದ ಸಣ್ಣ ರಾಷ್ಟ್ರ ಇರಾಕಿನ ಮೇಲೆ.

ಪ್ರಾರಂಭದಿಂದಲೂ ಅಮೆರಿಕ ಮತ್ತು ಪಶ್ಚಿಮ ರಾಷ್ಟ್ರಗಳು ವಿಶ್ವಸಂಸ್ಥೆಯನ್ನು ತಮ್ಮ ಕೈಗೊಂಬೆಯಾಗಿಸಿಕೊಳ್ಳಲು ಪ್ರಯತ್ನಿಸಿದುವು. ಆದರೆ ಸೋವಿಯತ್ ಒಕ್ಕೂಟ ಅಸ್ತಿತ್ವದಲ್ಲಿರುವವರೆಗೆ ಅದು ಕೈಗೂಡಿರಲಿಲ್ಲ. ಅಲ್ಲದೆ ನಿರ್ವಸಾಹತೀಕರಣದಿಂದಾಗಿ ಹೊಸದಾಗಿ ಸ್ವತಂತ್ರಗೊಂಡ ಬಹುತೇಕ ರಾಷ್ಟ್ರಗಳು ರಚಿಸಿಕೊಂಡಿದ್ದ ಅಲಿಪ್ತ ರಾಷ್ಟ್ರಗಳ ಚಳವಳಿ ಪ್ರಬಲವಾಗಿದ್ದು ಅಮೆರಿಕದ ಆಕಾಂಕ್ಷೆಗಳಿಗೆ ಕಡಿವಾಣವಾಗಿದ್ದುವು. ಆದರೆ ಸೋವಿಯತ್ ಒಕ್ಕೂಟದ ವಿಭಜನೆಯ ನಂತರ ಏಕೈಕ ಬಲಾಢ್ಯ ರಾಷ್ಟ್ರವಾಗಿ ಅಮೆರಿಕ ಹೊರಹೊಮ್ಮಿ, ಅಲಿಪ್ತ ಚಳವಳಿಯೂ ದುರ್ಬಲಗೊಂಡುದರಿಂದ ಅಮೆರಿಕದ ಅಟ್ಟಹಾಸ ವೈಪರೀತ್ಯಕ್ಕೆ ಹೋಗಿದೆ. ಇರಾಕಿನ ಮೇಲೆ ಅಮೆರಿಕ ನಡೆಸಿದ ಎರಡು ಯುದ್ಧಗಳು, ಆಫ್ಘಾನಿಸ್ತಾನದ ಮೇಲೆ ದಾಳಿ ಅದಕ್ಕೆ ನಿದರ್ಶನ. ಯುರೋಪಿನ ರಾಷ್ಟ್ರಗಳಾದ ಫ್ರಾನ್ಸ್, ಜರ್ಮನಿಗಳು, ರಷ್ಯ, ಚೀನಾಗಳು ಅಮೆರಿಕದ ದುರಾಕ್ರಮಣ ನೀತಿಯನ್ನು ವಿರೋಧಿಸಿದರೂ ಅದು ಅರೆಮನಸ್ಸಿನಿಂದ ಕೂಡಿದ್ದಾಗಿತ್ತು. ಈಚೆಗೆ ಭದ್ರತಾಮಂಡಳಿಯಲ್ಲಿ ಇರಾಕಿನ ವಿಚಾರದಲ್ಲಿ ಅಮೆರಿಕ ಮಂಡಿಸಿದ್ದ ನಿರ್ಣಯದ ಅಂಗೀಕಾರ ಈ ದೇಶಗಳ ಸೋಗಲಾಡಿತನವನ್ನು ಬಹಿರಂಗಗೊಳಿಸಿದೆ. ತನ್ನ ಮಿಲಿಟರಿ ಹಾಗೂ ಹಣಕಾಸಿನ ಪ್ರಾಬಲ್ಯದಿಂದ ಹೇಗೆ ಅಮೆರಿಕ ಮಿಕ್ಕೆಲ್ಲ ರಾಷ್ಟ್ರಗಳ ಮೇಲೆ ಒತ್ತಾಯ ತಂದು ತನ್ನ ಅಪೇಕ್ಷೆಯನ್ನು ಸಾಧಿಸಿಕೊಳ್ಳಬಲ್ಲದು ಎಂಬುದನ್ನು ಅದು ತೋರಿಸಿದೆ. ಅಭಿವೃದ್ಧಿ ಹೊಂದಿದ ರಾಷ್ಟ್ರಗಳ ಪರಿಸ್ಥಿತಿಯೇ ಈ ಬಗೆಯದಾದರೆ, ಇನ್ನು ಅಭಿವೃದ್ಧಿಶೀಲ ದುರ್ಬಲ ರಾಷ್ಟ್ರಗಳ ಸ್ಥಿತಿ ಏನೆಂದು ಹೇಳಬೇಕಾಗಿಲ್ಲ. ಒಂದು ರೀತಿಯಲ್ಲಿ ಅಮೆರಿಕ ವಿಶ್ವಸಂಸ್ಥೆಯನ್ನು ನಿಷ್ಕ್ರಿಯಗೊಳಿಸುವುದರಲ್ಲಿ ಸಫಲಗೊಂಡಿದೆ. ಮೊದಲನೆ ಮಹಾ ಯುದ್ಧದ ನಂತರ ಸ್ಥಾಪನೆಗೊಂಡ ಲೀಗ್ ಆಫ್ ನೇಷನ್ಸ್ ಸಂಸ್ಥೆ ಜರ್ಮನಿಯ ಫಾಸಿಸ್ಟ್ ಸರ್ವಾಧಿಕಾರಿ ಹಿಟ್ಲರ್ ಪ್ರಾರಂಭಿಸಿದ ಯುದ್ಧದಿಂದಾಗಿ ಸಮಾಧಿಯಾಯಿತು. ಈಗ ಅಮೆರಿಕದ ಸಾಮ್ರಾಜ್ಯಶಾಹಿ ಯುದ್ಧ ದಾಹದಿಂದಾಗಿ ವಿಶ್ವಸಂಸ್ಥೆಯೂ ಅದೇ ಗತಿ ಕಾಣುವ ಭೀತಿ ಇಲ್ಲದಿಲ್ಲ.

ಈ ಪರಿಸ್ಥಿತಿಯಲ್ಲಿ ವಿಶ್ವಸಂಸ್ಥೆಯನ್ನು ಉಳಿಸಿ, ಜೀವಂತಗೊಳಿಸಿ, ಪರಿಣಾಮಕಾರಿಯಾಗಿಸುವುದು ಎಲ್ಲ ದೇಶಗಳ, ಜನತೆಯ ಕರ್ತವ್ಯವಾಗಿದೆ. ಭದ್ರತಾಮಂಡಳಿಯ ಸದಸ್ಯ ರಾಷ್ಟ್ರಗಳ ಸಂಖ್ಯೆಯನ್ನು ಹೆಚ್ಚಿಸುವ ಸೂಚನೆ ಅಮೆರಿಕದ ಪ್ರತಿರೋಧದಿಂದಾಗಿ ಮುಂದೆ ಹೋಗುತ್ತಿದೆ. ಇದುವರೆಗೆ ಸಂಸ್ಥೆಯ ನಿಯಮಾವಳಿಗಳಲ್ಲಿ ಯಾವುದೇ ಮಾರ್ಪಾಟನ್ನು ಅಮೆರಿಕ ವಿರೋಧಿಸುತ್ತಿರುವುದರಿಂದ ಸುಧಾರಣೆ ಕಾರ್ಯ ಈವರೆಗೆ ಸ್ಥಗಿತಗೊಂಡಿದೆ. ಆದರೆ ಇಂದು ಈ ಜಾಗತಿಕ ಸಂಸ್ಥೆಯನ್ನು ಹೆಚ್ಚು ಪ್ರಜಾಪ್ರಭುತ್ವಗೊಳಿಸಿ ಅಂಗ ರಚನೆಯಲ್ಲಿ ಸೂಕ್ತ ಬದಲಾವಣೆಗಳನ್ನು ಮಾಡದೇ ಹೋದಲ್ಲಿ ಕಾಲಕ್ರಮೇಣ ಅದು ಅಮೆರಿಕದ ಆಡುಂಬೊಲವಾಗಿ ಮಾರ್ಪಟ್ಟು ನಿರ್ಜೀವಗೊಳ್ಳುವ ಭೀತಿ ಇದೆ. ಹಾಗಾಗಿ ಇಂದು ಮೊಟ್ಟ ಮೊದಲಾಗಿ ಭದ್ರತಾಮಂಡಳಿಯ ಸದಸ್ಯ ರಾಷ್ಟ್ರಗಳ ಸಂಖ್ಯೆ ಹೆಚ್ಚಿಸುವುದು, ಅದನ್ನು ಹೆಚ್ಚು ಪ್ರಾತಿನಿಧಿಕವಾಗಿಸಲು ಕ್ರಮ ಕೈಗೊಳ್ಳುವುದು, ಕಾಲಕ್ರಮೇಣ ನಿಗದಿತ ಅವಧಿಯಲ್ಲಿ ಖಾಯಂ ಸದಸ್ಯ ರಾಷ್ಟ್ರಗಳ ವೀಟೋ ಹಕ್ಕನ್ನು ಮೊಟಕುಗೊಳಿಸುವುದು ಅಗತ್ಯವಾಗಿದೆ. ಬಹುಮತರ ಅಭಿಪ್ರಾಯಕ್ಕೆ ತಲೆ ಬಾಗಬೇಕು ಎನ್ನುವ ಸಂಪ್ರದಾಯವನ್ನು ರೂಢಿಗೆ ತರಬೇಕಾಗಿದೆ. ಹಾಗೆಯೇ ವಿಶ್ವಸಂಸ್ಥೆಯ ಮಹಾಸಭೆಯ ಕಾರ್ಯಕಲಾಪಗಳಿಗೆ, ತೀರ್ಮಾನಗಳಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡುವುದು ಅಗತ್ಯವಾಗಿದೆ. ಈವರೆಗೆ ಮಹಾಸಭೆಯ ವೇದಿಕೆ ಸದಸ್ಯ ರಾಷ್ಟ್ರಗಳ ನೀತಿಯ ಪ್ರತಿಪಾದನೆಗೆ ಮಾತ್ರ ಮೀಸಲಾಗಿದ್ದು, ಅದರ ತೀರ್ಮಾನಗಳನ್ನು ಭದ್ರತಾ ಮಂಡಳಿಯಾಗಲೀ, ಸದಸ್ಯ ರಾಷ್ಟ್ರಗಳಾಗಲೀ ಕಡ್ಡಾಯವಾಗಿ ಪಾಲಿಸಬೇಕೆಂದೇನಿಲ್ಲ. ಅವು ಕೇವಲ ಶಿಫಾರಸುಗಳಾಗಿರುತ್ತವೆ. ಈ ವ್ಯವಸ್ಥೆ ಬದಲಾಗಿ ಬಹುಮತದ ಅಭಿಪ್ರಾಯಗಳಿಗೆ ಮನ್ನಣೆ ದೊರಕುವಂತಾಗಬೇಕು. ಈ ಜಾಗತಿಕ ಸಂಸ್ಥೆಯನ್ನು ಪರಿಣಾಮಕಾರಿಯಾಗಿಸಲು ಎಲ್ಲ ಸದಸ್ಯ ರಾಷ್ಟ್ರಗಳು ಆಸ್ಥೆಯಿಂದ ಶ್ರಮಿಸುವುದು ಅಗತ್ಯವಾಗಿದೆ. ಅಭಿವೃದ್ಧಿಶೀಲ ರಾಷ್ಟ್ರಗಳು ಒಂದುಗೂಡಿ ಸುಧಾರಣೆಗಳನ್ನು ಜಾರಿಗೆ ತರುವಂತೆ ಅಗ್ರ ರಾಷ್ಟ್ರಗಳ ಮೇಲೆ ಒತ್ತಡ ಹೇರಬೇಕಾಗಿದೆ. ಇದಕ್ಕಾಗಿ ಇಂದು ಅಲಿಪ್ತ ಚಳುವಳಿ ರಾಷ್ಟ್ರಗಳು ಎಚ್ಚೆತ್ತು ಚಳವಳಿಯನ್ನು ಜೀವಂತಗೊಳಿಸಿ, ಬಲಪಡಿಸುವುದು ಅಗತ್ಯವಾಗಿದೆ. ವಿಶ್ವಸಂಸ್ಥೆ ಪ್ರಪಂಚದಲ್ಲಿ ಶಾಂತಿ, ಸುಭದ್ರತೆ ನೆಲೆಸುವಂತೆ ಮಾಡಲು ಅವಶ್ಯಕವಾಗಿ ಬೇಕಾಗಿದೆ. ಅದರ ದೌರ್ಬಲ್ಯಗಳೇನೇ ಇದ್ದರೂ, ಅದರ ಸಾಧನೆಗಳು ಅಮೂಲ್ಯವಾದ್ದು. ನಿರ್ವಸಾಹತೀಕರಣ, ವರ್ಣಭೇದ ನೀತಿಯ ಅಂತ್ಯ, ಸಾಂಸ್ಕೃತಿಕ ವಿನಿಮಯ, ಶಿಕ್ಷಣ, ವೈದ್ಯಕೀಯ ನೆರವು, ನಿರಾಶ್ರಿತರಿಗೆ ನೆರವು ನೀಡಿಕೆ, ಹೀಗೆ ನಾನಾ ಕ್ಷೇತ್ರಗಳಲ್ಲಿ ಅದು ಸಲ್ಲಿಸಿರುವ ಕಾಣಿಕೆ ಗಮನಾರ್ಹ. ಪ್ರಪಂಚದ ಜನತೆಯ ಅಪೇಕ್ಷೆಗಳನ್ನು, ಅಭಿಪ್ರಾಯಗಳನ್ನು ಪ್ರತಿನಿಧಿಸುವ ಸಂಸ್ಥೆಯಾಗಿ ವಿಶ್ವಸಂಸ್ಥೆಯನ್ನು ರೂಪಿಸಬೇಕಾಗಿದೆ. ಅದಕ್ಕಾಗಿ ವಿಶ್ವದ ಎಲ್ಲ ರಾಷ್ಟ್ರಗಳ ಜನತೆ ತಮ್ಮ ಸರಕಾರಗಳ ಮೇಲೆ ಒತ್ತಾಯ ತರಬೇಕಾಗಿದೆ. ■

# ಮಿದುಳು ಮರೆತ ಮೂಢರು!

**ಮಾ**ನವನ ಮತಿ ವಿಕಾಸಗೊಂಡಾಗಲೇ 'ಮನುಜ ಮತ ವಿಶ್ವಪಥ' ಸಾಧ್ಯವಾಗುವುದು. ದುರಂತವೆಂದರೆ ಪ್ರಾಚೀನ ಕಾಲದಿಂದಲೂ ಒಂದು ಪುಟ್ಟ ಸಮೂಹ ಒಟ್ಟು ಸಮಾಜದ ಸಾಂಸ್ಕೃತಿಕ ಪರಿಧಿಗೆ ಒಳಪಡುವ ಸಮೂಹವನ್ನು ಮೌಢ್ಯತೆಯ ಹುದುಲಲ್ಲಿ ಸಿಲುಕಿಸುತ್ತ ಬಂದಿರುವದು. ಹಾಗೆ ನೋಡಿದರೆ ಇದೊಂದು ರೀತಿಯಲ್ಲಿ ಅಸ್ತಿತ್ವಕ್ಕಾಗಿ ನಡೆಯಿಸಿದ ಹುನ್ನಾರವೆನ್ನಬಹುದು. ದುಡಿಯದೇ ಬದುಕುವ ಮಾರ್ಗವನ್ನು ಶಿಷ್ಟತೆಯ ಹೆಸರಲ್ಲಿ ಅಪ್ಪಿಕೊಂಡು ಬಂದ ಒಂದು ಪುಟ್ಟ ಸಮೂಹ ದೇವರು, ಧರ್ಮ ಎಂಬಂತಹ ಅಮೂರ್ತ ವಿಷಯಗಳನ್ನು ಮುಂದೆ ಮಾಡಿ ನಂಬಿಕೆಯ ನೆಪದಲ್ಲಿ ಮೌಢ್ಯತೆಗೆ ನೀರೆರೆದು ಸಂಪೋಷಿಸಿಕೊಂಡು ಬಂದರು. ಪರಿಣಾಮವಾಗಿ ಒಂದು ಸಾಮಾಜಿಕ ವ್ಯವಸ್ಥೆಯ ಮೇಲೆಯೇ ಯಜಮಾನಿಕೆ ಸ್ಥಾಪಿಸುವ ಹುನ್ನಾರದಲ್ಲಿ ಯಶಸ್ವಿಯಾದರು.

ಮಾನವನ ಬ್ರೇನನ್ನೇ ತೊಳೆಯುವ ಚಾಲಾಕಿತನದಿಂದ ಅವನ ಸಾಮರ್ಥ್ಯದ ಮೇಲೆಯೇ ಅವನಿಗೆ ನಂಬಿಕೆ ಕುಸಿಯುವಂತೆ ಮಾಡಿದ ಕುತಂತ್ರ ಸಾಮಾನ್ಯವೇ ? ಕೇವಲ ಯಾವುದೋ ಒಂದೆರಡು ಎಳೆ ಬಣ್ಣದ ದಾರ, ಒಂದಷ್ಟು ತಾಮ್ರದ ತಗಡಿನಲ್ಲಿ ದಿವ್ಯ ಶಕ್ತಿ ಎಂದು ನಂಬಿಸುವ ದೊಂಬರಾಟಗಳೇ ಬಲಗೊಂಡವು. ಇನ್ನು ಸತ್ಯಾಸತ್ಯತೆಗಳ ಗೊಡವೆಯೇ ಬೇಡವೆಂದು ಇಂಥಾ ಪುಟಗೋಸಿ ದಾರದ ಹಾಗೂ ತಾಮ್ರದ ತಾಯತಿನ ಶಕ್ತಿಯನ್ನೇ ಪ್ರಧಾನವೆಂದು ನಂಬಲು ಜನ ಶುರುಮಾಡಿದರು. ಮಾನವನ ಮಿದುಳಿನ ತಾಕತ್ತನ್ನು ಒಂದು ಬರ್ಲ ನಿಂಬೆ ಹಣ್ಣಿನ ಮುಂದೆಯೇ ನಿವಾಳಿಸಿ ಎಸೆಯತೊಡಗಿದರು. ವಿಜ್ಞಾನವನ್ನು ಎದೆಯ ಮಟ್ಟದವರೆಗೆ ಅಧ್ಯಯನ ಮಾಡಿರುವವರು ನಂಬುಗೆಯ ಪ್ರಶ್ನೆಯ ಎದುರು ನಿಂಬೆ ಹಣ್ಣಿಗಿಂತಲೂ ನಿಕೃಷ್ಟವಾಗ ತೊಡಗಿದರು. ಮಾನವನಿಂದಲೇ ನಿರ್ಮಿತವಾದ ವಾಹನವೊಂದು ಮೊಟ್ಟಮೊದಲ ಬಾರಿಗೆ ರಸ್ತೆಗೆ ಇಳಿಯ ಬೇಕಾದರೆ ನಿಂಬೆ ಹಣ್ಣುಗಳನ್ನು ದಾಟಿ ಬರಬೇಕು. ತನ್ನ ಸಾಮರ್ಥ್ಯ ಶಕ್ತಿಗಿಂತಲೂ ಮಿಗಿಲಾಗಿ ನಿಂಬೆ ಹಣ್ಣು ಕೆಲಸ ಮಾಡುವುದು ಎಂಬ ನಂಬಿಕೆಯಿದೆಯಲ್ಲ! ಅದೇ ದುಡಿಯದೆ ಬಾಯಿ ಮೊಸರು, ತುಪ್ಪ ಕಾಣುವವರನ್ನು ಸಲಹಿಕೊಂಡು ಬಂದಿರುವುದು.

ಹೀಗೆ ಜಾತಿ ಹಾಗೂ ಧರ್ಮದ ಸಹಾಯದಿಂದಲೇ ತಮ್ಮನ್ನು ಶ್ರೇಷ್ಠರೆಂದು ಭಾವಿಸಿಕೊಂಡು ಬಂದ ಪಡೆಯೊಂದು ಮಿಕ್ಕ ಒಂದು ಬೃಹತ್ ಸಮೂಹವನ್ನು ಮಾನಸಿಕವಾಗಿ ದಾಸ್ಯ ಪದ್ಧತಿಯಲ್ಲಿಡಲು ಬಳಸಿಕೊಂಡ ದಾಳವೆಂದರೆ ಈ ಧರ್ಮ, ದೇವರು. ಇವೆರಡು ಹುಟ್ಟಿದ್ದು ಭಯದಿಂದಲೇ. ಆ ಕಾರಣದಿಂದಾಗಿಯೇ ಹರ್ಬರ್ಟ ಸ್ಪೆನ್ಸರ್‌ರಂಥಾ ಚಿಂತಕರು ''ಇದ್ದವರ ಭಯದಿಂದ ರಾಜ್ಯ ಹುಟ್ಟಿತು, ಸತ್ತವರ ಭಯದಿಂದ ಧರ್ಮ ಹುಟ್ಟಿತು'' ಎಂದು ನುಡಿದಿದ್ದಾರೆ. ಈ ಭಯ ಎಂಬುದು ಎಂತೆಂಥಾ ತುಚ್ಛ ಕ್ರಿಯೆಗಳಿಗೆ ಕಾರಣವಾಗುತ್ತದೆ ಎಂದು ಹೇಳಲಿಕ್ಕಾಗುವುದಿಲ್ಲ. ಅದರಲ್ಲೂ ಸಾವಿನ ಭಯದಲ್ಲಿ ಸಿಲುಕಿರುವಾತ ಏನು ಬೇಕಾದರೂ ಮಾಡಬಲ್ಲಂತಹ ದುರ್ಬಲ ಮನಃಸ್ಥಿತಿಯನ್ನು ಹೊಂದಿರುತ್ತಾನೆ.

ಇತ್ತೀಚೆಗೆ ಒರಿಸ್ಸಾದ ಗ್ರಾಮ ಒಂದರಲ್ಲಿ ಅರ್ಥ



ಬಂಧು ಎಂಬ ಅನರ್ಥಗೇಡಿಯೊಬ್ಬ ತನಗಿರುವ 'ಏಡ್ಸ್' ರೋಗ ವಾಸಿಯಾಗುವದೆಂದು ನೆರೆಮನೆಯಲ್ಲಿಯ ಆರು ವರ್ಷದ ಸಿತಕಾಂತ ಎಂಬ ಮಗುವನ್ನು ಕಾಳಿದೇವಿಗೆ ಬಲಿ ಕೊಟ್ಟ. ಈ ದೇವಿ ಈ ದುರಾತ್ಮನ ಕನಸಿನಲ್ಲಿ ಕಾಣಿಸಿಕೊಂಡು, ನನಗೆ ಒಂದು ಮಗುವಿನ ರಕ್ತ ಬೇಕು ಎಂದಳಂತೆ. ಆಗ ಈ ಭಕ್ತವತ್ಸಲ ಆಯ್ತು ತಥಾಸ್ತು ! ಎಂದು ಆ ಹಸುಳೆಯ ರುಂಡವನ್ನೇ ಚೆಂಡಾಡಿದ. ರುಂಡ ಮಾಲಿನಿಯೂ ಖುಶ್ ! ಇವನೂ ಖುಶ್ ! ಇಂಥಾ ಮೂಡಭಕ್ತಿ ಇನ್ನೂ ನಮ್ಮಲ್ಲಿ ಬದುಕಿರುವುದೇ ಒಂದು ದೊಡ್ಡ ದುರಂತ. ಕೇವಲ ಮನುಷ್ಯನ ಮಟ್ಟದಲ್ಲಿರ ಬೇಕಾದ ಲಂಚ, ರಿಷವತ್ತುಗಳನ್ನು ನಾವು ದೇವರುಗಳವರೆಗೆ ತಂದು ಮುಟ್ಟಿಸಿದ್ದೇವೆ.

ಮೌಢ್ಯತೆಯನ್ನೇ ಭಕ್ತಿ ಎಂದು ಬಗೆಯುವ ಮನೋವಿಕಲರು ಇರುವವರೆಗೆ ಇಂಥಾ ಧಾವಂತಗಳು ಜರುಗುತ್ತಲೇ ಇರುತ್ತವೆ. ಇವರ ದೌರ್ಬಲ್ಯವೇ ಇನ್ನೊಂದು ಸಮೂಹದ ವರವಾಗಬಲ್ಲದು. ಇಂಥಾ ಸೂಕ್ಷ್ಮಗಳನ್ನು ನಮ್ಮ ಸುಶಿಕ್ಷಿತ ಸಮುದಾಯವೂ ಅರಿತಿಲ್ಲವಲ್ಲ! ಎಂದು ಖೇದವಾಗುತ್ತದೆ. ಇಂದು ಜಾತಿಯ ಪ್ರಜ್ಞೆ ಮತ್ತೆ ಮೊದಲಿನಂತೆಯೇ ಜಡವಾಗ ತೊಡಗಿದೆ. ಈ ಹೆಪ್ಪುಗಟ್ಟುವಿಕೆಯ ಹಿಂದೆ ಸುಶಿಕ್ಷಿತರ ಮನಸುಗಳೇ ಸಾಕಷ್ಟಿವೆ.

ಅಶಿಕ್ಷಿತರು ಮೌಢ್ಯತೆಯನ್ನು ತಬ್ಬಿಕೊಂಡರೆ ಹೋಗಲಿ ಬಿಡಿ ಎಂದು ಉದಾಸೀನ ಮಾಡಬಹುದು. ವೇಷ ಭೂಷಣಗಳ ಮೂಲಕವೂ ತಾನೊಬ್ಬ ಆಧುನಿಕ ನಾಗರಿಕತೆಯ ತುಂಡು ಎಂದು ತೋರಿಸಿಕೊಳ್ಳುವ ಸುಶಿಕ್ಷಿತನ ಮೌಢ್ಯದ ಜಾಡಿದೆಯಲ್ಲ ! ಅದು ತುಂಬ ಅಪಾಯಕಾರಿ. ಯಾಕೆಂದರೆ ಇವರು ಮಲಗಿದವರಲ್ಲ, ಆದರೆ ಗಾಢನಿದ್ರೆಯಲ್ಲಿರುವವರನ್ನು ನಾಚಿಸುವಂತೆ ನಟಿಸುವವರು. ಕತ್ತೆಗಳ ಮದುವೆ ಮಾಡಿದ್ದರಿಂದಲೇ ಮಳೆ ಬಂತು ಎಂದು ಸಾರುವ ಇವರಿಗೆ, ಮಳೆ ಬರಲು ವೈಜ್ಞಾನಿಕವಾಗಿ ಏನೇನು ಕ್ರಿಯೆಗಳು ಜರುಗಬೇಕು ಎಂಬುದೂ ತಿಳಿದಿದೆ. ಹೀಗೆ ಮುದ್ದಾಂ ಆಗಿ ಮೌಢ್ಯಗಳನ್ನು ಸಂಪೋಷಣೆ ಮಾಡಿಕೊಂಡು ಬರುವವರ ಮನಃಸ್ಥಿತಿಯ ಬಗೆಗೆ ನಾವು ಗಂಭೀರವಾಗಿ ಯೋಚಿಸಬೇಕು. ಯಾಕೆಂದರೆ ಸಮೂಹದ ಹಿತಾಸಕ್ತಿಗೆ ಅದು ಅನೇಕ ರೀತಿಯಲ್ಲಿ ತೊಡಕಾಗುವದು ಎಂಬ ತಿಳುವಳಿಕೆಯಿದ್ದರೂ ಅದನ್ನು ಬೆಂಬಲಿಸುವದರ ಹಿನ್ನೆಲೆಯಾದರೂ ಏನು ?

ಇನ್ನೊಬ್ಬರ ಕೈ, ಇಲ್ಲವೇ ಮುಖ ನೋಡಿ ಕೆಲವರು ಭವಿಷ್ಯ ಹೇಳುತ್ತಾರೆ. ಕಾಗೆ ಕೂಡುವುದಕ್ಕೂ ಟೊಂಗೆ ಮುರಿಯುವುದಕ್ಕೂ, ಎಂಬ ರೀತಿಯಲ್ಲಿ ನುಡಿವ ಈ ಜ್ಯೋತಿಷಿಗಳ ಮಾತು ನಂಬುವವರ ಮನದಲ್ಲಿ ಎಂತೆಂಥಾ ತಲ್ಲಣಗಳನ್ನು ಎಬ್ಬಿಸಬಹುದೆಂದು ಊಹಿಸಲಿಕ್ಕೂ ಸಾಧ್ಯವಿಲ್ಲ. ಪ್ರತಿಯೊಂದನ್ನೂ ಜ್ಯೋತಿಷ್ಯ ಕೇಳಿಯೇ ಮುಂದುವರೆಯುವವರಿಗಿಂತಲೂ ಎಲ್ಲಾ ಸಹಜಕ್ರಿಯೆಗಳ ಹಿಂದೆಯೂ ಏನೋ ಒಂದು ಕಾಡಾಟವಿದೆ ಎಂದು ಮತ್ತೆ ಮತ್ತೆ ಈ ದುರ್ಬಲ ಮನಸುಗಳು ಜ್ಯೋತಿಷಿಯ ಮುಂದೆ ಕೈಯೊಡ್ಡುತ್ತವೆ.

ಒಂದು ಬಾರಿ ಮೂವರು ವಿದ್ಯಾರ್ಥಿಗಳು ಉನ್ನತ ಪರೀಕ್ಷೆಗೆ ಕುಳಿತಿದ್ದರು. ಅವರಲ್ಲಿ ತಾವು ಯಾರ್‍ಯಾರು ಪರೀಕ್ಷೆಯಲ್ಲಿ ತೇರ್ಗಡೆಯಾಗಬಹುದು ಎಂದು ಯೋಚಿಸತೊಡಗಿದರು. ಸಮೀಪದಲ್ಲಿರುವ ಒಬ್ಬ ಜೋತಿಷ್ಯ ಹೇಳುವವನ ಬಳಿ ಮೂವರೂ ತೆರಳಿದರು. ಅವರೆಲ್ಲರೂ ಒಬ್ಬೊಬ್ಬರಾಗಿ ತಾವು ಪರೀಕ್ಷೆಗೆ ಕುಳಿತ ಬಗ್ಗೆ

*50ನೇ ಪುಟಕ್ಕೆ*

ಎಸ್. ಬಿ. ಜೋಗುರ

*ವಿಜ್ಞಾನವನ್ನು ಎದೆಯಮಟ್ಟದವರೆಗೆ ಅಧ್ಯಯನ ಮಾಡಿರುವವರು ನಂಬುಗೆಯ ಎದುರು ನಿಂಬೆ ಹಣ್ಣಿಗಿಂತಲೂ ನಿಕೃಷ್ಟವಾಗತೊಡಗಿದರು. ತನ್ನ ಸಾಮರ್ಥ್ಯಕ್ಕಿಂತಲೂ ಮಿಗಿಲಾಗಿ ನಿಂಬೆಹಣ್ಣು ಕೆಲಸ ಮಾಡುತ್ತದೆ ಎಂಬ ನಂಬುಗೆಯಿದೆಯಲ್ಲ! ಅದೇ ದುಡಿಯದೆ ಬಾಯಿ, ಮೊಸರು, ತುಪ್ಪ ಕಾಣುವವರನ್ನು ಸಲಹಿಕೊಂಡು ಬಂದಿರುವುದು.*

# ವಾಲ್ಮೀಕಿ ಮತ್ತೊಂದು ಚಿಂತನೆ

**ಭಾ**ರತೀಯ ಸಾಹಿತ್ಯ ಸೃಷ್ಟಿಯ ಜೊತೆಗೆ ದಾಖಲಾಗುವ ಹೆಸರು ವಾಲ್ಮೀಕಿ. ಆದಿಕವಿಯೆಂಬ ಸರ್ವಮನ್ನಣೆಯ ಈ ಕವಿಯ ಕಾಲ ಕಾವ್ಯ ಕರ್ತೃತ್ವದ ಬಗೆಗೆ ಭಿನ್ನ ನೆಲೆಗಳಲ್ಲಿ ಚರ್ಚೆ ನಡೆಯುತ್ತಿರುವಾಗಲೇ ಒಬ್ಬ ಕವಿ, ದೇಶ-ಕಾಲ ಧರ್ಮಗಳಿಂದಾಚೆಗೆ ಉಳಿದು ಬಿಡುವ ಮಹತ್ವವೇ ಮುಖ್ಯವಾಗಬೇಕಾಗುತ್ತದೆ. ಆದರೆ ವಾಲ್ಮೀಕಿ ಮಹರ್ಷಿಯಾಗುವ ಹೊತ್ತಿಗೆ, ತಾನೇ ಸೃಷ್ಟಿಸಿದ ಕಾವ್ಯದೊಳಗೆ ಪಾತ್ರವಾಗುವ ಹೊತ್ತಿಗೆ, ಆ ಮೂಲಕ ಆತ ಪುರಾಣವೂ ಆಗಿಬಿಡಬೇಕಾಗುವ ಅನಿವಾರ್ಯತೆಯ ಕಾರಣಕ್ಕೆ ಹತ್ತು-ಹಲವು ಕುತೂಹಲಗಳು ಉಂಟಾಗುತ್ತವೆ.

ಮಹಾಕಾವ್ಯಗಳು ಮಾನವೀಯಗೊಂಡು ಸರಳೀಕರಣಗೊಳ್ಳಬೇಕಾದ ತುರ್ತಿನಲ್ಲೇ, ಧರ್ಮ-ಜಾತಿಯ ವ್ಯಸನಗಳ ಕಾರಣಕ್ಕೆ ಕುಬ್ಜವಾಗಿಬಿಡುವ ಅಪಾಯಗಳು ಬಹಳ ಕಾಲದಿಂದಲೂ ನಡೆದೇ ಇವೆ. ಅದು ಕಾವ್ಯದ ಜೊತೆಗೆ ಕವಿಯನ್ನೂ ಒಳಗೊಳ್ಳುವ ಮತ್ತೂ ಒಂದು ದುರಂತಕ್ಕೂ ವಿಸ್ತರಿಸಿದ್ದಿದೆ. ಈ ತೆರನಾದ ಬಹಳ ಚರ್ಚೆಗಳು ರಾಮಾಯಣ ಮತ್ತು ವಾಲ್ಮೀಕಿಯ ಸಂದರ್ಭದಲ್ಲಿಯೂ ಚಾಲ್ತಿಯಲ್ಲಿವೆ.



ಶೋಕದಿಂದ ಶ್ಲೋಕದ ಸೃಷ್ಟಿಗೆ ಕಾರಣವಾಗುವ ಮುಗ್ಧವಾದ ಜೀವಪರ ಕಾಳಜಿಯ ಅಂತಃಕರಣವುಳ್ಳ ಒಬ್ಬ ಕವಿ ಮೂಲದಲ್ಲಿ ತಾನೂ ಒಬ್ಬ ಜೀವ ಹಿಂಸೆಯ ವೃತ್ತಿಯವನಾಗಿದ್ದ ಎನ್ನುವ ಕತೆಯೇ, ಮತ್ತಷ್ಟು ಚೋದ್ಯ. ಆದರೂ ಕಾಲ, ಅರಿವಿನ ಕಾರಣದಿಂದ ಕರ್ಮವನ್ನು ಬದಲಾಯಿಸುವ ಮತ್ತು ಮನುಷ್ಯತ್ವವೇ ಎಲ್ಲಾ ಶ್ರೇಷ್ಠತೆಗಳಿಗೂ ನೆಲೆಯೆಂಬ ನಂಬಿಕೆಗಳು ದಟ್ಟವಾಗುವ ಈ ಬಗೆಯ ಐತಿಹ್ಯಗಳು ದೇಶೀಯ ಪರಂಪರೆಯ ಸಂದರ್ಭಕ್ಕೆ ಬಹಳ ಮುಖ್ಯವೇ ಆಗುತ್ತವೆ.

ಕಾವ್ಯವೆನ್ನುವ ಅನುಭವ ದಾಖಲೆಯ ಪ್ರಕ್ರಿಯೆಯನ್ನು ದೈವತ್ವಕ್ಕೇರಿಸಿ ಅದಕ್ಕೆ ಅಗತ್ಯವಿರುವ ಮಡಿವಂತಿಕೆಯನ್ನು ಸೃಷ್ಟಿಸಿ ವಿದ್ಯೆ ಮತ್ತು ಜ್ಞಾನಗಳನ್ನು ಜಾತಿಯ ಆಧಾರದ ಮೇಲೆ ಅರ್ಹತೆಗಳನ್ನಾಗಿಸುವ ವ್ಯವಸ್ಥಿತ ಸಂಚು ನಡೆವ ಧರ್ಮಾಧಾರಿತ ಸಮುದಾಯದ ಸಂದರ್ಭದಲ್ಲಿ ಒಂದು ಆದಿ ಕಾವ್ಯ, ಮಹಾಕಾವ್ಯವಾಗಿ ಸೃಷ್ಟಿಯಾಗುವುದು ಮತ್ತು ಅದರ ಸೃಷ್ಟಿಕರ್ತ ಮೂಲವೃತ್ತಿಯಿಂದ ಬೇಡನಾಗಿರುವುದು ಒಂದು ಪವಾಡವೆಂದೇ ಹೇಳಬಹುದು.

ವಾಲ್ಮೀಕಿಯನ್ನು ಕುರಿತು ಬೇರೆ ಬೇರೆ ವ್ಯಾಖ್ಯಾನಗಳೆಷ್ಟೇ ಸೃಷ್ಟಿಯಾದರೂ ಅವನು ಋಷಿಯಾಗಿರಲಿಲ್ಲ ಮತ್ತು ವೃತ್ತಿಯ ವಿಭಜನೆಯ ಸಂದರ್ಭದಲ್ಲಿಯೂ ಆ ಕಾಲಕ್ಕೆ ಜ್ಞಾನವನ್ನು ಹೊಂದಲೇಬಹುದಾದ ಜಾತಿಯವನೂ ಆಗಿರಲಿಲ್ಲ ಎನ್ನುವ ಬಹುಮತ ನಂಬಿಕೆಯನ್ನು ಅಲ್ಲಗಳೆಯಲಿಕ್ಕಾಗುವುದಿಲ್ಲ. ಆಸಕ್ತಿ ಕೆರಳಿಸಬಹುದಾದ ಚರ್ಚೆಯ ಆಯಾಮಗಳು ತೆರೆದುಕೊಳ್ಳಬಹುದಾದದ್ದು ಇಲ್ಲಿಂದಲೇ ಎನಿಸುತ್ತದೆ.

ವಲ್ಮೀಕದೊಳಗಿನಿಂದ ಎದ್ದು ಬರುವುದೆಂದರೆ ಋಷಿಯಾಗುವುದು ಎಂದು ಅರ್ಥ. ಇಲ್ಲಿ ಋಷಿಯಾಗುವ ಪ್ರಕ್ರಿಯೆ ಜ್ಞಾನವನ್ನು ಗಳಿಸಿಕೊಳ್ಳುವುದಕ್ಕೆ ಸಂಬಂಧಿಸಿದ್ದು. ಬೇಡ ವೃತ್ತಿಯನ್ನಾಧರಿಸಿ ಬದುಕುವ ಒಬ್ಬ ವ್ಯಕ್ತಿಗೆ ಹೀಗೆ ಜ್ಞಾನದ ಆಸಕ್ತಿ ಬೆಳೆಯುವುದಾಗಲೀ, ಅದನ್ನು ಒಪ್ಪಿತ ನೆಲೆಯಲ್ಲಿ ಸಾಧಿಸುವುದಾಗಲೀ ಸುಲಭವಲ್ಲವೆಂದರೂ, ಅಸಾಧ್ಯವಲ್ಲ. ಆ ಬಗೆಯ ಬಹಳಷ್ಟು ಉದಾಹರಣೆಗಳೂ ನಮ್ಮೊಂದಿಗಿವೆ. ಆದರೆ ಜ್ಞಾನ-ಶಿಸ್ತುಗಳ ಹಕ್ಕುಗಾರಿಕೆಯ ಬದ್ಧತೆಯ ಸಂದರ್ಭದಲ್ಲಿ ಒಬ್ಬ ವೃತ್ತಿಯಾಧಾರಿತ ಶೂದ್ರ ಮಹಾಕವಿಯಾಗುವುದೇ ದೊಡ್ಡ ಸಾಧನೆ ಮತ್ತು ಸಾರ್ವಕಾಲಿಕ ಸತ್ಯ ಎನ್ನುವುದನ್ನು ಒಪ್ಪಲೇಬೇಕು.

ಬೇಡನಾದವನು ಋಷಿಯಾದ ಹೊತ್ತಿಗೆ ಮತ್ತೊಬ್ಬ ಬೇಡನನ್ನು ಶಪಿಸಿ ಶ್ಲೋಕದ ಉಗಮಕ್ಕೆ ಕಾರಣನಾಗುತ್ತಾನೆ. ಆದರೆ ಆ ಶೋಕ, ಕೇವಲ ಬೇಡ ಕ್ರೌಂಚ ಪಕ್ಷಿಯನ್ನು ಕೊಂದ ಕಾರಣಕ್ಕೆ ಉಂಟಾಗುವಂತಹುದಲ್ಲ. ಅದು ಅವನ ನೆನಪಿನ ಕಾರಣಕ್ಕೆ, ತಾನು ಸಾಗಿ ಬಂದ ಹಾದಿಯ ಸ್ಮರಣೆಯಿಂದ ತಾನು ವಧಿಸಿರಬಹುದಾದ ಪಕ್ಷಿ-ಪ್ರಾಣಿಗಳ ಲೆಕ್ಕಾಚಾರದೊಂದಿಗೆ ಪ್ರಾಯಶ್ಚಿತ್ತದ ಪರಂಪರೆಯಲ್ಲಿ ನೊಂದು ಬಂದ ಶ್ಲೋಕವೂ ಹೌದು. ಸಕಲ ಜೀವರಾಶಿಗೂ ಸ್ವತಂತ್ರವಾಗಿ ಬದುಕುವ ಹಕ್ಕಿರುವ ಅಸ್ತಿತ್ವದ ಪ್ರತಿಪಾದನೆಯ ಪ್ರಶ್ನೆಯಿದು.

ಧರ್ಮ ರಕ್ಷಣೆಯ ಸ್ವರೂಪಕ್ಕೆ ಆ ಕಾಲಕ್ಕೆ, ಹತ್ತಾರು ಅರ್ಥಗಳಿದ್ದವು. ಅವುಗಳಲ್ಲಿ ಸ್ತ್ರೀ ರಕ್ಷಣೆಯೂ ಒಂದು. ಮಾನವ-ದಾನವ ಸಂಘರ್ಷವೆನ್ನುವುದೇ ನೀತಿ-ಅನೀತಿಗಳ ಲೆಕ್ಕಾಚಾರವೆನ್ನುವ ಕಾರಣಕ್ಕೆ ದೈವದ ಪ್ರಾತಿನಿಧಿಕತೆಯ ಅರ್ಥದಲ್ಲಿ ಅವತಾರ-ಸೃಷ್ಟಿಯ ನಂಬಿಕೆಗಳೂ ದಟ್ಟವಾಗಿದ್ದವು. ಆಗಲೇ ರಾಮ ಸೃಷ್ಟಿಯಾಗುತ್ತಾನೆ, ರಾವಣ ಶತ್ರುವಾಗುತ್ತಾನೆ.

**ಡಾ|| ಜಿ. ಪ್ರಶಾಂತ ನಾಯಕ**

ಭಾರತೀಯ ಸಂಸ್ಕೃತಿಯೆನ್ನಬಹುದಾದ ಮೌಲ್ಯದ ಸಂದರ್ಭಕ್ಕೆ ಪ್ರಧಾನವಾಗಿ ಕಾಣಸಿಗುವುದು ನಮ್ಮಲ್ಲಿನ ಕುಟುಂಬ ವ್ಯವಸ್ಥೆ. ಮಾನವೀಯ ಸಂಬಂಧಗಳಲ್ಲಿ ನಂಬಿಕೆಯಿರಿಸಿದ ಜನಸಮುದಾಯ ಆ ಕಾರಣಕ್ಕೆ ಪ್ರೀತಿ-ಸ್ನೇಹ ವಾತ್ಸಲ್ಯ, ವಿಶ್ವಾಸಗಳೇ ಮೊದಲಾದ ಭಾವಗಳನ್ನು ಜೀವನದ ಪರಿಪೂರ್ಣತೆಗೆ ಆರೋಪಿಸಿಕೊಂಡು ಬದುಕಿದ್ದಿದೆ. ಅದಕ್ಕೆ ಅಗತ್ಯವಾದ ಮಾದರಿಗಳಾಗಲೀ, ಆದರ್ಶಗಳಾಗಲೀ ಅವನ್ನು ತಮ್ಮ ಸಮುದಾಯದ ನಡುವಿನಿಂದಲೇ ನಿರೀಕ್ಷಿಸುತ್ತದೆ. ಈ ತೆರನಾದ ಹಲವು ಕಾರಣಗಳಿಂದಾಗಿ ರಾಮಾಯಣದಂತಹ ಒಂದು ಕತೆ ಜನಪದೀಯ ಮನಸ್ಸುಗಳಿಂದ - ಶಿಷ್ಟವಾದ ದಾಖಲೆಯೂ ಆಗಿ ಅದು ಒಪ್ಪಿತವಾಗಿಬಿಡುತ್ತದೆ. ವಾಲ್ಮೀಕಿ ಇದಕ್ಕೆ ಮಾಧ್ಯಮವಾಗುತ್ತಾನೆ.

ಸಮಾಜ ವ್ಯವಸ್ಥೆಯನ್ನು ಬಲಗೊಳಿಸುವ ಕೆಲಸದಲ್ಲಿ ಕುಟುಂಬದ ಬೇರುಗಳು ಭದ್ರವಾಗಲೇಬೇಕು. ಈ ಕಾರಣಕ್ಕೇ ಭಾರತೀಯ ಕುಟುಂಬಗಳ ನೆಲೆ ಅವಿಭಕ್ತ ಪರಂಪರೆಯಿಂದ ಕಾಣಸಿಗುವುದು. ಅಂತಹದ್ದೇ ಒಂದು ಚಿತ್ರಣ ದಶರಥನ ಬದುಕಿನ ವ್ಯಾಖ್ಯಾನದೊಂದಿಗೆ ಪ್ರಾರಂಭವಾಗುತ್ತದೆ. ಒಬ್ಬ ಸಮಾಜದೊಳಗಿನ ಶ್ರಮ ಸಂಸ್ಕೃತಿಯ ಪ್ರತಿನಿಧಿಯಾಗುವ ವಾಲ್ಮೀಕಿಗೆ ಈ ಬಗೆಯ ಚಿತ್ರಣ ತೀರಾ ಸಹಜವೇ ಆಗುತ್ತದೆ.

ಕೌಟುಂಬಿಕ ಸಂಬಂಧದೊಳಗೆ ಉಂಟಾಗಬಹುದಾದ ಭಾವಪರ ಜೀವಸೆಲೆಯನ್ನು ಗುರುತಿಸುತ್ತಲೇ ಅದು ವಿಘಟನೆಯ ಹಾದಿಗೂ ಮಗ್ಗುಲಾಗುವ ಚಿತ್ರಣ ರಾಮಾಯಣದ ಕೇಂದ್ರ ಪ್ರಶ್ನೆಯಾಗುತ್ತದೆ. ಮನುಷ್ಯನ ಸಹಜ ಗುಣಗಳ ಪ್ರಶ್ನೆ ಬಂದಾಗ ಅದಕ್ಕೆ ಎಲ್ಲರೂ ಪಕ್ಕಾಗಲೇಬೇಕು. ಜಾದೂವಿನ ರೀತಿಯಲ್ಲಿ ಘಟನೆಗಳು ಘಟಿಸುವಂತಿಲ್ಲ. ಸೀತೆಯನ್ನು ಕೇಂದ್ರ ಪ್ರಜ್ಞೆಯಲ್ಲಿರಿಸಿ ಕೊಂಡಂತೆ ನಡೆಯುವ ರಾಮ-ರಾವಣರ ಯುದ್ಧವೂ ಮುಕ್ತಾಯದ ಹೊತ್ತಿಗೆ ಬೇರೆ ಆಯಾಮವನ್ನೇ ಪಡೆದುಕೊಳ್ಳುತ್ತದೆ. ವಾಲ್ಮೀಕಿಯ ಪ್ರಸ್ತುತತೆ ವ್ಯಕ್ತವಾಗುವುದು, ಇದರಾಚೆಗೆ.

ರಾಜತ್ವದ ನೆರಳಲ್ಲಿ ಸಹಜವಾಗಿ ಘಟಿಸಬಹುದಾದ ಒಂದು ಮಹಾಯುದ್ಧದಂತೆ ನಡೆದ ರಾಮಾಯಣ ವಿನಾಕಾರಣ ಸೀತೆಯನ್ನು ಬಲಿಪಶು ಮಾಡಿಕೊಂಡುಬಿಡುತ್ತದೆ. ರಾಮನು ಸೀತೆಯನ್ನು ಅವಮಾನಿಸುವುದರೊಂದಿಗೆ ನಂಬಿಕೆಯ ಭಾವಕ್ಕೆ, ಹೊಸ ಅರ್ಥವನ್ನು ಹುಡುಕಬೇಕಾದ ತುರ್ತನ್ನು, ಪುರುಷೋತ್ತಮನೇ ಸೃಷ್ಟಿಸುತ್ತಾನೆ. ವ್ಯವಸ್ಥೆಯೊಳಗೆ ನಿಂತು ಅದು ನಿಯಂತ್ರಿಸಿದಂತೆ ಕೃತಿ ಸೃಷ್ಟಿಸುವ ಕವಿ, ದಿಢೀರನೆ ಕಾವ್ಯದೊಳಗೆ ತಾನೇ

ಪಾತ್ರವಾಗುತ್ತಾನೆ. ರಾಮನ ಮಡದಿಯಾಗಿಯೂ ಅನಾಥಳಾಗುವ ತುಂಬು ಗರ್ಭಿಣಿಯನ್ನು ರಕ್ಷಿಸಲು ವಾಲ್ಮೀಕಿಯ ಪ್ರವೇಶವಾಗುತ್ತದೆ. ಅದರರ್ಥ ರಾಮನನ್ನು ವಾಲ್ಮೀಕಿ ಒಪ್ಪುವುದಿಲ್ಲ. ಪ್ರಜಾಪರನಾದ ರಾಮನ ವ್ಯಕ್ತಿತ್ವ ಪ್ರಶ್ನೆಯಾಗುವುದು, ದ್ವಂದ್ವವಾಗುವುದು ಇಲ್ಲಿಂದಲೇ ಪ್ರಾರಂಭಗೊಳ್ಳುತ್ತದೆ.

ವಾಲ್ಮೀಕಿಯ ಮಹರ್ಷಿತನ ಇಲ್ಲಿ ಉಜ್ವಲಗೊಳ್ಳುತ್ತದೆ. ತನ್ನ ಕಾವ್ಯದ ಕಥಾನಾಯಕನ ವರ್ತನೆಯನ್ನು ಸಮರ್ಥಿಸುವುದು ಅವನಿಂದಾಗುವುದಿಲ್ಲ. ಅದಕ್ಕೆ ಪರ್ಯಾಯವಾಗಿ ಆತ ಕುಶ-ಲವರ ಲಾಲನೆ ಪಾಲನೆಗೆ ಮಹತ್ವ ಕೊಡುತ್ತಾನೆ. ರಾಮನಿಗೆ ಜ್ಞಾನೋದಯ ಉಂಟು ಮಾಡುವ ಅರಿವನ್ನು ಅವನ ಮಕ್ಕಳ ಹಿನ್ನೆಲೆಯಿಂದಲೇ ನೀಡುತ್ತಾನೆ. ಆ ಕಾಲಕ್ಕೆ ಸೀತೆಯ ಬಗೆಗೆ ತಳೆಯ ಬಹುದಾದ ಈ ಬಗೆಯ ವಿಶ್ವಾಸಗಳಾಗಲೀ, ಅವಳನ್ನು ರಕ್ಷಿಸುವ ನೀತಿಯಾಗಲೀ ಜ್ಞಾನ-ಶಿಸ್ತಿನಿಂದ ರೂಪು ಗೊಳ್ಳುವುದಿಲ್ಲ. ಅದು ಮಾನವೀಯವಾದ ಸಹಜ ಗುಣ ವಾಗಿ ವೈಯಕ್ತಿಕ ನೆಲೆಯಲ್ಲಿ ಮಾತ್ರ ಅನಾವರಣಗೊಳ್ಳು ವಂತಹುದು. ಶ್ರಮ ಸಂಸ್ಕೃತಿಯ ಹಿನ್ನೆಲೆಯಲ್ಲಿ ರೂಪು ಗೊಂಡ ವಾಲ್ಮೀಕಿಗದು ಸಾಧ್ಯವಾಗುತ್ತದೆ. ಜನ ಸಮುದಾಯದ ಅರ್ಥವ್ಯಾಪ್ತಿಯಾಗುವ ರಾಮನಿಂದ ಸಾಧ್ಯವಾಗುವುದಿಲ್ಲ. ಆದ್ದರಿಂದಲೇ ಸೀತೆಗೆ ಆನಂತರಕ್ಕೆ ರಾಮನೊಂದಿಗೆ ಸಂಸಾರ ಮಾಡುವುದು ಒಪ್ಪಿತ ಸಂಗತಿ ಯಾಗದೇ ಅವಳು ಭೂಮಿಯ ಒಳಕ್ಕೆ ಸಾಗಿಬಿಡುತ್ತಾಳೆ. ಮೇಲ್ನೋಟಕ್ಕೆ ಕರ್ಮ ಸಿದ್ಧಾಂತದಂತೆ ಗೋಚರವಾಗುವ ಈ ಪರಿಸ್ಥಿತಿ ರಾಮನನ್ನು ಕಾಡದೇ ಬಿಡುವಂತಹುದಲ್ಲ. ಸೀತೆಯನ್ನು ದೂರಾಗಿಸಿಯೇ ರಾಮನಿಗೆ ಅವನ ದುಡುಕು ಗಳನ್ನು ಅರ್ಥ ಮಾಡಿಸಬೇಕಾಗುತ್ತದೆ. ಇಲ್ಲಿ ವಾಲ್ಮೀಕಿಯ ಸಮ್ಮುಖದಲ್ಲೇ ಇದು ಘಟಿಸುತ್ತದೆ. ಅದು ತಾನೇ ಒಪ್ಪಿದ್ದು ಎನ್ನುವಂತೆ ಆತ ನಡೆದುಕೊಳ್ಳುತ್ತಾನೆ. ಇದು ವ್ಯಕ್ತಿಗತವಾದ ಭಾವಸಂಬಂಧೀ ತೀರ್ಮಾನವೆಂಬ ಕಾರಣಕ್ಕೂ ಅವನ ಅನುಮೋದನೆಯಿರಬಹುದು. ಎಲ್ಲಾ ಬಗೆಯ ಜಾತಿ-ಸಂಬಂಧಗಳ ಗ್ರಹಿಕೆಯಾಚೆ ನೈತಿಕತೆಯ ಸ್ಪಂದನವೇ ಇಲ್ಲಿ ಕೆಲಸ ಮಾಡುತ್ತದೆ.

ಇಲ್ಲಿ ಇಡಿಯಾದ ವಾಲ್ಮೀಕಿ ಕೇಂದ್ರದ ಚರ್ಚೆಗೆ ಭಿನ್ನ ಮಗ್ಗುಲುಗಳಿವೆ. ಇದು ಅಲೋಚಿಸಬಹುದಾದ ಸಾಧ್ಯತೆಗಳ ಹುಡುಕಾಟವೂ ಹೌದು.

ನಮ್ಮಲ್ಲಿ ಪ್ರತೀ ಪುರಾಣ ಪಾತ್ರ ಸೃಷ್ಟಿಯ ಸಂದರ್ಭ ದಲ್ಲೂ ವ್ಯಕ್ತವಾಗುವ ಹತ್ತು - ಹಲವು ಕಥಾರೂಪಗಳು ವ್ಯಷ್ಟಿ - ಸಮಷ್ಟಿಯ ಕಾರಣಕ್ಕೆ ನಾನಾ ಬಗೆಯಲ್ಲಿ ರೂಪು ಗೊಂಡಿರುತ್ತವೆ. ಅಂತಹವೇ ಹತ್ತಾರು ಕತೆಗಳು ವಾಲ್ಮೀಕಿಯ ಜೀವನವನ್ನು ಕುರಿತಂತೆಯೂ ಸೃಷ್ಟಿಯಾಗಿವೆ. ಪ್ರಾರಂಭಕ್ಕೆ ಚರ್ಚಿಸಿದಂತೆ, ಸಾಮಾನ್ಯನೊಬ್ಬ ಮಹರ್ಷಿ ಯಾಗುವತ್ತ ಸಾಗುವ ಬಗೆಗೆ ಇರುವ ವ್ಯಾಖ್ಯಾನಗಳೇ ಚರ್ಚಾರ್ಹವಾದವು. ಬಹಳ ಸಲ ನಮ್ಮ ಕೆಲವು ವ್ಯವಸ್ಥೆಗಳ ನಿಯಂತ್ರಿತ ಸಂಚಿನಂತೆ ವಾಲ್ಮೀಕಿಯ ಬದುಕೂ ತೇಲಿ ಹೋಗಿಬಿಡುವ ಅಪಾಯವಿರುವಲ್ಲಿಯೇ ನಾವು ಮತ್ತೆ ಮತ್ತೆ ಬೇರೆ ಸಾಧ್ಯತೆಗಳ ಹಿನ್ನೆಲೆಯಿಂದ ಆಲೋಚಿಸಬೇಕಾಗುತ್ತದೆ.

ಉದಾಹರಣೆಗೆ, ಉತ್ತರ ರಾಮಾಯಣದಲ್ಲಿ ಶಂಬೂಕನ ತಪಸ್ಸನ್ನು ಕಂಡು ಕ್ರೋಧಗೊಳ್ಳುವ ರಾಮ, ಅವನನ್ನು ಕೊಲ್ಲುವ ಪ್ರಸಂಗವಿದೆ. ತೀರಾ ಸಹಜವಾಗಿ ಸಾಮಾನ್ಯಜ್ಞಾನದಿಂದ ಆಲೋಚಿಸಬಹುದಾದರೆ, ಮೂಲತಃ ಶೂದ್ರನಾದ ವಾಲ್ಮೀಕಿ ತಪಸ್ಸಿನ ಕಾರಣ ದಿಂದಲೇ ಮಹರ್ಷಿಯಾಗಿ ರಾಮಾಯಣವನ್ನು ರಚಿಸುವುದಾದರೆ, ಅವನ ಕಾವ್ಯದಲ್ಲಿ ಆತನೇ ಮತ್ತೊಬ್ಬ ಶೂದ್ರನ ತಪಸ್ಸನ್ನು ನಿರಾಕರಿಸುವುದು ಎಷ್ಟರ ಮಟ್ಟಿಗೆ ಸಹಜವಾದೀತು ? ನಮ್ಮ ನಡುವೆ ಸಹಜವಾಗಿ ಮಾನವೀಯವಾಗಬಹುದಾದ, ಆ ಕಾರಣದಿಂದಲೇ ಮೌಲ್ಯಗಳೂ ಆಗಿ ಪ್ರತಿಪಾದನೆಗೊಳ್ಳಬಹುದಾದ ಬಹಳ ಕಾವ್ಯಗಳನ್ನು, ಬದುಕುಗಳನ್ನು, ಪಾತ್ರಗಳನ್ನು, ಧರ್ಮಾಂಧತೆಯ ಕಾರಣದಲ್ಲಿ ಅವೈಜ್ಞಾನಿಕವಾಗಿ ಕುಬ್ಜಗೊಳಿಸುವ ವ್ಯವಸ್ಥಿತ ಸಂಚು ನಿರಂತರವಾಗಿ ಸಾಗಿಬಂದಿದೆ. ಅಂತಹದ್ದೇ, ವಾಲ್ಮೀಕಿ ಮತ್ತು ಅವನು ಸೃಷ್ಟಿಸಿದನೆನ್ನುವ ಕತೆಯ ಸಂದರ್ಭದಲ್ಲಿಯೂ ಘಟಿಸುತ್ತದೆ. ಆದ್ದರಿಂದಲೂ ಆದಿಕವಿ, ಮಹರ್ಷಿ ಮೊದಲಾದ ಅಭಿಧಾನಗಳನ್ನಿತ್ತು ಅದಕ್ಕೆ ಪೂರಕವಾಗಿ ಪುನೀತಗೊಳಿಸುವ ಭ್ರಮೆಯ ಕತೆಗಳನ್ನು ಸೃಷ್ಟಿಸಿ ಅವನನ್ನು ಮೂರ್ತಿಯಾಗಿ ಪ್ರತಿಷ್ಠಾಪಿಸಿಬಿಡುವ ಕೆಲಸವೂ ನಡೆದಿದೆ.

ಆದರೆ, ಸಂಚುಗಳನ್ನು ಜೀರ್ಣಿಸಿಕೊಳ್ಳುವ ಶಕ್ತಿ ಸತ್ಯಗಳಿಗಿರುತ್ತದೆ. ಆದ್ದರಿಂದಲೇ ಕಾಳಿದಾಸ, ವ್ಯಾಸರಂತಹ ಶ್ರಮ ಸಂಸ್ಕೃತಿಯ ಪ್ರತಿನಿಧಿಗಳು ವ್ಯವಸ್ಥೆ ಗಳನ್ನು ಜಡ್ಡುಗೊಳಿಸುವ ಬೌದ್ಧಿಕ ಕಸರತ್ತಿಗೆ ಸಡ್ಡು ಹೊಡೆದಂತೆ ಗೆದ್ದು ನಿಲ್ಲುತ್ತಾರೆ. ಬದುಕಿನ ಹಕ್ಕುಗಾರಿಕೆಯ ಪ್ರಶ್ನೆಯನ್ನು ಹೆಚ್ಚು ಜೀವಂತಗೊಳಿಸುತ್ತಾರೆ. ಅದನ್ನೇ ಪರಂಪರೆಯೋಪಾದಿಯಲ್ಲಿ ಉಳಿಸಲು ಪ್ರಯತ್ನಿಸುವಂತೆ ಕಾಣುತ್ತಾರೆ. ಅವರೆಲ್ಲರ ಮುಂದಾಳುವಾಗಿ ವಾಲ್ಮೀಕಿ ಕಾಣಸಿಗುತ್ತಾನೆ.

**ಡಾ|| ಜಿ. ಪ್ರಶಾಂತ ನಾಯಕ**
ಉಪನ್ಯಾಸಕ, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾನಿಲಯ
ಶಂಕರಘಟ್ಟ - ೫೭೭ ೪೫೧

# ಪಂಚಾಯತ್ ರಾಜ್ ಮತ್ತು ಮಹಿಳಾ ಮೀಸಲಾತಿ

*ಭಾರತ ಸಂವಿಧಾನದ ೭೩ನೇ ತಿದ್ದುಪಡಿಯನ್ವಯ ೧೯೯೩ರಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಮಹಿಳೆಯರಿಗೆ ಶೇ. ೩೩ರಷ್ಟು ಮೀಸಲಾತಿಯನ್ನು ಜಾರಿಗೊಳಿಸಲಾಗಿದೆ. ಪಂಚಾಯತ್ ರಾಜ್ ಸಂಸ್ಥೆಗಳ ಮೂರು ಸ್ತರಗಳಲ್ಲಿ ೧/೩ ಭಾಗ ಮಹಿಳಾ ಮೀಸಲಾತಿಯ ತಿದ್ದುಪಡಿ ಮಸೂದೆ ಮಂಡನೆಯಾದಾಗ ಅಂತಹ ಪ್ರತಿರೋಧವೇನೂ ರಾಜಕೀಯ ಪಕ್ಷಗಳಲ್ಲಿ ಬರಲಿಲ್ಲ. ಈ ಮೀಸಲಾತಿಯಿಂದ ದೇಶದಾದ್ಯಂತ ಹತ್ತು ಲಕ್ಷಕ್ಕೂ ಹೆಚ್ಚಿನ ಮಹಿಳೆಯರು ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಪ್ರತಿನಿಧಿಗಳಾಗಿದ್ದಾರೆ. ಈ ಕಾಯ್ದೆ ಅನ್ವಯ ಪ್ರತಿರಾಜ್ಯಗಳು ಈ ಮೀಸಲಾತಿಯನ್ನು ಜಾರಿಗೊಳಿಸಿದವು. ಇದರಂತೆ ಕರ್ನಾಟಕವು ಸಂವಿಧಾನದ ೭೩ನೆಯ ತಿದ್ದುಪಡಿಯನ್ವಯ ೧೯೯೩ರಲ್ಲಿ ಕರ್ನಾಟಕ ಪಂಚಾಯತ್ ರಾಜ್ ಕಾಯ್ದೆಯನ್ನು ಜಾರಿಗೊಳಿಸಿತು. ಈ ಕಾಯ್ದೆಯು ಜಾರಿಗೆ ಬಂದು ೧೦ ವರ್ಷಗಳನ್ನು ಸಮೀಪಿಸುತ್ತಿದೆ. ಈ ಕಾಯ್ದೆ ಪ್ರಕಾರ ರಾಜ್ಯದ ಪಂಚಾಯತ್ ರಾಜ್ ಸಂಸ್ಥೆಗಳ ಮೂರು ಸ್ತರಗಳಲ್ಲಿ ಮೀಸಲಾತಿಗೂ ಮೀರಿ ಮಹಿಳೆಯರು ಆಯ್ಕೆಗೊಂಡಿದ್ದಾರೆ. ಪ್ರಸ್ತುತ ಕರ್ನಾಟಕದಲ್ಲಿ ಈಗಾಗಲೇ ಮಹಿಳೆಯರು ಒಂದು ಅವಧಿಯನ್ನು ಮುಗಿಸಿ ಎರಡನೇ ಅವಧಿಯಲ್ಲಿ ಆಡಳಿತವನ್ನು ನಡೆಸುತ್ತಿದ್ದಾರೆ. ಮೀಸಲಾತಿ ಜಾರಿಗೆ ಬಂದ ೧೦ ವರ್ಷಗಳಲ್ಲಿ ಮಹಿಳೆಯರ ಆಯ್ಕೆಯಿಂದ ಅಭಿವೃದ್ಧಿಯಲ್ಲಿ ಆದ ಬದಲಾವಣೆ, ನೀತಿ ನಿರ್ಣಯ ಪ್ರಕ್ರಿಯೆಗಳಲ್ಲಿ ಇವರ ಸಹಭಾಗಿತ್ವ ಕುರಿತು ಪ್ರಸ್ತುತ ಲೇಖನದಲ್ಲಿ ಚರ್ಚಿಸಲಾಗಿದೆ.*

ಎಂ. ಯರಿಸ್ವಾಮಿ

ಭಾರತದಂತಹ ಶ್ರೇಣೀಕೃತ ಸಮಾಜದಲ್ಲಿ ವಂಚಿತ ವರ್ಗಗಳು ಮತ್ತು ಮಹಿಳೆಯರು ಅಧಿಕಾರದ ಸೂತ್ರ ಹಿಡಿಯುವುದೆಂದರೆ ಅದೊಂದು ಕ್ರಾಂತಿಕಾರಿ ಘಟನೆ ಯೆಂದರೆ ತಪ್ಪಾಗಲಿಕ್ಕಿಲ್ಲ. ಇಲ್ಲಿಯವರೆಗೆ ದೇಶದ ಇತಿಹಾಸವನ್ನು ಹಿಂತಿರುಗಿ ನೋಡಿದಾಗ ಮಹಿಳೆಯರಿಗೆ ರಾಜಕೀಯ ಕ್ಷೇತ್ರದಲ್ಲಿ ಗಮನಾರ್ಹವಾದ ಮೀಸಲಾತಿ ಪ್ರಾತಿನಿಧ್ಯವನ್ನು ನೀಡಿರುವುದು ಎಲ್ಲೂ ಕಂಡುಬಂದಿಲ್ಲ. ಸ್ವಾತಂತ್ರ್ಯಪೂರ್ವದ ಆಡಳಿತ ವ್ಯವಸ್ಥೆಯಲ್ಲಿ ಸ್ಥಳೀಯ ಸಂಸ್ಥೆಗಳಲ್ಲಿ ಮಹಿಳೆಯರನ್ನು ನಾಮಕರಣ ಮಾಡುವ ಮೂಲಕ ಸದಸ್ಯತ್ವವನ್ನು ಕೊಡಲಾಗುತ್ತಿತ್ತು. ಸ್ವಾತಂತ್ರ್ಯಾನಂತರದಲ್ಲಿ ಬಂದ ಪಂಚಾಯತ್ ರಾಜ್ ಕಾಯಿದೆಗಳಲ್ಲಿ ತಾಲ್ಲೂಕು ಅಭಿವೃದ್ಧಿ ಮಂಡಳಿ ಮತ್ತು ಗ್ರಾಮಪಂಚಾಯತಿಗಳಲ್ಲಿ ಒಟ್ಟು ಸದಸ್ಯರಲ್ಲಿ ಕನಿಷ್ಠ ಇಬ್ಬರನ್ನು ನಾಮಕರಣ ಮಾಡುವುದರ ಮೂಲಕ ಸ್ಥಾನವನ್ನು ಕಲ್ಪಿಸಲಾಯಿತು.

ಗ್ರಾಮೀಣ ಅಭಿವೃದ್ಧಿಗಾಗಿ ಸಮುದಾಯ ಅಭಿವೃದ್ಧಿ ಯೋಜನೆಯನ್ನು ೧೯೫೨ರಲ್ಲಿ ಜಾರಿಗೆ ತರಲಾಯಿತು. ಆದರೆ ಈ ಯೋಜನೆಯು ಅಷ್ಟೊಂದು ಫಲಕಾರಿಯಾಗದೇ ವಿಫಲಗೊಂಡಿತು. ಇದರ ವೈಫಲ್ಯಕ್ಕೆ ಕಾರಣವಾಗಿ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳೆಯರು ಭಾಗವಹಿಸದೇ ಇರುವ ಅಂಶವೂ ಒಂದು ಎಂದು ಗುರುತಿಸಲಾಗಿತ್ತು. ದೇಶದ ಜನಸಂಖ್ಯೆಯಲ್ಲಿ ಅರ್ಧದಷ್ಟಿರುವ ಮಹಿಳೆಯರ ಜೀವನಮಟ್ಟ ಸುಧಾರಿಸದೆ, ಅವರನ್ನು ಅಭಿವೃದ್ಧಿ ಚಟುವಟಿಕೆಯಿಂದ ಹೊರಗಿಟ್ಟರೆ ರಾಷ್ಟ್ರದ ಪ್ರಗತಿ ಸಾಧ್ಯವಿಲ್ಲ. ಅಭಿವೃದ್ಧಿಯಲ್ಲಿ ಮಹಿಳೆಯರ ಭಾಗವಹಿಸುವಿಕೆಯ ಮಹತ್ವವನ್ನು ಹಲವಾರು ಅಧ್ಯಯನಗಳು ದೃಢಪಡಿಸಿದವು. ರಾಜಕೀಯವಾಗಿ ಮಹಿಳೆಯರನ್ನು ಸಶಕ್ತರನ್ನಾಗಿಸುವುದರ ಮೂಲಕ ಮತ್ತು ಅಭಿವೃದ್ಧಿ ಚಟುವಟಿಕೆಗಳಲ್ಲಿ ಅವರನ್ನು ತೊಡಗಿಸುವ ದೃಷ್ಟಿಯಿಂದ ಬಲವಂತರಾಯ್ ಮೆಹತಾ ಸಮಿತಿಯ ಶಿಫಾರಸ್ಸಿನ ಅನ್ವಯ ೧೯೮೩ರಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಶೇಕಡ ೨೫ರಷ್ಟು ಮೀಸಲಾತಿಯನ್ನು ಮೊಟ್ಟ ಮೊದಲನೆಯದಾಗಿ ಮಹಿಳೆಯರಿಗೆ ಕಲ್ಪಿಸಲಾಯಿತು. ಇದು ನಿಜಕ್ಕೂ ಒಂದು ಚಾರಿತ್ರಿಕ ಘಟನೆ ಮತ್ತು ಹೊಸ ಪ್ರಯೋಗವಾಗಿತ್ತು. ತದನಂತರ ಸಂವಿಧಾನಕ್ಕೆ ೭೩ನೇ ತಿದ್ದುಪಡಿ ತರುವುದರ ಮೂಲಕ ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಶೇ. ೩೩ರಷ್ಟು ಸ್ಥಾನಗಳನ್ನು ಮೀಸಲಿಡಲಾಯಿತು. ಈ ಸಂಸ್ಥೆಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಸ್ಥಾನಗಳಲ್ಲೂ ಸಹ ಶೇ. ೩೩ರಷ್ಟು ಸ್ಥಾನಗಳನ್ನು ಕಲ್ಪಿಸಲಾಯಿತು. ಈ ಮೀಸಲಾತಿ ಪ್ರಕ್ರಿಯೆಯಿಂದ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗ ಮತ್ತು ಇತರ ಎಲ್ಲಾ ಜಾತಿಯ ಮಹಿಳೆಯರು ಪಂಚಾಯತ್ ರಾಜ್ ಸಂಸ್ಥೆಯಲ್ಲಿ ಪ್ರತಿನಿಧಿಸಲ್ಪಟ್ಟಿದ್ದಾರೆ.

**ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಮಹಿಳೆಯರು**

ಕರ್ನಾಟಕದಲ್ಲಿ ಈಗ ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಮಹಿಳಾ ಮೀಸಲಾತಿ ೧೯೯೩ರಲ್ಲಿ ಜಾರಿಗೊಂಡು ಮೂರನೇ ಅವಧಿಯನ್ನು ಪ್ರವೇಶಿಸಿದೆ. ಕರ್ನಾಟಕ ಶೇ. ೨೫ರಷ್ಟು ಮೀಸಲಾತಿಯನ್ನು ೧೯೮೭ರಲ್ಲೇ ಜಾರಿಗೆ ತಂದ ಪ್ರಥಮ ರಾಜ್ಯವಾಗಿದೆ. ೧೯೯೯ರಲ್ಲಿ ನಡೆದ ಸ್ಥಳೀಯ ಸಂಸ್ಥೆಗಳ ಚುನಾವಣೆಗಳಲ್ಲಿ ಮಹಿಳೆಯರು ಮೀಸಲಾತಿಗೂ ಮೀರಿ ಆಯ್ಕೆಗೊಂಡಿದ್ದಾರೆ. ಮೀಸಲಾತಿ ಅಸ್ತಿತ್ವಕ್ಕೆ ಬಂದಾಗಿನಿಂದ ಅಡಿಗೆ ಮನೆಗೆ ಸೀಮಿತವಾಗಿದ್ದ ಮಹಿಳೆಯರು ಈ ಸಂಸ್ಥೆಗಳಲ್ಲಿ ಆಡಳಿತ ಸೂತ್ರವನ್ನು ಹಿಡಿಯುವಂತಾಯಿತು. ಇದರಿಂದ ಸಮಾಜದಲ್ಲಿ ಮಹಿಳೆಯರ ಸ್ಥಾನಮಾನ ಮತ್ತು ಪ್ರತಿಷ್ಠೆ ಹೆಚ್ಚಾಗಿದೆ ಎಂಬುದನ್ನು ಹಲವಾರು ಅಧ್ಯಯನಗಳು ಸ್ಪಷ್ಟಪಡಿಸಿವೆ. ಕಳೆದ ಹತ್ತು ವರ್ಷದಲ್ಲಿ ಮಹಿಳೆಯರ ಪ್ರತಿನಿಧೀಕರಣ ಚುನಾವಣೆಯಿಂದ ಚುನಾವಣೆಗೆ ಹೆಚ್ಚುತ್ತಿದೆ. ಪ್ರಸ್ತುತ ಲೇಖನದಲ್ಲಿ ತಳಮಟ್ಟದ ವಿಕೇಂದ್ರೀಕೃತ ಆಡಳಿತ ರಚನೆಯಾದ ಗ್ರಾಮ ಪಂಚಾಯತಿಗಳಲ್ಲಿ ಮಹಿಳೆಯರ ಭಾಗವಹಿಸುವಿಕೆ, ನೀತಿ ನಿರ್ಣಯ ಕೈಗೊಳ್ಳುವಲ್ಲಿ ಪಾತ್ರ ಮತ್ತು ಯೋಜನೆಯನ್ನು ರೂಪಿಸುವಲ್ಲಿ ಇವರ ಸಹಭಾಗಿತ್ವಕ್ಕೆ ಹೆಚ್ಚು ಗಮನ ಹರಿಸಲಾಗಿದೆ. ವಿಕೇಂದ್ರೀಕೃತ ಪ್ರಜಾಪ್ರಭುತ್ವದಲ್ಲಿ ಮೊದಲು ತಳಮಟ್ಟದಲ್ಲಿ ಅಭಿವೃದ್ಧಿಯನ್ನು ಸಾಧಿಸಬೇಕಾಗಿದೆ. ಗ್ರಾಮ ಪಂಚಾಯತಿಗಳಲ್ಲಿ ಮಹಿಳೆಯರ ಪ್ರತಿನಿಧೀಕರಣದಿಂದ ಅನೇಕ ಬದಲಾವಣೆಗಳು ಸುಧಾರಣೆಗಳಾಗಿವೆ ಎಂಬುದನ್ನು ಹಲವಾರು ಅಧ್ಯಯನಗಳು ಗುರುತಿಸಿವೆ. ವೈಯಕ್ತಿಕ ನೆಲೆಯಲ್ಲಿ ಚುನಾಯಿತ ಮಹಿಳೆಯರು ತಮ್ಮ ಆತ್ಮಸ್ಥೈರ್ಯವನ್ನು ಹೆಚ್ಚಿಸಿಕೊಂಡಿದ್ದಾರೆ. ಕುಟುಂಬದಿಂದ ಹೊರಬಂದು ಕೆಳವರ್ಗದ ಮಹಿಳೆಯರು ಸಮಾಜದ ಎಲ್ಲಾ ವರ್ಗಗಳ ಮಹಿಳೆಯರ ಸಂಬಂಧದೊಂದಿಗೆ ತಮ್ಮ ತಿಳುವಳಿಕೆಯ ಮಟ್ಟವನ್ನು ಸುಧಾರಿಸಿಕೊಂಡಿದ್ದಾರೆ. ತಾವು ಪಡೆದ ಅಧಿಕಾರದಿಂದ ಸ್ಥಳೀಯ ಆಡಳಿತದ ಬಗ್ಗೆ ಜಾಗೃತರಾಗಿದ್ದಾರೆ. ಗ್ರಾಮಪಂಚಾಯತ್ ತಿಂಗಳ ಸಭೆಯಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ಸಭೆಗೆ ಹೆಚ್ಚು ಮಹತ್ವ ತಂದುಕೊಟ್ಟಿದೆ. ಸಭೆಗಳಲ್ಲಿ ಮೊದಲಿದ್ದ ಅಶ್ಲೀಲ ಪದಗಳ ಬಳಕೆ ಕಡಿಮೆಯಾಗಿದೆ. ಗ್ರಾಮಗಳ ಅಭಿವೃದ್ಧಿಕಾರ್ಯಗಳ ಆದ್ಯತಾ ಪಟ್ಟಿಯಲ್ಲಿ ಗಮನಾರ್ಹ ಬದಲಾವಣೆಯಾಗಿದೆ. ಆಡಳಿತಾತ್ಮಕ ಚುರುಕು ಹೆಚ್ಚಿದೆ ಹಾಗೂ ಪಂಚಾಯತ್ ಕಛೇರಿಗಳ ಕಾರ್ಯವೈಖರಿ ಬದಲಾಗಿದೆ ಎನ್ನುತ್ತಾರೆ ಒರಿಸ್ಸಾದ ಸ್ನೇಹಲತಾ ಪಾಂಡ ಅವರು. ತಮ್ಮ ಗ್ರಾಮದ ಅಭಿವೃದ್ಧಿಗೆ ಏನೇನು ಕೆಲಸಗಳು ಆಗಬೇಕು ಎಂಬ ಯೋಜನೆಯ ಪಟ್ಟಿಯಲ್ಲಿ ಮಹಿಳಾ ಸದಸ್ಯರ ಬೇಡಿಕೆಗಳಿಗೂ ಪುರುಷ ಸದಸ್ಯರ ಆದ್ಯತೆಗಳಿಗೂ ಸಾಕಷ್ಟು ಅಂತರವಿದೆ. ಮಹಿಳೆಯರ ಬೇಡಿಕೆ ಕುಡಿಯುವ ನೀರು, ಮಕ್ಕಳಿಗೆ ಶಾಲೆ, ಶೌಚಾಲಯ, ಆರೋಗ್ಯ ಕೇಂದ್ರ ಮತ್ತು ಕುಟುಂಬ ಯೋಜನೆಗಳು ಇವು ಆಗಿವೆ. ಅಭಿವೃದ್ಧಿಯಲ್ಲಿ ಈ ಬೇಡಿಕೆಗಳು ಆದ್ಯತಾ ಪಟ್ಟಿಯಲ್ಲಿವೆ. ಆದರೆ ಮಹಿಳೆಯರು ತಮ್ಮ ಕೆಲಸ ನಿರ್ವಹಿಸುವಾಗ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಗ್ರಾಮಗಳಲ್ಲಿರುವ ಜಾತೀಯತೆ, ರಾಜಕೀಯ ಹಣಬಲ, ತೋಳುಬಲಗಳು ಹೆಚ್ಚು ಪ್ರತಿಷ್ಠೆಯನ್ನು ಹೊಂದಿದ್ದು ಇಂತಹ

ಸ್ಥಿತಿಯಲ್ಲಿ ಮಹಿಳೆಯರು ಸ್ವತಂತ್ರ ನಿರ್ಧಾರಗಳನ್ನು ತೆಗೆದುಕೊಳ್ಳುವುದು ಕಷ್ಟಕರವಾಗಿದೆ. ಈ ಮಹಿಳೆಯರು ಆರ್ಥಿಕವಾಗಿ, ಶೈಕ್ಷಣಿಕವಾಗಿ ಮತ್ತು ರಾಜಕೀಯವಾಗಿ ದುರ್ಬಲರಾಗಿದ್ದಾರೆ. ಇದರಿಂದ ಸ್ವತಃ ನಿರ್ಧಾರಗಳನ್ನು ತೆಗೆದುಕೊಳ್ಳುವಲ್ಲಿ ಅಸಮರ್ಥರಾಗಿದ್ದಾರೆ ಎಂದು ಅಧ್ಯಯನಗಳು ಗುರುತಿಸಿವೆ. ಪಂಚಾಯತ್ ಸಮಸ್ಯೆಗಳಲ್ಲಿ ಮಹಿಳೆಯರ ಪಾತ್ರ ನಿರೀಕ್ಷಿತ ಮಟ್ಟದಲ್ಲಿ ಇಲ್ಲ ಎನ್ನುವುದನ್ನು ಒಪ್ಪಿಕೊಳ್ಳಬೇಕಾಗಿದೆ. ಇದಕ್ಕೆ ಕಾರಣಗಳು ಹಲವು. ಮಹಿಳೆಯರ ಆರ್ಥಿಕ ಪರಾವಲಂಬನೆ, ಆಯ್ಕೆಯಾದ ಮಹಿಳೆಯರಿಗೆ ಶಿಕ್ಷಣ, ಆಡಳಿತದಲ್ಲಿ ತರಬೇತಿ ಮತ್ತು ಮಾರ್ಗದರ್ಶನದ ಕೊರತೆ ಹಾಗೂ ಅಧಿಕಾರವನ್ನು ಹಂಚಿಕೊಳ್ಳಲು ನಿರಾಕರಿಸುವ ಪುರುಷ ಪ್ರಧಾನ ಮೌಲ್ಯಗಳು ಹಾಗೂ ಆಡಳಿತ ವ್ಯವಸ್ಥೆಯಲ್ಲಿನ ದೋಷ ಎನ್ನಬಹುದು.

ಮಹಿಳೆಯರ ರಾಜಕೀಯ ಹಕ್ಕುಗಳನ್ನು ಅವಕಾಶಗಳನ್ನು ಅವರ ಆರ್ಥಿಕ ಹಕ್ಕುಗಳಿಂದ ಪ್ರತ್ಯೇಕಿಸಿ ನೋಡಲು ಸಾಧ್ಯವೇ ಇಲ್ಲ ಎನ್ನುತ್ತಾರೆ, ಅಖಿಲ ಭಾರತ ಜನವಾದಿ ಮಹಿಳಾ ಸಂಘಟನೆಯ ಪ್ರಧಾನ ಕಾರ್ಯದರ್ಶಿ ಬೃಂದಾ ಕಾರಟ್. ಕೇರಳ ಮತ್ತು ಪಶ್ಚಿಮ ಬಂಗಾಳ ಮಹಿಳಾ ಪಂಚಾಯತ್ ಸದಸ್ಯರ ಸಾಧನೆಗಳನ್ನು ಮತ್ತು ಅವರ ಆರ್ಥಿಕ ಸ್ಥಿತಿಗತಿಗಳನ್ನು ಅಭ್ಯಸಿಸಿರುವ ಅವರ ಪ್ರಕಾರ ಆಸ್ತಿಯ ಹಕ್ಕು ಇರುವಂತಹ ಮಹಿಳೆಯರು ಹಾಗೂ ಭೂ ಒಡೆತನದಲ್ಲಿ ಸಮಾನ ಪಾಲುದಾರರಾಗಿರುವ ಮಹಿಳೆಯರು ಹಾಗೂ ಆರ್ಥಿಕವಾಗಿ ಪರಾವಲಂಬಿಯಾಗದೇ ಇರುವ ಮಹಿಳೆಯರು ಪಂಚಾಯತ್ ಸಂಸ್ಥೆಗಳಲ್ಲಿ ಹೆಚ್ಚು ಯಶಸ್ವಿಯಾಗಿದ್ದಾರೆ. ಆರ್ಥಿಕ ಪರಾವಲಂಬನೆಯು ಬೌದ್ಧಿಕ ಪರಾವಲಂಬನೆ ಮತ್ತು ಮಹಿಳೆಯರ ಚಲನ ಸಾಮರ್ಥ್ಯವನ್ನು




ನಿಯಂತ್ರಿಸುತ್ತದೆ. ಅರಿವಿನ ಅವಕಾಶಗಳನ್ನು ಕಸಿದುಕೊಳ್ಳುತ್ತದೆ. ಮಹಿಳೆಯರ ಸಹಭಾಗಿತ್ವದ ಸಫಲತೆಯಲ್ಲಿ ಆರ್ಥಿಕ ಅಂಶವು ಪ್ರಧಾನ ಪಾತ್ರವಹಿಸುತ್ತದೆ ಎಂಬುದನ್ನು ಅಧ್ಯಯನಗಳು ಗುರುತಿಸಿವೆ.

ಕೇರಳದ ಜನರೂಪಿತ ಯೋಜನೆಯ ಪ್ರಯೋಗದಲ್ಲಿ ಮಹಿಳೆಯರ ಸಹಭಾಗಿತ್ವ ದೇಶಾದ್ಯಂತ ಹೆಚ್ಚು ಕೇಳಿ ಬರುತ್ತಿದೆ. ಅಲ್ಲಿರುವ ವಿಕೇಂದ್ರೀಕೃತ ಯೋಜನೆ ವಿಶ್ವದಲ್ಲೇ ದೊಡ್ಡದೆಂದು ಗುರುತಿಸಿದ್ದಾರೆ. ದೇಶದಲ್ಲಿಯೇ ಅತಿ ಹೆಚ್ಚು ಸಾಕ್ಷರತಾ ಶೇಕಡಾ ೯೧ರಷ್ಟು ಇರುವ ಕೇರಳದಲ್ಲಿ ಮಹಿಳಾ ಸಾಕ್ಷರತೆಯು ಸಹ ಹೆಚ್ಚಾಗಿದೆ. ಇಷ್ಟೊಂದು ಸಾಕ್ಷರತೆಯನ್ನು ಹೊಂದಿದ ಕೇರಳದ ಮಹಿಳಾ ಸದಸ್ಯರ ಬಗ್ಗೆ ತಿಳಿದುಕೊಳ್ಳಬೇಕಾದ ಅಗತ್ಯ ಬಹಳ ಇದೆ. ▪ ರಾಜ್ಯದಲ್ಲಿ ಒಟ್ಟು ೧೪,೧೭೩ ಪಂಚಾಯತ್ ಸದಸ್ಯರಲ್ಲಿ ೫೦೭೮ (೩೬%) ಮಹಿಳೆಯರು ಚುನಾಯಿತರಾಗಿದ್ದಾರೆ. ಇದರಲ್ಲಿ ಶೇ. ೧೦ರಷ್ಟು ಚುನಾಯಿತ ಸದಸ್ಯರಾಗಿ ಅನುಭವ ಹೊಂದಿದ್ದು ಪುನರಾಯ್ಕೆ ಆದವರು. ಉಳಿದ ಸದಸ್ಯರಿಗೆ ಹೋಲಿಸಿದರೆ ಮಹಿಳಾ ಸದಸ್ಯರೇ ಹೆಚ್ಚು ವಿದ್ಯಾಭ್ಯಾಸ ಪಡೆದವರಾಗಿದ್ದಾರೆ. ಇದರಲ್ಲಿ ಶೇ. ೫೦ರಷ್ಟು ಮಹಿಳೆಯರು ಸಾಮಾಜಿಕ ಸಂಘಟನೆಗಳಲ್ಲಿ ಮೊದಲೇ ಕೆಲಸ ಮಾಡಿದವರು. ಈ ಅಂಶಗಳನ್ನು ನಮ್ಮ ರಾಜ್ಯಕ್ಕೆ ಹೋಲಿಸಲು ಸಾಧ್ಯವೇ ಇಲ್ಲ. ಪ್ರತಿಯೊಂದು ವಿಕೇಂದ್ರೀಕೃತ ಯೋಜನೆಯ ಪ್ರಕ್ರಿಯೆಯಲ್ಲೂ ಚುನಾಯಿತ ಮಹಿಳೆಯರ ಸಹಭಾಗಿತ್ವ ರೂಪಿಸುವಲ್ಲಿ ಕೇರಳ ಮಾದರಿಯಾಗಿದೆ. ಕೇರಳದ ಪ್ರತಿಯೊಬ್ಬ ಮಹಿಳಾ ಪ್ರತಿನಿಧಿಯೂ ತನ್ನ ಚುನಾಯಿತ ಅವಧಿಯಲ್ಲಿ ವಾರ್ಷಿಕ ಯೋಜನೆಗಳನ್ನು ರೂಪಿಸುವಲ್ಲಿ ಸಫಲಳಾಗಿದ್ದಾಳೆ. ನೀತಿ ನಿರ್ಣಯ ಕೈಗೊಳ್ಳುವಲ್ಲಿ ಯಶಸ್ಸನ್ನು ಪಡೆದಿದ್ದಾರೆ. ಮಹಿಳಾ ಸಾಕ್ಷರತೆಯು ಈ ಎಲ್ಲಾ ಪ್ರಕ್ರಿಯೆಗಳಿಗೆ ಕಾರಣವೆಂಬುದು ಮಹತ್ವದ ಅಂಶವಾಗಿದೆ.

ವಾಸ್ತವದಲ್ಲಿ, ಒಟ್ಟು ಸಾಂಸ್ಕೃತಿಕ ಪರಿಸರ ಬದಲಾವಣೆ ಹೊಂದದೇ ಅಭಿವೃದ್ಧಿ ಆಗದು. ಇಂದು ಮಹಿಳೆಯರ ಪ್ರತಿನಿಧೀಕರಣದಿಂದ ಅನೇಕ ಬದಲಾವಣೆಗಳಾಗಿವೆ. ನಿಧಾನಗತಿಯೇ ಆದರೂ ತಳಮಟ್ಟದ ಅಧಿಕಾರ ವಿತರಣೆಯಲ್ಲಿ ಇಂದು ಪ್ರಮುಖ ಪರಿವರ್ತನೆಗಳಾಗಿವೆ. ಇದರ ಜೊತೆಗೆ ಮಹಿಳೆಯರನ್ನು ಸಶಕ್ತೀಕರಣಗೊಳಿಸುವ ಪ್ರಕ್ರಿಯೆ ಬೇಗ ಆಗಬೇಕಾಗಿದೆ. ಅದಕ್ಕಾಗಿ ಈ ಕೆಳಗಿನ ಅಂಶಗಳು ಅತ್ಯಗತ್ಯ.

೧. ಸಂಪೂರ್ಣ ಮಹಿಳಾ ಸಾಕ್ಷರತೆಯನ್ನು ತುರ್ತಾಗಿ ಸಾಧಿಸಬೇಕು.
೨. ಮಹಿಳೆಯರನ್ನು ಆರ್ಥಿಕವಾಗಿ ಸಬಲೀಕರಣಗೊಳಿಸಬೇಕು.
೩. ಉತ್ತಮ ತರಬೇತಿ ಮತ್ತು ಮಾರ್ಗದರ್ಶನ ನಿರಂತರ ಆಗಬೇಕು.
೪. ಗ್ರಾಮ ಸಭೆಗಳಲ್ಲಿ ಭಾಗವಹಿಸಲು ಸರಿಯಾದ ನೀತಿ ಸಂಹಿತೆಗಳನ್ನು ಮಹಿಳೆಯರಿಗಾಗಿಯೇ ರೂಪಿಸಬೇಕು.
೫. ಸ್ವಯಂ ಸೇವಾ ಸಂಘಗಳಲ್ಲಿ ಮಹಿಳೆಯರನ್ನು ತೊಡಗಿಸಿಕೊಳ್ಳಬೇಕು.
೬. ಸರ್ಕಾರ ರೂಪಿಸಿರುವ ಮಹಿಳಾ ಯೋಜನೆಗಳಾದ ಸ್ತ್ರೀಶಕ್ತಿ ಮತ್ತು ಸ್ವಶಕ್ತಿ ಯೋಜನೆಗಳಿಂದ ಆರ್ಥಿಕ ಸ್ವಾವಲಂಬನೆ ಸಾಧಿಸಬೇಕಾಗಿದೆ.
೭. ಮಹಿಳೆಯರ ಸ್ವಸಹಾಯ ಗುಂಪುಗಳಿಗೆ ಹೆಚ್ಚು ಉತ್ತೇಜನ ನೀಡಬೇಕು.

ಒಟ್ಟಿನಲ್ಲಿ ಮಹಿಳಾಪರ ಕಾರ್ಯಕ್ರಮಗಳನ್ನು ಹೆಚ್ಚು ಜಾರಿಗೊಳಿಸುವುದು ಮಹಿಳಾ ಮೀಸಲಾತಿಯ ಉದ್ದೇಶ ಸಫಲವಾಗುವುದಕ್ಕೆ ಅತ್ಯಗತ್ಯವಾಗಿದೆ.

ಎಂ. ಯರಿಸ್ವಾಮಿ
ಸಂಶೋಧಕರು, ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ - ೫೮೩ ೨೭೬

## ಆಮಿಷ



ಕೀಲಿ ಕೊಟ್ಟೊಡನೆ ಚಾಲು ಆಗುವ ಮಾಟದ
ಆಟದ ಗೊಂಬಿಯಾಗುವದಕ್ಕೆ ಏನು ಹೇಳು
ನಿನ್ನ ರೇಟು ? ಮೊದಲೆ ತುಂಬಿರುವ ಟೇಪಿನೊಲು
ಮಾತಾಡಲು ಹೇಳು ನಿನಗಿಹುದು ಎಂಥ ನಾದ ?

ಇವರ ಪಾಳಯದಲ್ಲಿ ನೋಡು ಎಲ್ಲ ಸುಖಗಳು
ಉಂಟು : ಕುಡಿದು ತಿಂದು ಮಾಡಬೇಕಾದ ಮೋಜು
ಇಲ್ಲಿಹುದು ಸ್ವರ್ಗಸುಖದ ಭಾರೀ ಜಹಜು
ಮನಸೊತ್ತ ಮೆರೆದಾಡು ಮರೆತು ನಿನ್ನೆಲ್ಲ ಗೋಳು.

ಒಮ್ಮೆ ನೀನು ಒಳಹೊಕ್ಕ ಮೇಲೆ ಮುಚ್ಚುವುದು
ಏಳುಸುತ್ತಿನ ಸುಭದ್ರವಾದ ಕೋಟೆಯ ಗೇಟು
ತೊಳೆಯಲಾಗುವದು ನಿನ್ನ ತಲೆಯೊಳಗಿನ ಸ್ಲೇಟು
ಅನಿವಾರ್ಯ ನೀನಿವರ ಧೋರಣೆಯ ಮೆಚ್ಚುವದು

ಇಲ್ಲಿನ ನಿರ್ಧಾರಗಳಿಗೆ ಬೀಳಬೇಕು ಜೋತು
ನೀನು ಈ ಕೋಟೆಯೊಳಗೆ ಹೋಗಬೇಕು ಹೂತು.

ಶಂಕರ ತಲ್ಲೂರ
೧೭೨, ಹಿಂದವಾಡಿ, ಬೆಳಗಾವಿ

# ಗ್ರಾಮೀಣ ಮಹಿಳೆಯ ಕಣ್ಣೀರಿನ ಕಥೆ

ಬ್ರಿಟಿಷರನ್ನು ಈ ದೇಶದಿಂದ ತೊಲಗಿಸುವುದಷ್ಟೇ ಸ್ವಾತಂತ್ರ್ಯ ಹೋರಾಟದ ಗುರಿಯಾಗಿರಲಿಲ್ಲ. ಹಸಿದವರಿಲ್ಲದ, ಅಸಮಾನತೆಯಿಲ್ಲದ ರಾಷ್ಟ್ರ ನಿರ್ಮಾಣ ಹೋರಾಡಿದವರೆಲ್ಲರ ಕನಸಾಗಿತ್ತು. ಮಹಾತ್ಮಾ ಗಾಂಧಿ ಅವರಿಂದ ಭಗತ್ ಸಿಂಗ್‌ವರೆಗೆ ಎಲ್ಲರ ದಾರಿ ಬೇರೆಯಾಗಿದ್ದರೂ ಆಶಯ ಇದೇ ಆಗಿತ್ತು. ಸೋವಿಯತ್ ರಷ್ಯದ ಸಮಾಜವಾದಿ ವ್ಯವಸ್ಥೆಯಿಂದ ಪ್ರಭಾವಿತರಾಗಿದ್ದ ಮೊದಲ ಪ್ರಧಾನಿ ಪಂಡಿತ ಜವಾಹರಲಾಲ್ ನೆಹರೂ ಅವರು ಇದೇ ಉದ್ದೇಶದಿಂದ ಸಾರ್ವಜನಿಕ ಉದ್ಯಮ ರಂಗಕ್ಕೆ, ಸಾರ್ವಜನಿಕ ವಿತರಣೆ ವ್ಯವಸ್ಥೆ(ಪಡಿತರ ಪದ್ಧತಿ)ಗೆ, ಚಾಲನೆ ನೀಡಿದರು.

ಆದರೆ ಸ್ವಾತಂತ್ರ್ಯದ ಐದು ದಶಕಗಳ ನಂತರ ಎಂಥ ಭಾರತ ನಿರ್ಮಾಣವಾಗಿದೆ ಎಂದು ಹೊರಳಿ ನಿಂತು ಯೋಚಿಸಿದರೆ ನಿರಾಸೆಯ ನಿಟ್ಟುಸಿರು ಹೊರಬರುತ್ತದೆ. ಸಮಾನತೆಯ ಸಮಾಜದ ಕನಸು ಒತ್ತಟ್ಟಿಗಿರಲಿ, ಈ ದೇಶದ ಪ್ರಜೆಗಳು ಈಗಿಲ್ಲಿ ನೆಮ್ಮದಿಯಾಗಿದ್ದಾರೆಯೇ ? ಒಟ್ಟು ಜನಸಂಖ್ಯೆಯ ಅರ್ಧದಷ್ಟಿರುವ ಮಹಿಳೆಯರ ಸ್ಥಿತಿ ಏನಾಗಿದೆ ? ನಾಳಿನ ನಾಗರಿಕರೆಂದು ಹೆಮ್ಮೆಯಿಂದ ಹೇಳಿಕೊಳ್ಳುವ ಮಕ್ಕಳಿಗಾಗಿ ಎಂಥ ದೇಶವನ್ನು ನಾವು ನಿರ್ಮಿಸುತ್ತಿದ್ದೇವೆ ? ಇವೆಲ್ಲವನ್ನೂ ಯೋಚಿಸಿದಾಗ ಆತಂಕದ ಕತ್ತಲು ಕವಿಯುತ್ತದೆ.

ಈ ದೇಶದ ಬದುಕು ಬವಣೆಗಳ ಹೊಣೆ ಹೊರಬೇಕಾದ ಸರ್ಕಾರಗಳು ಕೈಚೆಲ್ಲಿ ಕುಳಿತಿವೆ. ನೆಹರೂ ಕಾಲದಲ್ಲಿ ಬಡವರಿಗಾಗಿ ಅಸ್ತಿತ್ವಕ್ಕೆ ಬಂದ ಪಡಿತರ ವ್ಯವಸ್ಥೆ ಈಗ ಹಾಳಾಗಿ ಹೋಗಿದೆ. ವಿಶ್ವಬ್ಯಾಂಕ್ ಹಾಗೂ ಅಂತಾರಾಷ್ಟ್ರೀಯ ಹಣಕಾಸು ಸಂಸ್ಥೆಗಳ ಕಣ್ಸನ್ನೆಯಂತೆ ನಡೆಯುವ ಸರ್ಕಾರ ಅವರನ್ನು ಪ್ರೀತ್ಯರ್ಥಗೊಳಿಸಲು ಬಡವರ ಹೊಟ್ಟೆಗೆ ಹೊಡೆಯಲು ಹಿಂಜರಿಯುತ್ತಿಲ್ಲ. ಈ ಸರ್ಕಾರಕ್ಕೆ ನಿರ್ದಿಷ್ಟವಾದ ಒಂದು ಆಹಾರ ನೀತಿ ಎಂಬುದೇ ಇಲ್ಲವಾಗಿದೆ.

ಬಿಜೆಪಿ ನೇತೃತ್ವದ ಎನ್‌ಡಿಎ ಸರ್ಕಾರದ ವಿನಾಶಕಾರಿ ಆರ್ಥಿಕ ನೀತಿಯ ನೇರ ದುಷ್ಪರಿಣಾಮ ಈ ದೇಶದ ಮಹಿಳಾ ಸಮುದಾಯದ ಮೇಲೆ ಆಗುತ್ತಿದೆ. ಸಂವಿಧಾನದಲ್ಲಿ ಪ್ರಜೆಗ್ರಳಿಗೆ ನೂರೆಂಟು ಹಕ್ಕುಗಳನ್ನು ನೀಡಲಾಗಿದ್ದರೂ ಆಹಾರದ ಹಕ್ಕು ಹಾಗೂ ಉದ್ಯೋಗದ ಹಕ್ಕನ್ನು ಮೂಲಭೂತ ಹಕ್ಕೆಂದು ಪರಿಗಣಿಸಿಲ್ಲ. ವಿಶ್ವಬ್ಯಾಂಕ್ ನಿರ್ದೇಶಿತ ಆರ್ಥಿಕ ನೀತಿಯ ನೇರ ದುಷ್ಪರಿಣಾಮ ಮಹಿಳೆಯರ ಮೇಲೆ ಆಗುತ್ತಿದ್ದು, ಇದನ್ನು ಪ್ರತಿಭಟಿಸಿ ದೇಶದ ನಾನಾ ಮೂಲೆಗಳಿಂದ ಬಂದಿದ್ದ ಸಾವಿರಾರು ಮಹಿಳೆಯರು ರಾಜಧಾನಿ ದಿಲ್ಲಿಯಲ್ಲಿ ಇತ್ತೀಚೆಗೆ ಪ್ರತಿಭಟನೆ ನಡೆಸಿದರು.

ಸ್ವಾತಂತ್ರ್ಯದ ಐವತ್ತಾರು ವರ್ಷಗಳ ನಂತರವೂ ಎರಡು ಹೊತ್ತಿನ ಕೂಳಿಗಾಗಿ ಮಹಿಳೆ ತನ್ನ ಆತ್ಮ ಗೌರವವನ್ನೇ ಒತ್ತೆ ಇಡಬೇಕಾದ ಪರಿಸ್ಥಿತಿ ಉಂಟಾಗಿದೆ. ಮುಖ್ಯವಾಗಿ ಗ್ರಾಮೀಣ ಪ್ರದೇಶದ ಮಹಿಳೆಯರು ಅನುಭವಿಸುತ್ತಿರುವ ಯಾತನೆ ಅಸಹನೀಯವಾದುದು. ೧೯೮೦ರ ಶ್ರಮಶಕ್ತಿ ವರದಿಯ ಪ್ರಕಾರ ಗ್ರಾಮೀಣ ಭಾರತದಲ್ಲಿ ಶೇ. ೩೫ರಷ್ಟು ಮನೆಗಳ ಉಸ್ತುವಾರಿ ಮಹಿಳೆಯರದೇ ಆಗಿದೆ. ಮಕ್ಕಳ ಊಟ, ಶಾಲೆ, ಇಡೀ ಕುಟುಂಬಕ್ಕೆ ಬೇಕಾಗುವ ಆಹಾರ ಸಾಮಗ್ರಿ ಹೀಗೆ ಎಲ್ಲವನ್ನೂ ಹೆಣ್ಣುಮಕ್ಕಳೇ ನಿಭಾಯಿಸಬೇಕಾಗುತ್ತದೆ.

ಇತ್ತೀಚಿನ ವರ್ಷಗಳಲ್ಲಿ ಬೆಂಬಿಡದೆ ಕಾಡುತ್ತಿರುವ ಬರಗಾಲದಿಂದಾಗಿ ಗ್ರಾಮೀಣ ಬಡವರ ಪರಿಸ್ಥಿತಿ ಇನ್ನಷ್ಟು ಹದಗೆಟ್ಟಿದೆ. ಕೃಷಿರಂಗದಲ್ಲಿ ರಾಶಿ ಮಾಡಲು, ಬೀಜ ಬಿತ್ತಲು ಹೀಗೆ ಎಲ್ಲ ಯಂತ್ರಗಳೂ ಬಂದಿರುವುದರಿಂದ ಯಾಂತ್ರೀಕರಣದ ಪರಿಣಾಮವಾಗಿ ಇದೇ ಕೆಲಸ ಮಾಡುತ್ತಿದ್ದ ಮಹಿಳೆಯರು ಬೀದಿಪಾಲಾಗಿದ್ದಾರೆ. ಇತ್ತೀಚಿನ ಆರ್ಥಿಕ ಸಮೀಕ್ಷೆಯೊಂದರ ಪ್ರಕಾರ ಹಳ್ಳಿಗಾಡಿನಲ್ಲಿ ನಿರುದ್ಯೋಗ ಪ್ರಮಾಣ ಶೇ. ೭ರಷ್ಟು ಹೆಚ್ಚಾಗಿದೆ. ಹೀಗಾಗಿ ಹಳ್ಳಿಗಳಲ್ಲಿ ಉದ್ಯೋಗವಿಲ್ಲದೆ ಮಹಿಳೆಯರು ತಮ್ಮ ಕುಟುಂಬಗಳನ್ನು ಕಟ್ಟಿಕೊಂಡು ಪಕ್ಕದ ನಗರಗಳಿಗೆ ವಲಸೆ ಬರುತ್ತಿದ್ದಾರೆ.

ಈ ಕಡಿಮೆ ಕೂಲಿ, ವಿಪರೀತ ದುಡಿಮೆಯಿಂದಾಗಿ ಮಹಿಳೆಯರ ಆರೋಗ್ಯದ ಮೇಲೆ ತೀವ್ರ ಸ್ವರೂಪದ ದುಷ್ಪರಿಣಾಮ ಉಂಟಾಗುತ್ತಿದೆ. ಹೀಗಾಗಿ ದುಡಿಯುವ, ಓಡಾಡುವ, ಮಾತಾಡುವ, ಚೈತನ್ಯವೇ ಕುಗ್ಗಿ ಹೋಗುತ್ತಿದೆ. ಆದರೂ ಬದುಕಿಗಾಗಿ ಈ ಬಿಡಿಗಾಸನ್ನೇ ಪಡೆದು ಜೀವನ ಸಾಗಿಸಬೇಕಾಗಿದೆ. ಇಡೀ ಕುಟುಂಬದ ನಿರ್ವಹಣೆಗಾಗಿ ಪುರುಷರು ಕೂಡ ಮಾಡಲಾಗದಂಥ ಕಠಿಣ ಕೆಲಸಗಳನ್ನು ಮಹಿಳೆ ಮಾಡಬೇಕಾಗಿ ಬಂದಿದೆ. ಹೀಗಾಗಿ ಹಳ್ಳಿಗಾಡಿನ ಮಹಿಳೆಯ ಬದುಕು ಹರಿದು ಚಿಂದಿಚಿಂದಿಯಾಗಿದೆ. ಮಗುವಿಗೆ ಹಾಲು ಕುಡಿಸುವ ಸಾಮರ್ಥ್ಯವನ್ನು ಕೂಡ ಆಕೆ ಕಳೆದುಕೊಂಡಿದ್ದಾಳೆ.

ಈ ಅಗ್ಗದ ದುಡಿಮೆ, ಕಡಿಮೆ ಕೂಲಿಯ ಜೊತೆಗೆ ಕಂಟ್ರಾಕ್ಟರ್‌ಗಳ, ಮೇಸ್ತ್ರಿಗಳ ಲೈಂಗಿಕ ಕಿರುಕುಳಕ್ಕೂ ಬಡ ಮಹಿಳೆ ಬಲಿಯಾಗಬೇಕಾಗಿಬಂದಿದೆ. ಪಡಿತರದ ಸಬ್ಸಿಡಿ ಕಡಿತದಿಂದಾಗಿ, ಕಡಿಮೆ ಕೂಲಿಯಿಂದಾಗಿ, ಎರಡು ಹೊತ್ತಿನ ಕೂಳಿಗೆ ಪರದಾಡಬೇಕಾದ ಮಹಿಳೆ ತನ್ನ ಮಕ್ಕಳನ್ನು ಶಾಲೆಗೆ ಕಳಿಸುವುದು ಸಾಧ್ಯವಿಲ್ಲದಂತಾಗಿದೆ. ಕರ್ನಾಟಕದ ಕಲ್ಬುರ್ಗಿ, ರಾಯಚೂರು, ಕೋಲಾರ ಜಿಲ್ಲೆಗಳ ಬಡ ಮಹಿಳೆಯರು, ಹೊಟ್ಟೆಪಾಡಿಗಾಗಿ ದೂರದ ಮುಂಬಯಿ, ಬೆಂಗಳೂರಿಗೆ ದುಡಿಯಲು ವಲಸೆ ಹೋಗಬೇಕಾಗಿ ಬಂದಿದೆ.

ಗ್ರಾಮೀಣ ಪ್ರದೇಶದಲ್ಲಿ ದುಡಿಯುವ ಕೃಷಿಕಾರ್ಮಿಕ ಮಹಿಳೆಗೆ ದಿನಕ್ಕೆ ರೂ. ೧೫ ದೊರೆತರೆ ಅದೇ ಭಾಗ್ಯ. ನಗರ ಪ್ರದೇಶದ ಕಟ್ಟಡ ನಿರ್ಮಾಣ ಕಾಮಗಾರಿಗಳಲ್ಲಿ ದುಡಿಯುವ ಮಹಿಳೆಯ ಕೂಲಿಯೂ ೪೦ ರೂಪಾಯಿಗಿಂತ ಜಾಸ್ತಿಯಿಲ್ಲ. ಹೀಗಾಗಿ ಹೊಟ್ಟೆಗೆ ಸಾಲದ ಅನೇಕ ಮಹಿಳೆಯರು ಮೈಮಾರಿಕೊಂಡು ಜೀವಿಸುವ ಸ್ಥಿತಿ ನಿರ್ಮಾಣವಾಗಿದೆ.

ಸಾರ್ವಜನಿಕ ವಿತರಣೆ ವ್ಯವಸ್ಥೆ ಎಂಬುದು ನಮ್ಮಲ್ಲಿ ಹೆಸರಿಗೆ ಮಾತ್ರವಿದೆ. ಅದನ್ನೂ ಹಂತ ಹಂತವಾಗಿ ನಿರ್ನಾಮ ಮಾಡುವ ಹುನ್ನಾರ ಅವ್ಯಾಹತವಾಗಿ ನಡೆದಿದೆ. ಪಡಿತರ ಅಂಗಡಿಗಳು ತಿಂಗಳಲ್ಲಿ ಐದಾರು ದಿನಗಳು ಮಾತ್ರ ತೆರೆದಿರುತ್ತವೆ. ಇಲ್ಲಿ ಸಿಗುವ ಆಹಾರ ಧಾನ್ಯದಿಂದ ಇಡೀ ತಿಂಗಳ ಕಾಲ ಮನೆಯನ್ನು ನಡೆಸಿಕೊಂಡು ಹೋಗಲಾಗುವುದಿಲ್ಲ. ನಮ್ಮ ಸರ್ಕಾರದ ಆಹಾರ ನೀತಿ ಎಷ್ಟು ಅಮಾನವೀಯವಾಗಿದೆ ಎಂದರೆ ಶೌಚಾಲಯವಿರುವ ಮನೆಗಳ ನಿವಾಸಿಗಳು ಬಡತನ ರೇಖೆ ಕೆಳಗೆ ಬರುವುದಿಲ್ಲ. ಅಂದರೆ ಅವರಿಗೆ ಪಡಿತರ ಸೌಕರ್ಯವಿಲ್ಲ.

ಒಂದೆಡೆ ಶುಚೀಕರಣದ ಉಪದೇಶ ನೀಡುವ ಸರ್ಕಾರ, ಮನೆಗೊಂದು ಪಾಯಖಾನೆ ಇರಬೇಕೆಂದು ಹೇಳುವ ಸರ್ಕಾರ, ಅದಕ್ಕಾಗಿ ಕಡಿಮೆ ಬಡ್ಡಿಯ ಸಬ್ಸಿಡಿ ಸಾಲ ನೀಡುವ ಸರ್ಕಾರ ಇನ್ನೊಂದೆಡೆ ಇಂಥ ಶೌಚಾಲಯ ಹೊಂದಿರುವ ಮನೆಯಲ್ಲಿ ವಾಸಿಸುವವರನ್ನು ಸಿರಿವಂತರೆಂದು ಪರಿಗಣಿಸಿ ಅವರಿಗೆ ಪಡಿತರ ಸೌಕರ್ಯ ನಿರಾಕರಿಸುತ್ತದೆ. ಹೀಗಾಗಿ ಗ್ರಾಮೀಣ ಬಡ ಮಹಿಳೆಯರ ಪರಿಸ್ಥಿತಿ ಶೋಚನೀಯವಾಗಿದೆ.

ಕೇಂದ್ರ ಸರ್ಕಾರದ ದಾಸ್ತಾನು ಮಳಿಗೆಗಳಲ್ಲಿ ಈಗಾಗಲೇ ಆರು ಕೋಟಿ ರೂಪಾಯಿ ಮೊತ್ತದ ೬೦ ಲಕ್ಷ ಟನ್ ಆಹಾರ ಧಾನ್ಯ ಕೊಳೆಯುತ್ತ ಬಿದ್ದಿದೆ. ಈ ಆಹಾರ ಸಾಮಗ್ರಿಯನ್ನು ದಾಸ್ತಾನು ಮಾಡಿಡಲು ಗೋದಾಮುಗಳ ಸೌಕರ್ಯವಿಲ್ಲದೆ ಕಳೆದ ವರ್ಷ ಲಕ್ಷಾಂತರ ಟನ್ ಆಹಾರ ಸಾಮಗ್ರಿಯನ್ನು ಸಮುದ್ರಕ್ಕೆ ಬಿಸಾಡಲಾಯಿತು. ಈ ಬಾರಿ ಫಸಲು ಬಂದರೆ ಈ ಪ್ರಮಾಣ ಇನ್ನಷ್ಟು ಹೆಚ್ಚುತ್ತದೆ. ಆದರೂ ಪಡಿತರದ ಮೂಲಕ ಬಡ ಕುಟುಂಬಗಳಿಗೆ ಆಹಾರ ಧಾನ್ಯ ಒದಗಿಸಲು ಈ ಸರ್ಕಾರ ತಯಾರಿಲ್ಲ. ಆಹಾರ ಧಾನ್ಯಗಳಿಗೆ ಸರ್ಕಾರ ಸಬ್ಸಿಡಿ ನೀಡುತ್ತಿದ್ದರೂ ಇದರ ಶೇ. ೬೦ರಷ್ಟು ಇವುಗಳ ಸಾಗಾಟ ಹಾಗೂ ದಾಸ್ತಾನಿಗೆ ವ್ಯಯವಾಗುತ್ತದೆ. ಪ್ರಧಾನ ಮಂತ್ರಿಗಳ ಅಂತ್ಯೋದಯ ಅನ್ನ ಯೋಜನೆಯೂ ಹೆಸರಿಗೆ ಮಾತ್ರವಿದೆ.

ಸರ್ಕಾರಿ ಗೋದಾಮುಗಳಲ್ಲಿ ಲಕ್ಷಾಂತರ ಟನ್ ಆಹಾರ ಧಾನ್ಯ ಕೊಳೆಯುತ್ತಿದ್ದರೂ ಸರ್ಕಾರದ ಮೂಲಕ ಸಬ್ಸಿಡಿ ದರದಲ್ಲಿ ಇದು ವಿತರಣೆಯಾಗಬಾರದೆಂಬುದು ವಿಶ್ವಬ್ಯಾಂಕ್ ಕಟ್ಟಪ್ಪಣೆಯಾಗಿದೆ. ಈ ಲಕ್ಷ್ಮಣರೇಖೆಯನ್ನು ದಾಟಿ ಬರಲಾಗದ ಕೇಂದ್ರ ಸರ್ಕಾರ ಆಹಾರಧಾನ್ಯ ಕೊಳೆಯುತ್ತ ಬಿದ್ದಿದ್ದರೂ ಹಸಿದವರಿಗೆ ವಿತರಿಸುವುದಿಲ್ಲ. ಇಷ್ಟು ದೊಡ್ಡ ಪ್ರಮಾಣದ ಆಹಾರ ದಾಸ್ತಾನನ್ನು ಸುರಕ್ಷಿತವಾಗಿ ಸಂಗ್ರಹಿಸಿಡಲು ಸಾಧ್ಯವಿಲ್ಲ ಎಂದು ಗೊತ್ತಿದ್ದರೂ ಸರ್ಕಾರ ಇಲಿ, ಹೆಗ್ಗಣಗಳಿಗೆ ಇದನ್ನು ಮೀಸಲಿರಿಸಿದೆ.

ಒಂದೆಡೆ ಆಹಾರಧಾನ್ಯವನ್ನು ಗೋದಾಮುಗಳಲ್ಲಿ ತುಂಬಿಸಿ ಬಡವರನ್ನು ಉಪವಾಸಕ್ಕೆ ನೂಕಿ ಕೊಲ್ಲುವ ಈ ಸರ್ಕಾರ ಇನ್ನೊಂದೆಡೆ ಕಾರ್ಪೊರೇಟ್ ಜಗತ್ತಿಗೆ ವಿಶೇಷ ಸವಲತ್ತುಗಳನ್ನು ನೀಡುತ್ತಿದೆ. ಭಾರೀ ಬಂಡವಾಳಗಾರರ ಮೇಲಿನ ತೆರಿಗೆ ಪ್ರಮಾಣದಲ್ಲಿ ಶೇ. ೧೧.೯ರಷ್ಟು ಕಡಿಮೆ ಮಾಡಿದೆ. ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಈ ಕೋಟ್ಯಾಧಿಪತಿಗಳು ಪಡೆದ ಸಾಲವನ್ನು ಮನ್ನಾ ಮಾಡುತ್ತಿದೆ. ಇದು ಹಗಲು ದರೋಡೆಯಲ್ಲದೆ ಬೇರೇನು ?

ಕೋಟ್ಯಾಧಿಪತಿಗಳಿಗೆ ಈ ರೀತಿಯ ಸಾಲ ಮನ್ನಾದ ತೆರಿಗೆ ಕಡಿತದ ಸಬ್ಸಿಡಿ ನೀಡುವುದಾದರೆ ಈ ಸೌಕರ್ಯ ಬಡವರಿಗೇಕಿಲ್ಲ? ಬಡ ಮಹಿಳೆಯರು ತುತ್ತು ಕೂಳಿಗಾಗಿ ಅಂಡಲೆಯಬೇಕಾದ ಪರಿಸ್ಥಿತಿ ಯಾಕೆ ನಿರ್ಮಾಣವಾಗಿದೆ ? ಹೊಟ್ಟೆಗೆ ಕೂಳಿಲ್ಲದ ಮಹಿಳೆಯರಿಗೆ ಸ್ತ್ರೀಶಕ್ತಿ ಯೋಜನೆಯಿಂದ ಏನು ಪ್ರಯೋಜನವಾಗಿದೆ ?

ಇಂಥ ಆಹಾರದ ಕೊರತೆಯಿಂದಾಗಿಯೇ ಆಂಧ್ರಪ್ರದೇಶ, ಮಹಾರಾಷ್ಟ್ರ, ಕರ್ನಾಟಕ ಮುಂತಾದ ರಾಜ್ಯಗಳ ಗ್ರಾಮೀಣ ಹೆಣ್ಣುಮಕ್ಕಳಲ್ಲಿ ಅನಿಮಿಯಾ, ಕ್ಷಯ ರೋಗಗಳು ವ್ಯಾಪಕವಾಗಿ ಹೆಚ್ಚುತ್ತಿವೆ. ಈ ದಾರುಣ ಪರಿಸ್ಥಿತಿಯಿಂದ ಮಹಿಳೆಯರ ವಿಮೋಚನೆಯಾಗಬೇಕೆಂದರೆ ಅದು ವ್ಯಾಪಕ ಹೋರಾಟಗಳಿಂದ ಮಾತ್ರ ಸಾಧ್ಯ.

**ಶಶಿಕಲಾ ಬೆಳಗಲಿ**
ಎಲ್.ಎಫ್. ೧೭/೬, ಬಿ.ಡಿ.ಎ. ಫ್ಲ್ಯಾಟ್, ಬಿ.ಟಿ.ಎಂ. ಲೇಔಟ್, ಬೆಂಗಳೂರು - ೫೬೦ ೦೭೬

# ಭಾರತೀಯ ಪರಂಪರೆಯಲ್ಲಿ ಸ್ತ್ರೀವಾದ

**ನ**ವೆಂಬರ್ ೨೦೦೨ರ 'ಹೊಸತು'ನಲ್ಲಿ ಪ್ರಕಟವಾಗಿರುವ ಬಿ. ವಿ. ವೀರಭದ್ರಪ್ಪನವರ ''ಪ್ರಾಚೀನ ಭಾರತದ ಸ್ತ್ರೀವಾದಿಗಳು'' ಎಂಬ ಲೇಖನಕ್ಕೆ ಸಂಬಂಧಿಸಿ ಇನ್ನಷ್ಟು ಮಾಹಿತಿ ನೀಡಬಯಸುವೆ -

ಸ್ತ್ರೀವಾದ ಎಂಬ ಪದವು ವಿದೇಶಗಳಿಂದ ಆಮದಾಗಿರುವುದು, ಸಿಮನ್ ದ ಬುವಾ ಎಂಬ ಫ್ರೆಂಚ್ ಲೇಖಕಿಯ 'ದಿ ಸೆಕೆಂಡ್ ಸೆಕ್ಸ್'ನ್ನು ಇದುವರೆಗಿನ ಮೊತ್ತ ಮೊದಲ ಸ್ತ್ರೀವಾದಕ್ಕೆ ಸಂಬಂಧಿಸಿದ್ದು ಎಂದು ಭಾವಿಸಲಾಗಿರುವುದು ನಿಜವಾದರೂ ನಮ್ಮ ದೇಶದ, ಅದರಲ್ಲೂ ಕನ್ನಡದ ಪ್ರಾಚೀನ ಸಾಹಿತ್ಯದಲ್ಲಿ ಆ ಪದವೊಂದಿಲ್ಲದೇ ಮಾತೃ ಪ್ರಧಾನ ಕುಟುಂಬ ವ್ಯವಸ್ಥೆಯೇ ಜಾರಿಯಲ್ಲಿತ್ತು. ಪ್ರಪಂಚದ ಎಲ್ಲಾ ಭಾಷೆಗಳ ಮೊತ್ತ ಮೊದಲ ಅಲಿಖಿತ ಸಾಹಿತ್ಯವೆಂದರೆ ಜಾನಪದ. ಹೆಸರಿಲ್ಲದ ಹೆಸರೊಲ್ಲದ ಜನತೆ ತಲೆಮಾರಿನಿಂದ ತಲೆಮಾರಿಗೆ ದಾಟಿಸುತ್ತಾ ಬಂದ ಈ ಸಾಹಿತ್ಯವು ವೇದಗಳಿಗೂ ಪ್ರಾಚೀನವಾಗಿದ್ದು, ಹೆಣ್ಣು ಮನೆಗೆಲಸವನ್ನೆಲ್ಲಾ ಮುಗಿಸಿ ಹೊಲ ಗದ್ದೆಗಳಲ್ಲೂ ದುಡಿಯುತ್ತಿದ್ದ ಕಾಲ ಅದು. ಹೀಗಾಗಿ ಮನೆಗೆ ಒಂದು ಹೆಣ್ಣು ಬರುವುದೆಂದರೆ ಒಳಗೂ ಹೊರಗೂ ದುಡಿಯುವ ಒಂದು ಆಳು ಬಂದಂತೆ. ಆ ಕಾರಣಕ್ಕಾಗಿಯೇ ಕನ್ಯಾ ಶುಲ್ಕ, ತೆರ ಕೊಟ್ಟು ಹೆಣ್ಣು ತರುವ ಪದ್ಧತಿಯಿತ್ತು. ಅಂತಹ ಪದವೊಂದಿಲ್ಲದೇ ಮಾತೃಪ್ರಧಾನ ವ್ಯವಸ್ಥೆಯಿತ್ತು. ಆಗ ಹೆಂಗಸು ಯಾವ ಕಷ್ಟಕ್ಕೂ ಹೆದರುತ್ತಿರಲಿಲ್ಲ.

ತನ್ನ ತೊಡೆ ತೋರಿಸಿ ಕೌರವನನ್ನು ಜೂಜಿನಲ್ಲಿ ಗೆಲ್ಲುವ ದ್ರೌಪದಿ, ರಾವಣನನ್ನು ಮೋಹಿಸುವ ಸೀತೆ, ರಾಜ ಪ್ರಭುತ್ವದ ಅನ್ಯಾಯದ ವಿರುದ್ಧ ಸಿಡಿದೇಳುವ ಕಲ್ಲುಟ್ಟಿ, ಸಿಂಗರಿಸಿದ ಪೊರಕೆಯನ್ನು ದಂಡಿಗೆಯಲ್ಲಿಟ್ಟು ಕಳುಹಿಸುವ ಮೂಲಕ ಗಂಡನ ಮೋಸವನ್ನು ಪ್ರತಿಭಟಿಸುವ ಮಾನಿಗ, ಕತ್ತಿನ ಕರಿಮಣಿ ಮೂಗಿನ ಮೂಗುತಿ ಕೈ ಬಳೆಗಳನ್ನು ಗಂಡನ ಮುಂದೆ ಬಿಸುಟು ವಿಚ್ಛೇದನ ಹೇಳುವ ಸಿರಿ, ತನ್ನ ಗಂಡನನ್ನು ಕೊಂದವನನ್ನು ಕೊಲ್ಲುವ ಹಿರಿದಿಮ್ಮಿ - ಇಂತಹ ಪ್ರತಿಮೆಗಳು ಜಾನಪದ ಕಥನ ಗೀತೆಗಳಲ್ಲಿವೆ.

ಜಾನಪದ ರಾಮಾಯಣ ಮತ್ತು ಜಾನಪದ ಮಹಾಭಾರತದ ಸೀತೆ ಮತ್ತು ದ್ರೌಪದಿ ನಮ್ಮ ವೈದಿಕ ಪರಂಪರೆಯ ಸೀತೆ ದ್ರೌಪದಿಯರಂತಿರುವುದಿಲ್ಲ. ಒಬ್ಬ ಜಾನಪದ ಕವಯತ್ರಿ ಸೀತೆಯ ಮೂಲಕ

ಬಾಳೆ ಕಡಿದಾರೆ ತೋಟ ಹಾಳಾಗಬಲ್ಲುದೆ
ಬಾಳೀಸಲಾರದೆ ಮಡದೀಯ
ಬಿಟ್ಟರೆ ಬಾಳೆ ಹಣ್ಣೇನೇ ಕೊಳಿಯಾಕೆ

ಎಂದು ಕಡಿದರೂ ಸಾಯದ ಸತ್ಯವನ್ನು ಹೇಳಿಸಿದ್ದಾಳೆ. ಗಂಡಿನ ಆಶ್ರಯವಿಲ್ಲದೇ ಬದುಕಬಲ್ಲೆನೆಂಬ ಛಲ ಅವಳಿಗಿದೆ.

ಬಿಟ್ಟಾಡಿಕೊಳುವ ಬಾಗಾದಿ ಮನಿ ಮುಂದ
ಬಿಚ್ಚುಗತ್ಯಾಗಿ ಹೊಳೆದೇನ

ಎನ್ನುವ ಹೆಣ್ಣು ಯಾವಾಗಲೂ ಅಸಹಾಯಳಾಗಿ ಗಂಡಿನ ಬಲಾತ್ಕಾರಕ್ಕೆ ಬಲಿಯಾಗುವುದಿಲ್ಲ. ಅಪಾಯದಿಂದ ಪಾರಾಗಲು ಅವಳು ಅಪಾಯದ ಹಾದಿಯನ್ನೇ ಹಿಡಿಯುತ್ತಾಳೆ. ಇದಕ್ಕೆ ಉದಾಹರಣೆ ಎಳ್ಳಮಾಸಿ ಹಾಡಿನ ನಾಗುಬಾಯಿ, ಜೈನರ ಹಾಡಿನ ಅಕ್ಕ ಮಹಾದೇವಿ, ನೀಲಗಂಗಾ ಹಾಡಿನ ನೀಲಗಂಗಾ.

ವಾಲ್ಮೀಕಿಯ ಕತೆ ಅಯೋಧ್ಯೆಯಿಂದ ರಾಮನ ಕತೆಯಿಂದ ಪ್ರಾರಂಭವಾದರೆ ಜಾನಪದ ರಾಮಾಯಣದ ಕತೆ ಸೀತೆಯ ಜನನದಿಂದ ಪ್ರಾರಂಭವಾಗುತ್ತದೆ. ರಾವಣ ಮಂಡೋದರಿಯರ ಮಗಳು ಸೀತೆ ಎಂದು ಇವು ಸ್ಪಷ್ಟವಾಗಿ ಹೇಳುತ್ತವೆ : ''ಮಧುಗಿರಿಯ ಚಿತ್ರಪಟ ರಾಮಾಯಣದ ಪ್ರಕಾರ ಸೀತೆಯು ಅತ್ತೆಯರ ಅಥವಾ ತಂಗಿಯರ ಕೋರಿಕೆಗೆ ಮಣಿದು ರಾವಣನ ಚಿತ್ರ ಬರೆಯುತ್ತಾಳೆ. ರಾಮ ಬಂದನೆಂದು ಹೆದರಿ ಅದನ್ನು ಮಂಚದ ಕೆಳಗೆ ಅಡಗಿಸುತ್ತಾಳೆ. ರಾವಣನ ಆತ್ಮವು ಅದರಲ್ಲಿ ಸೇರಿ ಚಿತ್ರವು ಕುಣಿಯುತ್ತಾ ಆಚೆ ಬರುತ್ತದೆ. ಅದನ್ನು ಕಂಡ ರಾಮನು ಸೀತೆಯನ್ನು ಕಾಡಿಗೆ ಕಳಿಸುತ್ತಾನೆ.'' ಇನ್ನೊಂದು ಕತೆಯ ಪ್ರಕಾರ ಕೈಕೇಯಿ ಮೊದಲಾದವರೇ ರಾಮನಿಗೆ ಚಾಡಿ ಹೇಳಿ ಅವಳನ್ನು ಕಾಡಿಗೆ ಕಳಿಸುತ್ತಾರೆ. ''ಗೊಂಡಾ ರಾಮಾಯಣ''ದ ಪ್ರಕಾರ ಸೀತೆ ಮತ್ತು ಲಕ್ಷ್ಮಣರ ನಡುವೆ ಸಂಬಂಧವಿದೆಯೆಂದು ಶಂಕಿಸಿದ ರಾಮನು ಲಕ್ಷ್ಮಣನನ್ನು ಹಿಂಸಿಸುತ್ತಾನೆ. ವಾಲ್ಮೀಕಿಯು ಪಿತೃ ಪ್ರಧಾನ ಕುಟುಂಬ ವ್ಯವಸ್ಥೆಯ ಕೊಡುಗೆಯಾಗಿ ಸೀತೆಯ ಮೇಲೆ ಹೇರಿರುವ ಪಾತಿವ್ರತ್ಯದ ಭಾರವಿಲ್ಲದೇ, ಇಲ್ಲಿ ಎಲ್ಲ ಪಾತ್ರಗಳೂ ಮಣ್ಣಿಗೆ ಹತ್ತಿರವಾಗಿರುತ್ತವೆ.

ವೇದಗಳಲ್ಲಿ ಸತೀ ಪದ್ಧತಿ ಐಚ್ಛಿಕವಾಗಿತ್ತು. ಸತ್ತ ಗಂಡನ ಚಿತೆಯ ಬಳಿ ಕುಳಿತುಕೊಳ್ಳುತ್ತಿದ್ದ ಹೆಣ್ಣು ಮಗಳನ್ನು ಅವಳ ಬಂಧು ಬಾಂಧವರು ಕೂಗಿ ಕರೆಯುತ್ತಿದ್ದರು. ಅವಳನ್ನು ಚೆನ್ನಾಗಿ ನೋಡಿಕೊಳ್ಳುವ ಭರವಸೆ ನೀಡುತ್ತಿದ್ದರು. ಅವಳು ಇನ್ನೊಂದು ಮದುವೆಯನ್ನೂ ಮಾಡಿಕೊಳ್ಳಬಹುದಿತ್ತು. ಆಗ ಅವಳು ಕೆಳಗಿಳಿದು ಬಂದುಬಿಡುತ್ತಿದ್ದಳು. ಹಾಗೊಮ್ಮೆ ಅವಳಿಗೆ ಗಂಡನ ಬಗ್ಗೆ ಅತಿಮೋಹವಿದ್ದು ಅವನಿಲ್ಲದೇ ಬದುಕಿರುವುದೇ ಅಸಾಧ್ಯವೆಂದಾದರೆ ಅವಳು ಸತಿ ಹೋಗಬಹುದಿತ್ತು. ಮುಂದೆ ಸ್ಮೃತಿಗಳ ಕಾಲಕ್ಕೆ ಇದು ಕಡ್ಡಾಯವಾಯಿತು.

ಕನ್ನಡ ಸಾಹಿತ್ಯಕ್ಕೆ ಬಂದರೆ ಹನ್ನೆರಡನೇ ಶತಮಾನದ ಅಕ್ಕಮಹಾದೇವಿ ತನ್ನ ವೈಯಕ್ತಿಕ ಬದುಕಿಗೆ ಮಾತ್ರ ಸ್ಪಂದಿಸದೆ ಇಡೀ ಸಮಾಜಕ್ಕೆ ಸ್ಪಂದಿಸಿದ್ದ ಪಕ್ಷದಲ್ಲಿ ಮೊತ್ತಮೊದಲ ಸ್ತ್ರೀವಾದಿಯಾಗುತ್ತಿದ್ದಳು. ರನ್ನನ 'ಅಜಿತ ಪುರಾಣ'ದಲ್ಲಿ ಅರವತ್ತಾರು ಪದ್ಯಗಳಲ್ಲಿ ವರ್ಣಿತಳಾಗಿರುವ ಅತ್ತಿಮಬ್ಬೆ, ಏಳನೇ ಶತಮಾನದಲ್ಲಿದ್ದ ಸರಸ್ವತಿಯನ್ನು ವರ್ಣಿಸುವ ದಂಡಿಯು ನಿನ್ನನ್ನು ಕಂಡಿದ್ದರೆ ಅವಳನ್ನು 'ಸರ್ವಂಶುಕ್ಲಾ' ಎನ್ನುತ್ತಿರಲಿಲ್ಲ, ನನ್ನಂತೆ ಕಪ್ಪಗಿರುತ್ತಾಳೆಂದೇ ಹೇಳುತ್ತಿದ್ದನು ಎನ್ನುವ ಸಂಸ್ಕೃತ ಕವಯತ್ರಿ ವಿಜ್ಜಿಕಾ, ಆಧುನಿಕ ಪೂರ್ವ ಬರಹಗಾರ್ತಿಯಾದ ನಂಜನಗೂಡು ತಿರುಮಲಾಂಬಾ, ಎಚ್. ವಿ. ಸಾವಿತ್ರಮ್ಮ, ಆರ್. ಕಲ್ಯಾಣಮ್ಮ ಎಲ್ಲರೂ ಪ್ರಾಚೀನ ಕನ್ನಡ ಸಾಹಿತ್ಯದ ಸ್ತ್ರೀವಾದೀ ಎಳೆಗಳೇ. ತಿರುಮಲಾಂಬ ಮತ್ತು ಕಲ್ಯಾಣಮ್ಮ ಬಾಲ ವಿಧವೆಯರು. ಆದರೆ ಪತ್ರಿಕೆ ನಡೆಸಿ ಸಮಾಜ ಸೇವೆ ಮಾಡಿದವರು. ತಿರುಮಲಾಂಬ 'ಸತೀ ಹಿತೈಷಿಣೀ' ಎಂಬ ಗ್ರಂಥಮಾಲೆಯನ್ನೂ 'ಸನ್ಮಾರ್ಗದರ್ಶಿನೀ' ಎಂಬ ಪತ್ರಿಕೆಯನ್ನೂ ನಡೆಸಿದವರು. ಸ್ವತಃ ಪುಸ್ತಕ ಬರೆದವರು. ಕಲ್ಯಾಣಮ್ಮ 'ಸರಸ್ವತೀ' ಎಂಬ ಪತ್ರಿಕೆ ನಡೆಸಿ ಮಕ್ಕಳ ಕೂಟ ಸ್ಥಾಪಿಸಿದವರು. ಎಚ್. ವಿ. ಸಾವಿತ್ರಮ್ಮ ತಮ್ಮ ಒಂದು ಕತೆಯಲ್ಲಿ 'ಮದುವೆಯಿಲ್ಲದೇ ಮಗುವನ್ನು ಪಡೆದು ಸಾಕುವಂತಾದ ಹೆಣ್ಣು ನಿಜವಾದ ಪ್ರಗತಿಯ ದ್ಯೋತಕ' ಎಂದವರು. ಇವರ ಮಾತುಗಳೆಲ್ಲಾ ಕನ್ನಡ ಸಾಹಿತ್ಯವು ಸ್ತ್ರೀವಾದ ಎಂಬ ಪದವನ್ನು ಕಂಡು ಕೇಳರಿಯದಿದ್ದ ದಿನಗಳವು.

ಈಗಲೂ ಅಸಾಮಿನ ರಿಯಾನ್ ಎಂಬ ಜನಾಂಗದಲ್ಲಿ ಮದುವೆಗೆ ಮೊದಲು ಗಂಡು ಹೆಣ್ಣು ಒಂದು ವರ್ಷ ಒಟ್ಟಿಗೇ ವಾಸಿಸಬೇಕಂತೆ. ಇದು ಪರಸ್ಪರರನ್ನು ಅರಿಯಲು ಮತ್ತು ಅವನ ಪುರುಷತ್ವವನ್ನು ಸಾಬೀತುಪಡಿಸಲು. ಈ ಅವಧಿಯಲ್ಲಿ ಅವಳಿಗೆ ಮಗುವಾದರೂ ಆಗಬಹುದು. ಅವಳು ಒಪ್ಪಿದರೆ ಮದುವೆ ಇಲ್ಲದಿದ್ದರೆ ಇಲ್ಲ. ಮಗು ಅವಳದೇ. ಅವಳೇ ಸಾಕುತ್ತಾಳೆ.

ಡಾ|| ಎಸ್. ವಿ. ಪ್ರಭಾವತಿ
೪೬೮, ೨೫ನೇ ಮುಖ್ಯರಸ್ತೆ, ಬಿ. ಟಿ. ಎಂ. ಬಡಾವಣೆ
ಕುವೆಂಪುನಗರ, ಬೆಂಗಳೂರು - ೫೬೦ ೦೭೬

# ಔಷಧಿ ನಿಷೇಧ ಸಾಧ್ಯವಿಲ್ಲವೇ?

ಔಷಧಿ ಸಂಶೋಧನೆ ನಿರಂತರವಾಗಿ ಸಾಗಿದೆ. ಅನೇಕ ಹೊಸ ಹೊಸ ಔಷಧಿಗಳನ್ನು ಕಂಡುಹಿಡಿಯಲಾಗುತ್ತಿದೆ. ಮೊದಲಿದ್ದ ಔಷಧಿಗಿಂತ ಒಳ್ಳೆಯ, ಕಡಿಮೆ ಅಡ್ಡಪರಿಣಾಮಗಳುಳ್ಳ ಔಷಧಿಯನ್ನು ಕಂಡುಹಿಡಿದಾಗ ಆ ಔಷಧಿ ಬಳಕೆಗೆ ಬರುತ್ತದೆ. ಆ ಔಷಧಿ ಅತ್ಯಗತ್ಯವಾಗಿದ್ದು ಸುಲಭವಾಗಿ ದೊರಕುತ್ತಿದ್ದಾಗ ಆ ಔಷಧಿ ಬಳಕೆಗೆ ಯೋಗ್ಯ, ಇಂತಹ ಅನೇಕ ಔಷಧಿಗಳನ್ನು ಅಗತ್ಯ ಔಷಧಿ ಪಟ್ಟಿಯಲ್ಲಿ ಸೇರಿಸುತ್ತಾರೆ.

ಮೊದಲಿದ್ದ ಔಷಧಿಗೆ ಅಡ್ಡ ಪರಿಣಾಮಗಳಿದ್ದು, ಆ ಔಷಧಿಗಿಂತ ಹೊಸ ಔಷಧಿ ಹೆಚ್ಚು ಪರಿಣಾಮಕಾರಿಯಾದಲ್ಲಿ ಮೊದಲಿದ್ದ ಔಷಧಿಯನ್ನು ನಿಷೇಧಿಸಬಹುದಾಗಿದೆ. ಆದ್ದರಿಂದ **ಔಷಧಿ ನಿಷೇಧ ಹೊಸದಾದ ಮತ್ತು ಒಳ್ಳೆಯ ಔಷಧಿ ಬಳಕೆಗೆ ಸಹಾಯವಾಗುತ್ತದೆ.**

ಭಾರತದಲ್ಲಿ ಔಷಧಿ ನಿಷೇಧ ಪ್ರಕ್ರಿಯೆ ನಿಧಾನವಾಗಿ ಸಾಗಿರುವುದರಿಂದ ಅನೇಕ ಅನಗತ್ಯ ಅಪಾಯಕಾರಿ ಔಷಧಿಗಳು ಇಂದಿಗೂ ನಮ್ಮಲ್ಲಿವೆ. ಭಾರತದಲ್ಲಿ ನಿಷೇಧ ಪ್ರಕ್ರಿಯೆ ೧೯೮೦ರಲ್ಲಿ ಪ್ರಾರಂಭವಾಗಿದೆ. ಆಸ್ಟ್ರೇಲಿಯಾದಲ್ಲಿ ೧೯೭೫ರಲ್ಲಿ ನಿಷೇಧವಾದ ಈಸ್ಟ್ರೋಜೆನ್-ಪ್ರಜೆಸ್ಟಿರೋನ್ ಸಂಮಿಶ್ರ ಔಷಧಿಯನ್ನು ೧೯೮೦ರಲ್ಲಿ ಭಾರತ ಸರಕಾರ ನಿಷೇಧಿಸಿತು. ಆದರೆ ಔಷಧಿ ಕಂಪನಿ ನಿಷೇಧದ ತಡೆಯಾಜ್ಞೆ ತಂದಿದ್ದರಿಂದ ಆ ನಿಷೇಧ ನಿಷ್ಕ್ರಿಯವಾಯಿತು. ನಿಷೇಧಿಸುವ ಮುನ್ನ ಔಷಧಿ ನಿಷೇಧದ ಕಾನೂನು ಪರಿಣಾಮಕಾರಿಯಾಗಿದೆಯೇ ಎಂದು ಭಾರತ ಸರಕಾರ ಖಚಿತಪಡಿಸಿಕೊಳ್ಳದಿದ್ದುದರ ಪರಿಣಾಮವೇ ನಿಷೇಧ ಜಾರಿಯಾಗದೇ ಇರುವುದು! ಅನಂತರ ಕಾನೂನಿನಲ್ಲಿ ಕೆಲವು ಸೇರ್ಪಡೆ ಮಾಡಿ ಔಷಧಿ ನಿಷೇಧವನ್ನು ಜಾರಿಗೆ ಬರುವಂತೆ ಮಾಡಲಾಯಿತು. ಇಲ್ಲಿಯವರೆಗೆ ಅನೇಕ ಔಷಧಿಗಳನ್ನು ನಿಷೇಧಿಸಲಾಗಿದೆ. ಔಷಧಿ ನಿಷೇಧದ ಕೆಲವು ಲೋಪದೋಷಗಳನ್ನು ತಿಳಿಯೋಣ.

❒ ಪ್ರಾರಂಭದಲ್ಲಿ ಔಷಧಿ ನಿಷೇಧವಾದರೂ, ಆ ಔಷಧಿ ಮಾರುಕಟ್ಟೆಯಲ್ಲಿ ದೊರಕುತ್ತಿತ್ತು. ಅದಕ್ಕೆ ಕಾರಣ ಔಷಧಿ ನಿಷೇಧವನ್ನು ರಾಜ್ಯ ಔಷಧಿ ನಿಯಂತ್ರಣ ಜಾರಿಗೆ ತರುವಲ್ಲಿ ವಿಳಂಬ ಮಾಡಿದುದರಿಂದ! ೧೯೮೩ರಲ್ಲಿ ನಿಷೇಧ ಜಾರಿಗೆ ಬಂದರೂ ಈಸ್ಟ್ರೋಜನ್ ಪ್ರಜೆಸ್ಟಿರೋನ್ ಔಷಧಿ ಮಾರುಕಟ್ಟೆಯಲ್ಲಿ ೧೯೮೯ರವರೆಗೆ ದೊರಕುತ್ತಿತ್ತು.

❒ ಔಷಧಿ ನಿಷೇಧದ ಬಗ್ಗೆ ವೈದ್ಯರಿಗೆ ಮಾಹಿತಿ ಕೊಡುವವರಾರು? ಔಷಧಿ ಕಂಪನಿಯು ಹೊಸ ಔಷಧಿ ಪರಿಚಯಮಾಡುತ್ತದೆ. ಆದರೆ ಔಷಧಿ ನಿಷೇಧದ ಬಗ್ಗೆ ಯಾವ ಮಾಹಿತಿಯನ್ನೂ ಕೊಡುವುದಿಲ್ಲ. ಸರಕಾರ ಔಷಧಿ ನಿಷೇಧದ ಬಗ್ಗೆ ವೈದ್ಯರಿಗೆ ತಿಳಿಸಬೇಕು, ಆದರೆ ಭಾರತದಲ್ಲಿ ಆ ವ್ಯವಸ್ಥೆ ಇಲ್ಲ. ವೈದ್ಯರು ದಿನಪತ್ರಿಕೆಯಿಂದ ಔಷಧಿ ನಿಷೇಧದ ಬಗ್ಗೆ ತಿಳಿದುಕೊಳ್ಳಬೇಕಾಗುತ್ತದೆ. ಆದ್ದರಿಂದ **ಔಷಧಿ ನಿಷೇಧದ ಮಾಹಿತಿ ಕೆಲವು ವೈದ್ಯರ ಗಮನಕ್ಕೆ ಬರುವುದೇ ಇಲ್ಲ.** ವೈದ್ಯರು ಔಷಧಿ ಉಪಯೋಗಿಸುವುದರಿಂದ ಆ ಔಷಧಿಗೆ ಸಂಬಂಧಿಸಿದ ಎಲ್ಲ ಮಾಹಿತಿಯನ್ನು ಪಡೆಯಬೇಕಾಗುತ್ತದೆ. **ಸಮಯವಿಲ್ಲ ಎಂಬ ನೆಪದಲ್ಲಿ ಈ ವಿಷಯದ ಬಗ್ಗೆ ಗಮನಹರಿಸುವುದೇ ಇಲ್ಲ.**

❒ ಭಾರತದಲ್ಲಿ ಔಷಧಿ ನಿಷೇಧ ಪ್ರಕ್ರಿಯೆ ಸಮರ್ಪಕವಾಗಿಲ್ಲ. ಔಷಧಿ ನಿಷೇಧವನ್ನು ಔಷಧಿ ತಾಂತ್ರಿಕ ಸಲಹಾ ಮಂಡಳಿ (ಡ್ರಗ್ ಟೆಕ್ನಿಕಲ್ ಅಡ್ವೈಸರಿ ಬೋರ್ಡ್) ತೀರ್ಮಾನಿಸಬೇಕಾಗುತ್ತದೆ. ಆದರೆ ಈ ಮಂಡಳಿ ಔಷಧಿ ಕಂಪನಿಗಳ ಒತ್ತಡದಿಂದ ಔಷಧಿ ನಿಷೇಧದ ವಿಷಯದಲ್ಲಿ ಪರಿಣಾಮಕಾರಿಯಾಗಿ ಕೆಲಸ ಮಾಡುತ್ತಿಲ್ಲ. ಎಲ್ಲಿಯವರೆಗೆ ಭಾರತದಲ್ಲಿ ಔಷಧಿ ನಿಯಂತ್ರಣ ಔಷಧಿ ನಿಷೇಧವನ್ನು ಜಾರಿ ಮಾಡುವುದಿಲ್ಲವೋ ವೈದ್ಯರು ಆ ಔಷಧಿಯನ್ನು ಉಪಯೋಗಿಸುತ್ತಿರುತ್ತಾರೆ. ಇತರೇ ದೇಶಗಳಲ್ಲಿ ಆ ಔಷಧಿ ನಿಷೇಧಿಸಲಾಗಿದೆ, ಆ ಔಷಧಿ ನಿಷೇಧ ಭಾರತದಲ್ಲಿ ಅನೇಕ ಕಾರಣಗಳಿಂದ ವಿಳಂಬವಾಗಬಹುದು, ಹಾಗೂ ಇನ್ನೂ ಹೆಚ್ಚು ಪರಿಣಾಮಕಾರಿ ಔಷಧಿ ಇದೆ ಎಂಬ ಮಾಹಿತಿ ಇದ್ದರೂ ಅಭ್ಯಾಸಬಲದಿಂದ, ನಿಷೇಧಿಸಲು ಯೋಗ್ಯವಾದ ಔಷಧಿಯನ್ನೇ ಬರೆದುಕೊಡಲು ವೈದ್ಯರು ಮುಂದಾಗುತ್ತಾರೆ. ಹಾಗೂ ತಾವು ಉಪಯೋಗಿಸುವುದನ್ನೂ ನಿಲ್ಲಿಸಲಾರರು. "ನಾನು ಉಪಯೋಗಿಸಿದ್ದೇನೆ, ಅದರಿಂದ ಯಾವ ತೊಂದರೆಯೂ ಇಲ್ಲ" ಎಂದು ವಾದ ಮಾಡುತ್ತಾರೆ.

❒ ಔಷಧಿ ಕಂಪನಿಗಳು ಔಷಧಿ ನಿಷೇಧದ ಬಗ್ಗೆ ಯಾವ ಕಾಳಜಿಯನ್ನೂ ವಹಿಸುವುದಿಲ್ಲ. ಔಷಧಿ ಕಂಪನಿಗಳ ಉದ್ದೇಶ 'ಲಾಭ'. – ಎಲ್ಲಿಯವರೆಗೆ ತಮ್ಮ ಲಾಭಕ್ಕೆ ಧಕ್ಕೆ ಬರುವುದಿಲ್ಲವೋ, ಅಲ್ಲಿಯವರೆಗೆ ಇತರ ವಿಷಯಗಳು ಅವರಿಗೆ ಅನಗತ್ಯ.

**ಔಷಧಿ ಕಂಪನಿಗಳು, ವೈದ್ಯರು ಹಾಗೂ ಸರಕಾರದ ಜಡತ್ವದಿಂದ ಅನಗತ್ಯ ಔಷಧಿಗಳು, ಅಪಾಯಕಾರಿ ಔಷಧಿಗಳು ಇಂದಿಗೂ ಮುಂದುವರೆದಿವೆ.** ಔಷಧಿ ಕ್ರಿಯಾ ವೇದಿಕೆಗಳು ಔಷಧಿ ನಿಷೇಧದ ಬಗ್ಗೆ ಕಾಳಜಿ ಇಲ್ಲದಿರುವುದರ ವಿರುದ್ಧ ಪ್ರತಿಭಟಿಸಿವೆ. ಔಷಧಿ ತಾಂತ್ರಿಕ ಸಲಹಾ ಮಂಡಳಿ ಕಾರ್ಯೋನ್ಮುಖವಾಗಿ ಅಗತ್ಯ ಅಪಾಯಕಾರಿ ಔಷಧಿಗಳನ್ನು ಮುಂಬರುವ ದಿನಗಳಲ್ಲಿ ನಿಷೇಧಿಸಲು ಮುಂದಾಗುತ್ತದೆ ಎಂದು ಎದುರುನೋಡೋಣವೇ?

**ಡಾ॥ ಪ್ರಕಾಶ್ ಸಿ. ರಾವ್**
ಕಾರ್ಯದರ್ಶಿ, ಔಷಧಿ ಕ್ರಿಯಾ ವೇದಿಕೆ, ದೂರವಾಣಿ : ೩೩೭೯೦೧೬

*43ನೇ ಪುಟದಿಂದ*

ಹಾಗೂ ತಮ್ಮಲ್ಲಿ ಯಾರ್‍ಯಾರು ಪಾಸಾಗಬಹುದು? ಎಂದು ಕೇಳಿದರು. ಆಗ ಆ ಜ್ಯೋತಿಷಿ ಏನನ್ನೂ ಮಾತನಾಡದೆ ಕೇವಲ ತನ್ನ ಒಂದು ಬೆರಳನ್ನು ಮೇಲೆತ್ತಿದ. ಆಮೇಲೆ ಪರೀಕ್ಷೆಯ ಫಲಿತಾಂಶ ಬಂತು. ಅವರಲ್ಲಿ ಕೇವಲ ಒಬ್ಬನು ಮಾತ್ರ ತೇರ್ಗಡೆಯಾಗಿದ್ದ. ಪಾಸಾದವನು ಮತ್ತೆ ಆ ಜ್ಯೋತಿಷಿಯ ಬಳಿ ಬಂದು ನೀವು ಹೇಗೆ ನಾನು ಪಾಸಾಗುವುದನ್ನು ಹೇಳಿದಿರಿ? ಬರೀ ಒಂದು ಬೆರಳನ್ನು ಮಾತ್ರ ತೋರಿಸಿದಿರಿ. ಹೇಗೆ ಗೊತ್ತಾಯಿತು? ನೀವು ಭವಿಷ್ಯ ಹೇಳುವ ಗುಟ್ಟೇನು? ಎಂದು ಕೇಳಿದ. ಆಗ ಆ ಜ್ಯೋತಿಷಿ ಅವನಿಗೆ ಹೀಗೆ ಹೇಳಿದ: ನೋಡು, ನಾನು ಹೀಗೆಯೇ ಅಂದಾಜಿನಿಂದ ಒಂದು ಬೆರಳನ್ನೆತ್ತಿದ್ದೆ, ನೀನು ಪಾಸಾದೆ. ಒಬ್ಬ ಪಾಸಾಗುತ್ತಾನೆ ಎಂದಂತೆ ಎಂದು ನೀನು ತಿಳಿದೆ. ಅದೇ ಒಂದೊಮ್ಮೆ ಇಬ್ಬರು ತೇರ್ಗಡೆಯಾಗಿ ಒಬ್ಬಾತ ಫೇಲಾದರೆ ಆಗಲೂ ನನ್ನ ಭವಿಷ್ಯ ಸರಿಯಾಗುತ್ತಿತ್ತು, ನಾನು ಹೇಳುತ್ತಿದ್ದೆ ನಾನು ಎತ್ತಿದ ಒಂದು ಬೆರಳೇ ಒಬ್ಬ ಫೇಲಾಗುತ್ತಾನೆ ಎಂದು ಹೇಳಲಿಕ್ಕೆ ಎಂದೆನ್ನುತ್ತಿದ್ದೆ. ಅದೇ ಒಂದೊಮ್ಮೆ ನೀವು ಮೂವರೂ ಪಾಸಾಗಿದ್ದರೆ ಆಗಲೂ ನನ್ನ ಭವಿಷ್ಯ ನಿಜವಾಗುತ್ತಿತ್ತು, ಯಾಕೆಂದರೆ ನಾನಾಗ ಆ ಒಂದು ಬೆರಳಿಗೆ ಬೇರೆ ಅರ್ಥವನ್ನೇ ಕೊಡುತ್ತಿದ್ದೆ. ನೀವು ಮೂವರೂ ಒಟ್ಟಾಗಿ ತೇರ್ಗಡೆಯಾಗುವಿರಿ ಎಂದು ಹೇಳುತ್ತಿದೆ. ಅದೇ ಒಂದೊಮ್ಮೆ ಮೂವರೂ ಒಟ್ಟಾಗಿ ಫೇಲಾಗಿದ್ದರೆ ಆಗಲೂ ನಾನು ಹಾಗೆಯೇ ಹೇಳುತ್ತಿದ್ದೆ ಎಂದು ತನ್ನ ಭವಿಷ್ಯವಾಣಿಯ ಗುಟ್ಟನ್ನು ರಟ್ಟುಮಾಡಿದ. ನಿಜವಾಗಿಯೂ ಭವಿಷ್ಯವಾಣಿ ಎಂಬುದು ಅಂದಾಜಿನಿಂದ ಬೀಸಿದ ಕಲ್ಲು. ತಾಗಿದರೂ ಸೈ, ತಾಗದಿದ್ದರೂ ಸೈ. ಯಾಕೆಂದರೆ ಅಲ್ಲಿ ಸಮರ್ಥನೆ ಮಾಡಿಕೊಳ್ಳಲು ಅನೇಕ ಹಾದಿಗಳಿವೆ!

ಮಾನವ ಬುದ್ಧಿಜೀವಿ ಎಂದು ಹೇಳುತ್ತಾರೆ. ಅದು ನಿಜ ಎಂದು ಸಾಬೀತಾಗಬೇಕಾದರೆ ಆತ ಭಾವನೆಗಳೊಂದಿಗೆ, ಕಡಿಮೆ ವಿಚಾರಗಳೊಂದಿಗೆ ಹೆಚ್ಚು ಗುದ್ದಾಟ ನಡೆಸಬೇಕು. ನಂಬುಗೆಗಳನ್ನು ಪರಾಮರ್ಶಿಸಿ ನೋಡಬೇಕು. ಅಪ್ಪ ನೆಟ್ಟ ಆಲದ ಮರಕ್ಕೆ ನೇಣು ಹಾಕಿಕೊಳ್ಳುವಂತಾಗಬಾರದು. ಸತ್ಯಾಸತ್ಯತೆಯನ್ನು ಒರೆಗಲ್ಲಿಗೆ ಹಚ್ಚಿ ನೋಡಬೇಕು. ಸತ್ಯವನ್ನು ಕಡೆಯುವ ಕ್ರಿಯೆ ನಡೆಯಬೇಕು. ಹೀಗೆ ಕಡೆಯುವ ಕೆಲಸ ಅದರ ಪೊರೆ ಕಳಚುವವರೆಗೂ ನಡೆಯಬೇಕು. ಅಂದಾಗ ಮಾತ್ರ ಮಾನವ ಚಿಂತನಶೀಲನೆಂದು ಕರೆಯಿಸಿಕೊಳ್ಳಲು ಯೋಗ್ಯ. ಇಲ್ಲದಿದ್ದರೆ ಮೂಢಮತಿಯಾಗಿಯೇ ಮುಂದುವರೆಯಬೇಕಾಗುವದು.

ಎಸ್. ಬಿ. ಜೋಗುರ
ಪಿ. ಎಂ. ಜ್ಯೂನಿಯರ್ ಕಾಲೇಜ್, ಅಂಕೋಲಾ (ಉ. ಕ)

ರಾವಣನಿಂದ ಅಪಹೃತಳಾದ ಸೀತೆ ಲಂಕಾ ದ್ವೀಪದ ಅಶೋಕವನದಲ್ಲಿ ಏಕಾಂತದಲ್ಲಿರುವ ದೃಶ್ಯ ಊಹಿಸಿಕೊಳ್ಳೋಣ. ರಾಮನೊಂದಿಗೆ ಕಳೆದ ದಿನಗಳನ್ನು ನೆನೆಸಿಕೊಳ್ಳುತ್ತ, ಪುನಃ ರಾಮನನ್ನು ಸೇರಲು ತವಕಗೊಂಡು ಆಕೆ ನಟಿಸುತ್ತಾಳೆ. ಅವಳಿಗೋ - ನಟಿಗೆ - ವಿರಹ ವೇದನೆ. ನಮಗೋ, ಅವಳ ಅಭಿನಯದ ಆಸ್ವಾದನೆ ! ''ಆ ವಿರಹವನ್ನು ಎಷ್ಟು ಚೆನ್ನಾಗಿ ನಟಿಸಿದಳೂ ಕಣ್ರೀ'' ಎನ್ನುತ್ತೇವೆ ನಾವು. ಇದೇ ರಸಾನುಭವವಲ್ಲವೇ ?

ಸತ್ಯ ಹರಿಶ್ಚಂದ್ರ ನಾಟಕದಲ್ಲಿ ಹಾವು ಕಚ್ಚಿ ಅಸುನೀಗಿದ ಲೋಹಿತಾಶ್ವನನ್ನು ಅಪ್ಪಿ ಹಿಡಿದು ಚಂದ್ರಮತಿ ದುಃಖಿಸುವಾಗ ನಾನೂ ದುಃಖಿಸಿದರೆ ಆವೇಶಭರಿತನಾದಂತೆ. ಇಲ್ಲವೇ ಕೂತಲ್ಲಿಂದ ಎದ್ದು ರಂಗಕ್ಕೆ ಹೋಗಿ ಚಂದ್ರಮತಿಯನ್ನು ಸಂತೈಸಿದೆನಾದರೆ ಪರಿಸ್ಥಿತಿ ಏನಾದೀತು ? ಅದು ನಟನೆ ಎಂದು ತಿಳಿದು, ಅದ್ಭುತ ಅನಿಸಿದರೆ ಅದೇ ರಸಾನುಭವ ತಾನೇ ?

ರಂಗದಲ್ಲಿ ಇಬ್ಬರಲ್ಲಿ ಘರ್ಷಣೆ ಉಂಟಾಗಲಿ, ದುಃಖ ಉಂಟಾಗಲಿ, ಅದು ನಟಿಸುತ್ತಿರುವುದು, ನಟರ ವೈಯಕ್ತಿಕ ವಿಷಯವಲ್ಲ ಎಂಬ ಪ್ರಜ್ಞೆ ಮತ್ತು ಬೀದಿಯಲ್ಲಿ ಇಬ್ಬರು ಘರ್ಷಣೆಗಿಳಿದು ರಾಗದ್ವೇಷಗಳಿಂದ ವರ್ತಿಸಿದ್ದನ್ನು ನೋಡಿದ ನೆನಪಿನಿಂದ ಅಷ್ಟೇ ಸೈಜವಾಗಿ ಇವರು ನಟಿಸುತ್ತಿದ್ದಾರೆ ಎಂಬ ಪ್ರಜ್ಞೆ ಇದ್ದಾಗ ಮಾತ್ರ ರಸಾನುಭವ ಉಂಟಾಗಲು ಸಾಧ್ಯವಾದೀತು.

ಸಾಗರದ ಹಿರಿಯರೊಬ್ಬರು ಹೇಳಿದ್ದನ್ನು ಕೇಳಿದ್ದೇನೆ. ೩೦-೪೦ ವರ್ಷಗಳ ಹಿಂದೆ ಕಂಪನಿ ನಾಟಕ ಇಲ್ಲಿ ಬಿಡಾರ ಹೂಡಿದ್ದಾಗ, ಒಂದು ನಾಟಕದಲ್ಲಿ ಶಿಶುವಿನ ಕತ್ತು ಹಿಸುಕಿ ಸಾಯಿಸುವ ದೃಶ್ಯವಿತ್ತಂತೆ. ಸಾಯಿಸುವಾತ ಕ್ರೂರತನದ ನಟನೆಯನ್ನು ಚೆನ್ನಾಗಿ ನಿರ್ವಹಿಸುತ್ತಿದ್ದ. ಒಂದು ಪ್ರದರ್ಶನದಲ್ಲಿ ಈತ ಶಿಶುವಿನ ಕತ್ತು ಹಿಸುಕುವಾಗ ಒಬ್ಬ ಪ್ರೇಕ್ಷಕ ರಂಗಕ್ಕೆ ಹೋಗಿ ಶಿಶುವಿನ ಕತ್ತು ಹಿಸುಕುವಾತನಿಗೆ ಸರಿಯಾಗಿ ಹೊಡೆದನಂತೆ. ನೇಪಥ್ಯದಲ್ಲಿದ್ದವರು ಪರಿಸ್ಥಿತಿಯನ್ನು ಹತೋಟಿಗೆ ತಂದರು. ಆ ದೃಶ್ಯ ಮುಗಿಯುತ್ತಿದ್ದಂತೆ ಪ್ರದರ್ಶನಕ್ಕೆ ಸಣ್ಣ ವಿರಾಮ ನೀಡಲಾಯಿತು. ಆ ವಿರಾಮದಲ್ಲಿ ಕ್ರೂರಿಯ ಪಾತ್ರ ಮಾಡಿದಾತ ರಂಗಕ್ಕೆ ಬಂದು, ''ನನ್ನ ರಂಗಜೀವನ ಇಂದು ಸಾರ್ಥಕವಾಯಿತು'' – ಎಂದು ಹೇಳುತ್ತ ಹರ್ಷ ವ್ಯಕ್ತಪಡಿಸಿದನಂತೆ. ತನ್ನ ಅಭಿನಯ ಪ್ರೇಕ್ಷಕನ ಮನಸ್ಸಿಗೆ ಹೊಡೆಯುವಷ್ಟು ಸಿಟ್ಟು ಬರಿಸಿದ್ದರಿಂದ ಹೊಡೆತ ತಿಂದು ನೋವಾದರೂ ಅದು ಆನಂದವನ್ನೇ ನೀಡಿತು. ನಟನ ರಸಾನುಭವ ಮತ್ತು ಸಾರ್ಥಕ ಭಾವ ಎರಡೂ ಸೇರಿ ಮುಟ್ಟಬೇಕಾಗಿದ್ದ ಎತ್ತರ ಮುಟ್ಟಿ ಆಗಿತ್ತು. ಆದರೆ ಪ್ರೇಕ್ಷಕ ರಸಾನುಭವದಿಂದ ವಂಚಿತನಾಗಿದ್ದ. ತಾನು ಪ್ರೇಕ್ಷಕ ಎಂಬ ಪ್ರಜ್ಞೆ ಕಳೆದುಕೊಂಡಿದ್ದ. 'ಸಮಚಿತ್ತ'ವನ್ನು ಕಾಪಾಡಿಕೊಳ್ಳಲಾಗದೇ ಸೋತಿದ್ದ.

ಇತ್ತೀಚಿನ ದಿನಗಳಲ್ಲಿ ದುಃಖದ ಸಂದರ್ಭಗಳನ್ನು – ದೃಶ್ಯಗಳನ್ನು – ನೋಡುವಾಗ ನನಗೂ ದುಃಖ ಉಮ್ಮಳಿಸುತ್ತದೆ. ತಕ್ಷಣವೇ ಅಕ್ಕಪಕ್ಕದವರಿಗೆ ತಿಳಿಯದಂತೆ ಉಸಿರಾಟದ ಲಯಗಳನ್ನು ಹಿಡಿತಕ್ಕೆ ತಂದುಕೊಳ್ಳುವೆ. ಹೀಗಾದಾಗಲೆಲ್ಲ ನಾನು ರಸಾನುಭವದಿಂದ ವಂಚಿತನಾಗುತ್ತಿದ್ದೇನೆ, ಅಲ್ಲದೆ ಪರಿಸ್ಥಿತಿ ನಿಭಾಯಿಸುವಲ್ಲಿ ಸೋಲುತ್ತಿದ್ದೇನೆಂದು ಅನಿಸುತ್ತದೆ.

ನಿರ್ದೇಶಕರೊಬ್ಬರು ನಾಟಕದ ಪ್ರಥಮ ಪ್ರದರ್ಶನ ಸಂದರ್ಭದಲ್ಲಿ ತುಂಬಾ ಆತಂಕದಲ್ಲಿದ್ದರು. ರಂಗಮಂದಿರದ ಬಾಗಿಲ ಪಕ್ಕದಲ್ಲೇ ನಾನು ಕೂತಿದ್ದೆ. ಅವರು ಬಾಗಿಲ ಪಕ್ಕ ನಿಂತು ನಾಟಕದ ಪ್ರೇಕ್ಷಕರಾಗಿದ್ದರು. ರಂಗದ ನಟರ ಹಾವಭಾವಗಳಿಗೆ ತಕ್ಕಂತೆ ಇವರ ಮುಖವೂ ಚಿತ್ರವಿಚಿತ್ರವಾದ ಭಾವಗಳನ್ನು ಹೊಂದುತ್ತಿದ್ದಿತು. ನಿರ್ದೇಶಕನ ಮುಖದಲ್ಲಿ ಸ್ಥಿತಪ್ರಜ್ಞತೆ ಇರಲಿಲ್ಲ. ಭಾವಾವೇಶದಿಂದ ಹೊರಗುಳಿದು, ಮನಸ್ಸೂ ಕಲ್ಲಾಗದೇ ಇದ್ದಾಗ ಮಾತ್ರ ರಸಾನುಭವ ಸಾಧ್ಯವೇ ?

ನಮ್ಮ ಬದುಕಿನಲ್ಲಿ ಯಾವ ಘಟನೆ ದುಃಖ, ನೋವು, ಭಯ, ಕರುಣೆ ಉಂಟುಮಾಡಬಲ್ಲುದೋ ಅಂತಹ ಘಟನೆಗಳು ರಂಗದಲ್ಲಿ ನಡೆದಾಗ ಅವು ಆಯಾ ಭಾವನೆಗಳನ್ನು ಉಂಟುಮಾಡಿದರೂ ಮನದಾಳದಲ್ಲಿ, ನನ್ನೆದುರಿಗೆ ನಡೆಯುತ್ತಿರುವ ಘಟನೆ ಸತ್ಯವಲ್ಲ, ಸುಳ್ಳು, ಸುಳ್ಳನ್ನು ಸತ್ಯವೆಂಬಂತೆ ತೋರಲು ಅವನೆಷ್ಟು ಚೆನ್ನಾಗಿ ನಟಿಸುತ್ತಿದ್ದಾನೆ ಎಂಬ ವಿಚಾರವೊಂದು ನಡೆಯುತ್ತಿರುತ್ತದೆ. ಹೀಗಾಗಿ ದುಃಖ, ಭಯ, ಕರುಣೆ ಎಲ್ಲವೂ ರಸಾನಂದಕ್ಕೆ ಕಾರಣವಾಗುತ್ತವೆ. ಇದು ವಿಚಿತ್ರವಲ್ಲವೇ ?







ಸದಾರಮೆ ನಾಟಕದ ಕಳ್ಳನನ್ನು ನೋಡುತ್ತ, ಸುಳ್ಳು, ಸತ್ಯಗಳ ಪ್ರಜ್ಞೆ ಇಲ್ಲವಾದರೆ ಆತನನ್ನು ಹಿಡಿದು ಶಿಕ್ಷಿಸುತ್ತೇವೆ. ಇಲ್ಲವೇ, ಪೊಲೀಸರಿಗೆ ದೂರು ಕೊಡಲು ಮುಂದಾಗುತ್ತೇವೆ! ಪ್ರಜ್ಞೆ ಇದ್ದರೆ ಚೆನ್ನಾಗಿ ನಟಿಸಿದ ಎಂದು ಆನಂದಿಸುತ್ತೇವೆ. ಲೋಹಿತಾಶ್ವ ಹಾವು ಕಚ್ಚಿ ಮೃತನಾದಾಗ, ಭೀಮ ಕೌರವನ ತೊಡೆ ಮುರಿದು ಕೊಂದಾಗ – ಹೀಗೆ ಇಂಥ ಅನೇಕ ಭೀಕರ ಪ್ರಸಂಗಗಳಲ್ಲೂ ಮನಸ್ಸಿನಲ್ಲಿ ಈ ವಿಚಿತ್ರ ಕ್ರಿಯೆ ನಡೆಯುತ್ತಿರುತ್ತದೆ.

ನಟ ಒಂದು 'ಸ್ಥಿತಿ' ತಲುಪುವಂತೆ ಪ್ರೇಕ್ಷಕನೂ ಆ 'ಸ್ಥಿತಿ' ತಲುಪಬೇಕು. ನೃತ್ಯ, ಸಂಗೀತ, ಹಾಸ್ಯ, ವೀರ ರಸಗಳೆಲ್ಲ ಪ್ರೇಕ್ಷಕನ ಮನಸ್ಸು ಅರಳಿಸುವಂತೆ, ದುಃಖ ಕರುಣ ರಸಗಳೂ ನಿಮಗೆ ಅರಿವಿಲ್ಲದಂತೆ ಮನಸ್ಸು ಅರಳಿಸುವ, ಆನಂದ ನೀಡುವ ಕೆಲಸವನ್ನೇ ಮಾಡುತ್ತಿರುತ್ತವೆ.

ಸುಳ್ಳಿನಿಂದ ಪ್ರಾರಂಭವಾಗುವ ನಾಟಕ ಜಗತ್ತಿನ ಪರಮಸುಖವೆಂದು ಹೇಳುವ ಬ್ರಹ್ಮಾನಂದದ ಕಡೆಗೆ ನಮ್ಮನ್ನು ಒಯ್ಯುವುದೇ? ಕಳ್ಳನಾಗಿಯೂ ಕಳ್ಳನಾಗದೆ, ನಾನಾಗಿಯೂ ನಾನಲ್ಲದೆ ಕೆಲಕಾಲ ಇರಬಲ್ಲ 'ಸ್ಥಿತಿ' ನಟನಿಗಾದರೆ ಕಳ್ಳನನ್ನು ನೋಡುತ್ತ, ಕಳ್ಳನಲ್ಲನೆಂಬ ಪ್ರಜ್ಞೆ ಹೊಂದಿ. 'ಕಳ್ಳಾಟ', 'ಮಳ್ಳಾಟ', 'ಸುಳ್ಳಾಟ'ವನ್ನು ನೋಡಿ ಆನಂದಿಸುವ 'ಸ್ಥಿತಿ' ಪ್ರೇಕ್ಷಕನಿಗೂ ಸಿಗುವುದಲ್ಲವೇ ?

ಬಂದಗದ್ದೆ ರಾಧಾಕೃಷ್ಣ
ಕೆಳದಿ-೫೭೭ ೪೦೧

# ಬರದ ನಾಡಿನಲ್ಲೊಂದು ಭಗೀರಥ ಪ್ರಯತ್ನ



# ಮಳೆ ನೀರು ಸಂಗ್ರಹಣೆ



**ಬೇದ್ರೆ ಎನ್. ಮಂಜುನಾಥ**



*ಬೋರ್‌ವೆಲ್‌ಗೆ ಸುತ್ತ ಇಂಗುಗುಂಡಿ - ಕೊಳವೆಗೆ ಸೋಸು ಬಟ್ಟೆ ಸ್ಪಾಂಜ್*

**ಧ**ಗಧಗಿಸುತ್ತಿದೆ ಬೇಸಿಗೆ ! ನೀರಿಗಾಗಿ ಎಲ್ಲೆಲ್ಲೂ ಹಾಹಾಕಾರ ! ಕುಡಿಯುವ ನೀರಿಗೂ ಪರದಾಟ ! ಬಾಟಲಿ ನೀರಿಗೂ ಈಗ ಸಂಚಕಾರ ! ಬೆಂಗಳೂರಿನಲ್ಲಿ ನೀರಿಗೂ ರೇಷನ್ ಪದ್ಧತಿಯಂತೆ ಇನ್ನು! ಎಳನೀರೂ ತುಟ್ಟಿ! ತೋಯಿಸುವುದೆಂತು ತುಟಿ ?

**ಕಾರಣ ?**

ನಿರಂತರವಾಗಿ ಕಾಡು ಕಡಿಯುತ್ತಾ ಸಾಗಿರುವುದರಿಂದ ಮಳೆಯ ಪ್ರಮಾಣದಲ್ಲಿ ಆಗಿರುವ ಇಳಿಮುಖ. ಸತತವಾಗಿ ಕೊಳವೆ ಬಾವಿಗಳನ್ನು ಕೊರೆದು ನೀರನ್ನು ಬರಿದು ಮಾಡುತ್ತಿರುವುದರಿಂದ ಅಂತರ್ಜಲ ಪ್ರಮಾಣದಲ್ಲಿ ಆಗಿರುವ ಇಳಿಮುಖ, ಇರುವ ಕೆರೆಕಟ್ಟೆಗಳಲ್ಲಿ, ತೆರೆದ ಬಾವಿಗಳಲ್ಲಿ, ಜಲಾಶಯಗಳಲ್ಲಿ ಹೂಳು ತುಂಬಿ ನೀರಿನ ಸಂಗ್ರಹಣಾ ಸಾಮರ್ಥ್ಯದಲ್ಲಿ ಆಗಿರುವ ಇಳಿಮುಖ. ದಶಲಕ್ಷ ಕೊಳವೆ ಬಾವಿ ಯೋಜನೆಯ ಯಶಸ್ವೀ ಅನುಷ್ಠಾನ ಮತ್ತು ಇನ್ನೆಷ್ಟೋ ಲಕ್ಷ ಬಾವಿಗಳ ಕೊರೆತ, ಜೊತೆಗೆ ನಿರರ್ಗಳವಾಗಿ ನೀರನ್ನು ಹೀರಿ ಹೊರಹಾಕುವ ಪಂಪುಗಳು.... ಹೀಗೆ ಕಾರಣಗಳನ್ನು ಪಟ್ಟಿ ಮಾಡುತ್ತಾ ಕೂರುವ, ಸಮಿತಿಗಳನ್ನು ನೇಮಿಸಿ ಕೈತೊಳೆದುಕೊಳ್ಳುವ, ಪರಿಹಾರಕ್ಕೆ ಅಸಂಭಾವ್ಯ, ಅಸಂಬದ್ಧ ಉಪಾಯಗಳನ್ನು ಸೂಚಿಸುತ್ತಾ, ತೌಡು ಕುಟ್ಟುವ ಜನರ ಗುಂಪು ಒಂದೆಡೆಯಾದರೆ ಪ್ರಬಲವಾದ ಇಚ್ಛಾಶಕ್ತಿ ಕೊರತೆ ಇರುವ ರಾಜಕೀಯ ಪಕ್ಷಗಳ ಓಟಿನಾಟದ ಕಾಯಿಗಳಾಗಿರುವ ಜನರು ಇನ್ನೊಂದು ಕಡೆ. ಸಮಸ್ಯೆ ಸಮಸ್ಯೆಯಾಗಿಯೇ ಉಳಿದರಷ್ಟೇ ತಮ್ಮ ಬೇಳೆ ಬೇಯುತ್ತದೆ ಎಂಬ ಸಾರ್ವತ್ರಿಕ ಅಭಿಪ್ರಾಯಕ್ಕೆ ರತ್ನಗಂಬಳಿ !

**ಪರಿಹಾರ ?**

ನಮ್ಮ ನಿಮ್ಮ ಮನೆಗಳಲ್ಲಿಯೇ ಇದೆ. ನಮ್ಮ ನಿಮ್ಮ ಹೊಲಗಳಲ್ಲಿಯೇ ಇದೆ. ನಮ್ಮಲ್ಲಿ ಇಚ್ಛಾಶಕ್ತಿ ಜಾಗೃತವಾಗಬೇಕಿದೆ. ಅಷ್ಟೆ. ಈ ಬೇಸಿಗೆಯಲ್ಲಿ ನೀವು ಸಿದ್ಧರಾದರೆ ಬರುವ ಮಳೆಗಾಲದಲ್ಲಿ ಅದು ಕಾರ್ಯರೂಪಕ್ಕೆ ಬಂದು ಮುಂಬರುವ ಬೇಸಿಗೆಯ ವೇಳೆಗೆ ಒಂದಷ್ಟು ತಣ್ಣನೆಯ ಕುಡಿಯುವ ನೀರು, ಅಡುಗೆಗೆ ಶುದ್ಧ ನೀರು, ಹೊಲದಲ್ಲಿಯೂ ಕೇಳಿದಷ್ಟು ನೀರು ಸಿಗುವ ಸಾಧ್ಯತೆಗಳು ನೂರಕ್ಕೆ ನೂರು ! ಸಾಧಿಸಿ ತೋರಿಸಲಾಗಿರುವ ಸತ್ಯ ಇದು.

ನಮ್ಮ ನಿಮ್ಮೆಲ್ಲರ ಮನೆಯ ಮೇಲ್ಛಾವಣಿಗೆ ಒಂದು ಹರಿದು ಹೋಗುವ ಪೈಪ್ ಅಳವಡಿಸಿ. ಅದಕ್ಕೊಂದು ಶುದ್ಧೀಕರಣ ತೊಟ್ಟಿಯನ್ನು ಹೊಂದಿಸಿ ನೆಲದಲ್ಲಿನ ಟ್ಯಾಂಕ್‌ನಲ್ಲಿಯೋ ಸಂಪಿನಲ್ಲಿಯೋ ಸಂಗ್ರಹಿಸುವ ಕಾರ್ಯಕ್ಕೆ ನಾವೆಲ್ಲ ಮುಂದಾಗಬೇಕು. ಅದು ತಾರಸಿ ಮನೆಯೇ ಆಗಬೇಕಿಲ್ಲ, ಹಂಚಿನ ಮನೆಯಾದರೂ ಆದೀತು. ಮೊದಲ ಮಳೆ ಬೀಳುವ ಕಾಲಕ್ಕೆ ತಾರಸಿ ಅಥವಾ ಮೇಲ್ಛಾವಣಿಯನ್ನು ಸ್ವಚ್ಛಮಾಡಿಟ್ಟುಕೊಂಡರೆ ಸಾಕು. ಅದರ ಮೇಲೆ ಬೀಳುವ ಮಳೆಯ ನೀರು ಒಂದೆಡೆ ಸಂಗ್ರಹವಾಗಿ ಶುದ್ಧೀಕರಣ ತೊಟ್ಟಿಯಲ್ಲಿ ಸ್ವಚ್ಛವಾಗಿ ಸಂಪಿನಲ್ಲಿ ಸಂಗ್ರಹವಾಗುತ್ತದೆ. ಶಾಲೆಗಳು, ಕಛೇರಿಗಳ ಮೇಲ್ಛಾವಣಿಯ ನೀರನ್ನು ಹೀಗೇ ಸಂಗ್ರಹಿಸಿ ಬಳಸಬಹುದು. ಹೊಲದಲ್ಲಿ ಬಿದ್ದ ನೀರು ಅಲ್ಲೇ ಇಂಗುವ ಹಾಗೆ ಇಳಿಜಾರಿಗೆ ಅಡ್ಡಲಾಗಿ ತಡೆಗಳನ್ನು, ಇಂಗು ಗುಂಡಿಗಳನ್ನು ರಚಿಸಿದಲ್ಲಿ ಅಂತರ್ಜಲ ಪ್ರಮಾಣ ಹೆಚ್ಚುತ್ತದೆ.

**ಎಲ್ಲೆಲ್ಲಿ ಹಾಗೆ ಮಾಡಲಾಗಿದೆ ?**

ರಾಜ್ಯದ ಹಲವು ಕಡೆಗಳಲ್ಲಿ ಈ ರೀತಿಯ ಮಳೆನೀರಿನ ಮರುಬಳಕೆಯ ಪ್ರಯತ್ನಗಳು

**ಮಳೆ ನೀರು ಸಂಗ್ರಾಹಕರು ವಹಿಸಬೇಕಾದ ಮುನ್ನೆಚ್ಚರಿಕೆಗಳು**

೧. ಮೇಲ್ಛಾವಣಿಯನ್ನು ಆದಷ್ಟು ಶುಚಿಯಾಗಿರಿಸಿ. ಆಗಾಗ್ಗೆ ಕಸ ಹೊಡೆದು ಶುಚಿಯಾಗಿಡುವುದನ್ನು ಅಭ್ಯಾಸ ಮಾಡಿಕೊಳ್ಳಬೇಕು.

೨. ಕೀಟನಾಶಕಗಳು, ತುಕ್ಕು ಹಿಡಿಯುವ ಕಬ್ಬಿಣ, ಗೊಬ್ಬರ ಹಾಗೂ ಶುದ್ಧಿಕಾರಕಗಳನ್ನು ಮೇಲ್ಛಾವಣಿಯ ಮೇಲೆ ಶೇಖರಿಸಿ ಇಡಬಾರದು.

೩. ಮೇಲ್ಛಾವಣಿಯ ಮೇಲೆ ಮಲ-ಮೂತ್ರ ವಿಸರ್ಜನೆ ಮಾಡಬೇಡಿರಿ. ನಿಮ್ಮ ಸಾಕು ಪ್ರಾಣಿಗಳೂ ಆ ರೀತಿ ಮಾಡದಂತೆ ಎಚ್ಚರ ವಹಿಸಿ.

೪. ಶೇಖರಣಾ ವ್ಯವಸ್ಥೆಗಳ ಮೂಲಕ ಹೆಚ್ಚಿನ ನೀರು ಹರಿದುಹೋಗುವಂತೆ ಸೂಕ್ತವಾಗಿ ವಿನ್ಯಾಸಗೊಳಿಸಬೇಕು. ಅನಿರೀಕ್ಷಿತವಾಗಿ ಹೆಚ್ಚಿನ ಮಳೆ ಬಂದಾಗ ಹೆಚ್ಚಿನ ನೀರು ಹರಿದುಹೋಗಲು ಅವಕಾಶವಿರಬೇಕು.

೫. ಶೇಖರಣಾ ವ್ಯವಸ್ಥೆಗಳು ಮಲಿನಗೊಳ್ಳದಂತೆ ನೋಡಿಕೊಳ್ಳಿರಿ.

೬. ರಾಸಾಯನಿಕವಾಗಿ ಮಲಿನಗೊಂಡ ನೀರನ್ನು ಭೂತಳದ ನೀರನ್ನು ಪುನರ್ ಚಾಲನೆಗೊಳಿಸಲು ಉಪಯೋಗಿಸಬಾರದು.

ಆಗುತ್ತಲೇ ಇವೆ. ಅದಕ್ಕೆಂದೇ ಮಳೆನೀರು ಮಂಡಳಿಗಳು, ಮಳೆ ಕೊಯ್ಲು ಮಂಡಳಿಗಳು ಶ್ರಮಿಸುತ್ತಿವೆ. ದಕ್ಷಿಣ ಕನ್ನಡದ ಮಂದಿ ತಮ್ಮ ಹೊಲಗದ್ದೆಗಳಲ್ಲಿ ಊರಿನ ಹೊರಗೆ ಅಡ್ಡಗಟ್ಟೆಗಳನ್ನು ನಿರ್ಮಿಸಿ ನೀರು ಇಂಗಿಸಿ ಅಂತರ್ಜಲ ಪ್ರಮಾಣವನ್ನು ಹೆಚ್ಚಿಸಿಕೊಂಡಿದ್ದಾರೆ. ತಮ್ಮ ಹೊಲಗಳಲ್ಲಿನ ಹಳೆಯ ಹುತ್ತಗಳಿಗೆ ನೀರುಣಿಸಿ ತನ್ಮೂಲಕ ನೆಲಾಳಕ್ಕೆ ನೀರು ಹರಿಸಿ ಅಂತರ್ಜಲವನ್ನು ಹೆಚ್ಚಿಸುವ ಹೊಸ ಪ್ರಯತ್ನಗಳೂ ಜರುಗಿವೆ. ಬಯಲು ಸೀಮೆ ಅಭಿವೃದ್ಧಿ ಮಂಡಳಿಯ ಪ್ರಯತ್ನದಿಂದಾಗಿ ಬರದ ನಾಡಿನಲ್ಲಿ ಕೂಡ ಚೆಕ್‌ಡ್ಯಾಂಗಳು ನಿರ್ಮಾಣವಾಗಿ ಹಸಿರು ನಳನಳಿಸುವಂತೆ ಮಾಡಲಾಗುತ್ತಿದೆ. ಹೊಸದಾಗಿ ಮನೆ ಕಟ್ಟುವವರಿಗೆ ಪರವಾನಗಿ ನೀಡುವ ಮೊದಲು ಆ ಮನೆಗೆ ಮಳೆ ನೀರಿನ ಸಂಗ್ರಹಣೆಗೆ ಅಗತ್ಯವಾದ ವ್ಯವಸ್ಥೆ ರೂಪಿಸಿಕೊಳ್ಳುವಂತೆ ನಿರ್ದೇಶನ ನೀಡಲಾಗುತ್ತಿದೆ. ಇಲ್ಲದಿದ್ದರೆ ಮನೆ ಕಟ್ಟಲು ಲೈಸೆನ್ಸ್ ನೀಡುವುದಿಲ್ಲವೆಂಬುದಾಗಿ ಚೆನ್ನೈನ ಮಹಾನಗರಪಾಲಿಕೆ ಠರಾವು ಮಾಡಿದ್ದರಿಂದ ಅಲ್ಲಿನ ಸುಮಾರು ೪ ಲಕ್ಷಕ್ಕೂ ಹೆಚ್ಚು ಮನೆಗಳಲ್ಲಿ ಈ ಮಳೆ ಕೊಯ್ಲು ತಂತ್ರಜ್ಞಾನ ಅಳವಡಿಕೆ ಆಗಿದೆ. ಬೆಂಗಳೂರಿನಲ್ಲಿ ಸ್ವಯಂಪ್ರೇರಣೆಯಿಂದ ಹತ್ತಾರು ಮಂದಿ ಈ ಪ್ರಯತ್ನ ಮಾಡುತ್ತಿದ್ದು ರಾಜಕೀಯ ಇಚ್ಛಾಶಕ್ತಿ ಪ್ರಬಲವಾದಲ್ಲಿ ಮಾತ್ರ ಪ್ರತಿ ಮನೆಗೂ ಈ ವ್ಯವಸ್ಥೆಯ ಅಳವಡಿಕೆ ಯಶಸ್ವಿಯಾಗಿ ಆಗುತ್ತದೆ.



ಬೋರ್‌ವೆಲ್‌ಗೆ ನೀರು ಮರುಪೂರಣ - ಇಂಗುಗುಂಡಿ ನಿರ್ಮಾಣ

## ಬರದ ನಾಡಿನಲ್ಲೊಬ್ಬ ಭಗೀರಥ

ಪದೇ ಪದೇ ಬರಗಾಲಕ್ಕೆ ತುತ್ತಾಗುತ್ತಿರುವ ಚಿತ್ರದುರ್ಗ ಜಿಲ್ಲೆ ಕರ್ನಾಟಕದಲ್ಲಿ ಅತಿ ಕಡಿಮೆ ಮಳೆ ಬೀಳುವ ಜಿಲ್ಲೆಯಾಗಿದ್ದು ಇಲ್ಲಿ ಕಳೆದ ಎರಡು ದಶಕಗಳಲ್ಲಿ ಸಹಸ್ರಾರು ಕೊಳವೆ ಬಾವಿಗಳನ್ನು ತೋಡಿ ನೀರಾವರಿಗೆ, ಕುಡಿಯುವ ನೀರಿಗೆ ವ್ಯವಸ್ಥೆ ಮಾಡಲಾಗಿದೆ. ದುರದೃಷ್ಟವಶಾತ್ ಇವುಗಳಲ್ಲಿ ಬಹುತೇಕ ಕೊಳವೆ ಬಾವಿಗಳು ಬತ್ತಿವೆ. ಅಳಿದುಳಿದ ಬಾವಿಗಳಲ್ಲಿ ನೀರಿನ ಪ್ರಮಾಣ ತೀರಾ ಕನಿಷ್ಠ ಮಟ್ಟಕ್ಕೆ ಕುಸಿದಿದೆ. ಕುಡಿಯುವ ನೀರಿಗೆ ದುರ್ಗದ ಜನ ವಾಣಿವಿಲಾಸ ಜಲಾಶಯದ ನೀರನ್ನೇ ನೆಚ್ಚಿಕೊಂಡಿದ್ದಾರೆ. ಜಲಾಶಯದಲ್ಲಿ ಹೂಳು ತುಂಬಿರುವುದರಿಂದ ಹೆಚ್ಚು ನೀರು ಒದಗುತ್ತಿಲ್ಲ. ಬೇಸಗೆಯಲ್ಲಿ ನೀರಿನ ಬವಣೆ ಅನುಭವಿಸಿಯೇ ತೀರಬೇಕು ಇಲ್ಲಿ.

ಸಂತೋಷದ ಸಂಗತಿಯೆಂದರೆ ಕಳೆದ ಕೆಲವು ವರ್ಷಗಳ ಸತತ ಪ್ರಯತ್ನದಿಂದ ದುರ್ಗದ ಕೆಲವೇ ಕೆಲವು ಮನೆಗಳಲ್ಲಿ, ಹಾಗೂ ರೈತರ ಹೊಲಗಳಲ್ಲಿ ಈ ನೀರಿನ ಸಮಸ್ಯೆ ಕೊಂಚಮಟ್ಟಿಗೆ ತಗ್ಗಿದೆ. ಮುಂದಾಲೋಚನೆಯ ಈ ಜನ ಮಾಡಿದ್ದು ಮಳೆ ನೀರಿನ ಸಂಗ್ರಹಣೆಯ ಕೆಲಸ. ಮನೆಯ ಮೇಲ್ಛಾವಣಿಯ ನೀರನ್ನು ಸಂಗ್ರಹ ಮಾಡಿಟ್ಟು ಬಳಸಿದ್ದು. ಹೆಚ್ಚಿನ ನೀರನ್ನು ತಮ್ಮ ಬತ್ತಿದ/ಬತ್ತುತ್ತಿರುವ ಕೊಳವೆ ಬಾವಿಗೆ ಹರಿಸಿದ್ದು.

ಪತ್ರಿಕೆಗಳಲ್ಲಿ ಆಗಾಗ್ಗೆ ಬರುತ್ತಿದ್ದ ಮಳೆನೀರು ಸಂಗ್ರಹಣೆ ಬಗೆಗಿನ ವರದಿಗಳನ್ನು ಓದುತ್ತಿದ್ದ ದುರ್ಗದ ಜನರಿಗೆ ನಾವೂ ಹೀಗೆ ಮಾಡಬಹುದು ಎಂಬ ಅರಿವು ಮೂಡಿಸಿ, ಮಳೆ ಕೊಯ್ಲು ತಂತ್ರಜ್ಞಾನವನ್ನು ಅಳವಡಿಸಿ, ಬತ್ತಿದ / ಬತ್ತುತ್ತಿರುವ ಕೊಳವೆ ಬಾವಿಗಳಿಗೆ ಮಳೆ ನೀರಿನ ಮರುಪೂರಣ ವ್ಯವಸ್ಥೆ ಕಲ್ಪಿಸುವ ಅಭಿಯಾನವನ್ನು ಹಮ್ಮಿಕೊಂಡಿರುವ ಚಿತ್ರದುರ್ಗದ ಮಳೆನೀರು ಮಂಡಳಿಯ ಸಂಸ್ಥಾಪಕ, ಭೂಗರ್ಭಶಾಸ್ತ್ರಜ್ಞ ಹಾಗೂ ಅಂತರ್ಜಲ ಸಂಶೋಧಕ ಶ್ರೀ ಎನ್. ಜೆ. ದೇವರಾಜ ರೆಡ್ಡಿ ಕಳೆದ ಒಂದು ದಶಕದಲ್ಲಿ ಸುಮಾರು ೨೫೦ಕ್ಕೂ ಹೆಚ್ಚು ಬತ್ತಿದ ಬಾವಿಗಳಿಗೆ ಜೀವಜಲ ತುಂಬಿಸಿದ್ದಾರೆ. ನೂರಾರು ಮನೆಗಳು, ಶಾಲೆಗಳು, ಕಛೇರಿಗಳಿಗೆ ಮೇಲ್ಛಾವಣಿಯ ನೀರನ್ನು ಸಂಗ್ರಹಿಸುವ ತಂತ್ರಜ್ಞಾನವನ್ನು ಅಳವಡಿಸಿಕೊಳ್ಳಲು ಸಹಾಯ ಮಾಡಿದ್ದಾರೆ ಮತ್ತು ಅದಕ್ಕೆ ಬೇಕಾದ ಶುದ್ಧೀಕರಣ ತೊಟ್ಟಿಯನ್ನು ಅತ್ಯಂತ ಕಡಿಮೆ ಬೆಲೆಯಲ್ಲಿ ನಿರ್ಮಿಸಿಕೊಟ್ಟಿದ್ದಾರೆ. ಶಾಲೆ, ಕಾಲೇಜು, ವಿಜ್ಞಾನ ಸಂಘ, ಸಾಂಸ್ಕೃತಿಕ ವೇದಿಕೆಗಳು, ಎನ್.ಎಸ್.ಎಸ್. ಶಿಬಿರಗಳು, ವಿಶೇಷ ಸಭೆ ಸಮಾರಂಭಗಳು ಹೀಗೆ ಎಲ್ಲೆಡೆ ತಾವು ನಿರ್ಮಿಸಿದ ಸರಳ ಮಳೆ ಕೊಯ್ಲು ವಿಧಾನದ ಪ್ರಾತ್ಯಕ್ಷಿಕೆ ಏರ್ಪಡಿಸಿ, ಉಪನ್ಯಾಸ ಕೊಟ್ಟು ಜನಜಾಗೃತಿ ಮೂಡಿಸಿದ್ದಾರೆ ಈ ಬರದ ನಾಡಿನ ಭಗೀರಥ ಶ್ರೀ ದೇವರಾಜ ರೆಡ್ಡಿ.

ರಾಷ್ಟ್ರನಾಯಕ ಶ್ರೀಮಾನ್ ನಿಜಲಿಂಗಪ್ಪನವರ ಊರಾದ ಚಿತ್ರದುರ್ಗ ತಾಲ್ಲೂಕು ದೊಡ್ಡ ಸಿದ್ದವ್ವನ ಹಳ್ಳಿಯಲ್ಲಿ, ರೈತ ಕುಟುಂಬದಲ್ಲಿ, ಹುಟ್ಟಿ ಬೆಳೆದ ಶ್ರೀ ದೇವರಾಜ ರೆಡ್ಡಿ ಚಿಕ್ಕಂದಿನಿಂದ ಹೊಲಗದ್ದೆಗಳಲ್ಲಿ ನೀರಿನ ಬಳಕೆಯನ್ನು ಕಂಡವರು. ವರ್ಷ ವರ್ಷ ತಮ್ಮ ಬಾವಿಯಲ್ಲಿ ನೀರಿನ ಪ್ರಮಾಣ ಇಳಿಮುಖವಾಗುತ್ತಿರುವುದನ್ನು ಗಮನಿಸಿದವರು, ಬರದ ಶಾಪವನ್ನು ಅನುಭವಿಸಿದವರು. ಮುಂದೆ ಮೈಸೂರು ವಿಶ್ವವಿದ್ಯಾಲಯದಿಂದ ಭೂಗರ್ಭಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿಯಲ್ಲಿ ರ‍್ಯಾಂಕ್ ಪಡೆದುಬಂದ ನಂತರ ದುರ್ಗದಲ್ಲಿಯೇ ಅಂತರ್ಜಲ ತಜ್ಞರಾಗಿ ಖಾಸಗಿ ಸೇವೆ ಆರಂಭಿಸಿ ಸರ್ಕಾರದ ವಿವಿಧ ಇಲಾಖೆಗಳ ಸಹಯೋಗದಲ್ಲಿ ಗಂಗಾಕಲ್ಯಾಣ ಯೋಜನೆಯ ಯಶಸ್ವೀ ಅನುಷ್ಠಾನಕ್ಕೆ ಶ್ರಮಿಸಿದವರು. ನೂರಾರು ಕೊಳವೆ ಬಾವಿಗಳಿಗೆ ಪಾಯಿಂಟ್ ತೋರಿಸಿದವರು.

ಜಿಲ್ಲೆಯ ಒಟ್ಟು ಅಂತರ್ಜಲದ ಪ್ರಮಾಣವನ್ನು ಕುರಿತು ಹೆಚ್ಚಿನ ಅಧ್ಯಯನ ಕೈಗೊಂಡ ಶ್ರೀ ರೆಡ್ಡಿಯವರಿಗೆ ಈ ಕೊಳವೆ ಬಾವಿಗಳ ನೀರಿನ ಮಟ್ಟದ ಇಳಿಮುಖ ಮತ್ತು ನೀರಿನ ಬಳಕೆಯ ಪ್ರಮಾಣ ಹೆಚ್ಚಿದಂತೆಲ್ಲಾ ಬಾವಿಗಳು ಹೆಚ್ಚು ಹೆಚ್ಚು ಆಳವಾಗಿ ಕೊರೆಯಲ್ಪಟ್ಟಾಗ ಅವುಗಳಲ್ಲಿನ ಖನಿಜಗಳ ಪ್ರಮಾಣ ಇವೆಲ್ಲವನ್ನೂ ಅಧ್ಯಯನ ಮಾಡಿ ಪರಿಸ್ಥಿತಿ ಕೈಮೀರುವ ಮುನ್ನವೇ ಪರಿಹಾರ ಕಾರ್ಯ ಕೈಗೆತ್ತಿಕೊಳ್ಳಲು ಆಲೋಚಿಸಿ ತಮ್ಮದೇ ಆದ ಮಳೆ ನೀರು ಮಂಡಳಿ ಆರಂಭಿಸಿ ಮಳೆ ನೀರಿನ ಸಂಗ್ರಹಣಾ ಅಭಿಯಾನವನ್ನು ಆರಂಭಿಸಿದರು.

ಸತತ ಪ್ರಯತ್ನದಿಂದ ತಮ್ಮ ಸ್ನೇಹಿತರು, ಹಿತೈಷಿಗಳೆಲ್ಲರ ಮನೆಗಳಿಗೆ ಮಳೆ ನೀರಿನ ಸಂಗ್ರಹಣಾ ತಂತ್ರಜ್ಞಾನವನ್ನು ಅಳವಡಿಸಿದ್ದೇ ಅಲ್ಲದೆ ಹೊಲಗದ್ದೆಗಳಲ್ಲಿ ಇಂಗು ಗುಂಡಿಗಳನ್ನು ಅಡ್ಡಗಟ್ಟೆಗಳನ್ನು ನಿರ್ಮಿಸಿ ಬಿದ್ದ ಮಳೆಯ ನೀರು ಅಲ್ಲಿಯೇ ಇಂಗಿಸಿ ಅಂತರ್ಜಲ ಪ್ರಮಾಣ ಗಣನೀಯವಾಗಿ ಹೆಚ್ಚುವಂತೆ ಮಾಡಿದ್ದಾರೆ. ರಾಜ್ಯದ ಪ್ರಮುಖ ಪತ್ರಿಕೆಗಳಲ್ಲಿ ಈ ಬಗ್ಗೆ ಜಾಗೃತಿ ಮೂಡಿಸುವ ಹಲವು ಲೇಖನಗಳು ಬಂದಿವೆ. ಆಕಾಶವಾಣಿ ಹಾಗೂ ಟಿ.ವಿ.ಯ ಹಲವು ಛಾನಲ್‌ಗಳಲ್ಲಿ ಈ ಬಗ್ಗೆ ವಿವರಗಳನ್ನು, ಪ್ರಾತ್ಯಕ್ಷಿಕೆಗಳನ್ನು ನಡೆಸಿಕೊಟ್ಟಿದ್ದಾರೆ. ಈ ಎಲ್ಲಾ ಚಟುವಟಿಕೆಗಳ ಪರಿಣಾಮವಾಗಿ ದುರ್ಗದ ಜನರಿಗೆ ಮಳೆನೀರಿನ ಸಂಗ್ರಹಣೆಯ ಸತ್ಯ ಅರಿವಾಗುತ್ತಿದೆ. ಹೆಚ್ಚು ಹೆಚ್ಚು ಜನ ಇತ್ತ ಆಕರ್ಷಿತರಾಗುತ್ತಿದ್ದಾರೆ. ಶಾಲೆಗಳು, ಸರ್ಕಾರಿ ಕಛೇರಿಗಳು ಕೂಡ ತಮ್ಮ ಬೋರ್‌ವೆಲ್‌ಗಳಿಗೆ ಈ ಮರುಪೂರಣ ವ್ಯವಸ್ಥೆಯನ್ನು ಅಳವಡಿಸಿ ಕೊಳ್ಳುವತ್ತ ಒಲವು ತೋರುತ್ತಿವೆ. ಹತ್ತಾರು ಕಡೆಗಳಲ್ಲಿ ಇವುಗಳನ್ನು ಯಶಸ್ವಿಯಾಗಿ ಅಳವಡಿಸಿಕೊಳ್ಳಲಾಗಿದೆ.

## ನೀರಿನ ನಿರ್ವಹಣೆ

ಚಿತ್ರದುರ್ಗ ಮತ್ತು ದಾವಣಗೆರೆ ನಗರಗಳಲ್ಲಿ ವಾರ್ಷಿಕ ಸುಮಾರು ೬೦೦ ಮಿ.ಮೀ. ಮಳೆ ಆಗುತ್ತದೆ. ಈ ಊರುಗಳಲ್ಲಿ ಸುಮಾರು ೮ರಿಂದ ೧೦ ಚದರ ಮನೆಯ ಮೇಲ್ಛಾವಣಿಯ ಮೇಲೆ ಒಂದು ಮಳೆಗಾಲದಲ್ಲಿ ಬೀಳುವ ನೀರನ್ನು ವ್ಯವಸ್ಥಿತವಾಗಿ ಸಂಗ್ರಹಿಸಿದರೆ ೪೦ರಿಂದ ೬೦ ಸಾವಿರ ಲೀಟರ್‌ಗಳಷ್ಟು ನೀರನ್ನು ಸಂಗ್ರಹಿಸಬಹುದು. ಮನೆಗಳಲ್ಲಿ ನಿರ್ಮಿಸುವ ಸಂಪಿನಲ್ಲಿ ಇಷ್ಟೊಂದು ನೀರು ಸಂಗ್ರಹಿಸಲು ಸಾಧ್ಯವಾಗದು. ಇದಕ್ಕಾಗಿ ಪ್ರತ್ಯೇಕ ತೊಟ್ಟಿ ನಿರ್ಮಿಸಿದರೆ ಅನುಕೂಲ. ಇಲ್ಲದಿದ್ದರೆ ಇರುವಷ್ಟು ಜಾಗದಲ್ಲಿಯೇ ನೀರನ್ನು ಸಂಗ್ರಹಿಸಿ ಬಳಸಬಹುದು. ಇತ್ತೀಚೆಗೆ ಮನೆಗಳನ್ನು ಕಟ್ಟುವಾಗ ಯಾವುದಾದರೂ ಒಂದು ರೂಮಿನ ಭಾಗದಲ್ಲಿ ನೆಲದಲ್ಲಿ ಟ್ಯಾಂಕ್ ಕಟ್ಟಿಸಿ

ಅದರ ಮೇಲೆ ರೂಮನ್ನು ವಿನ್ಯಾಸಗೊಳಿಸಲಾಗುತ್ತಿದೆ. ಇದರಿಂದ ೨೦ ಸಾವಿರ ಲೀಟರ್‌ಗೂ ಹೆಚ್ಚು ನೀರು ಸಂಗ್ರಹಿಸಲು ಸಾಧ್ಯವಾಗುತ್ತಿದೆ. ತಿಪಟೂರು ತಾಲ್ಲೂಕಿನ ಬೈಫ್ ಸಂಘಟನೆಯವರು ೬೫ ಸಾವಿರ ಲೀಟರ್ ಸಾಮರ್ಥ್ಯದ ಇಂತಹ ಬೃಹತ್ ಟ್ಯಾಂಕ್ ನಿರ್ಮಿಸಿದ್ದಾರೆ. ಚಿತ್ರದುರ್ಗದ ಡಾ. ಬಸವರಾಜ್ ಅವರು ಮನೆಯ ಮೇಲ್ಛಾವಣಿ ನೀರನ್ನು ಕಳೆದ ಮಳೆಗಾಲದಲ್ಲಿ ಕೇವಲ ೪೦%ರಷ್ಟು ನೀರು ಸಂಗ್ರಹಿಸಿದ್ದರೂ ಈ ಬೇಸಿಗೆಯಲ್ಲಿ ಇನ್ನೂ ಸುಮಾರು ೧೫ ಸಾವಿರ ಲೀಟರ್‌ಗಳಷ್ಟು ಉಳಿದಿದೆಯಂತೆ! ಮೆದೆಹಳ್ಳಿ ರಸ್ತೆಯಲ್ಲಿರುವ ಶ್ರೀ ರಾಮತೀರ್ಥ ಆಶ್ರಮದಲ್ಲಿ ಲಭ್ಯವಿದ್ದಾಗ ಅಡುಗೆ, ಊಟ, ಕುಡಿಯಲು ಹೀಗೆ ಎಲ್ಲದಕ್ಕೂ ಮಳೆಯ ನೀರೇ ಬಳಕೆಯಾಗುತ್ತಿದೆ !

**ಒಬ್ಬ ವ್ಯಕ್ತಿಗೆ ಬೇಕಾಗುವ ಕನಿಷ್ಠ ನೀರಿನ ಪ್ರಮಾಣ ಹೀಗಿದೆ**

| ಬಳಕೆ | ಪ್ರತಿಯೊಬ್ಬರಿಗೆ / ಲೀಟರ್‌ಗಳಲ್ಲಿ |
|---|---|
| ೧. ಕುಡಿಯಲು | ೩ |
| ೨. ಅಡುಗೆಗೆ | ೪ |
| ೩. ಸ್ನಾನಕ್ಕೆ | ೨೦ |
| ೪. ಶೌಚಾಲಯಕ್ಕೆ | ೪೦ |
| ೫. ಬಟ್ಟೆ ಒಗೆಯುವುದಕ್ಕೆ | ೨೫ |
| ೬. ಪಾತ್ರೆ ತೊಳೆಯುವುದಕ್ಕೆ | ೨೦ |
| ೭. ಇತರೆ | ೨೩ |
| **ಒಟ್ಟು** | ೧೩೫ |

ಇದರಂತೆ ನಾಲ್ಕು ಜನಕ್ಕೆ ಸುಮಾರು ೫೪೦ ಲೀಟರ್ ನೀರು ಬೇಕಾಗುತ್ತದೆ. ಈ ಸಂಗ್ರಹಣೆಯ ನೀರು ಈ ಲೆಕ್ಕದಲ್ಲಿ ೩೮ರಿಂದ ೪೦ ದಿನಗಳಿಗೆ ಒದಗುತ್ತದೆ. ಹೆಚ್ಚಾದ ನೀರನ್ನು ಹತ್ತಿರದ ಬೋರ್‌ವೆಲ್‌ಗಳಿಗೆ ಮರುಪೂರಣಕ್ಕೆ ಬಳಸಿದರೆ ಹೆಚ್ಚು ಲಾಭ ಕೂಡ.

**ಮರುಪೂರಣದಿಂದ ಲಾಭ**

ಸಾಮಾನ್ಯವಾಗಿ ಕೊಳವೆ ಬಾವಿಗಳಲ್ಲಿನ ನೀರಿನಲ್ಲಿ ಹೆಚ್ಚಿನ ಪ್ರಮಾಣದ ಖನಿಜಾಂಶಗಳು / ಲವಣಾಂಶಗಳು ಇರುತ್ತವೆ. ಕುಡಿಯುವ ನೀರಿನಲ್ಲಿ ಎಷ್ಟು ಪ್ರಮಾಣದಲ್ಲಿದ್ದರೆ ಸಾಕು ಎಂಬ ಕೋಷ್ಟಕ ನೋಡಿ :

| ಲವಣಾಂಶಗಳ ಸಾಂದ್ರತೆ | ಗರಿಷ್ಠ ಮಿತಿ | ಗರಿಷ್ಠ ಬಳಸ ಬಹುದಾದ ಮಿತಿ |
|---|---|---|
| ೧. ಪಿ. ಹೆಚ್. ಸಾರತೆ | ೭.೦ | ೬.೫ರಿಂದ ೯.೨ |
| ೨. ಕರಗಿರುವ ಘನ ಪದಾರ್ಥ | ೫೦೦* | ೧೫೦೦* |
| ೩. ಕ್ಯಾಲ್ಸಿಯಂ | ೭.೫ | ೨೦೦ |
| ೪. ಮೆಗ್ನಿಷಿಯಂ | ೩೦ | ೧೫೦ |
| ೫. ಸಲ್ಫೇಟ್‌ಗಳು | ೨೦೦ | ೪೦೦ |
| ೬. ಕ್ಲೋರೈಡ್ | ೨೦೦ | ೬೦೦ |
| ೭. ಕಬ್ಬಿಣಾಂಶ | ೦.೧ | ೧.೦ |
| ೮. ಗಡಸುತನ | ೧೦೦ | ೫೦೦ |

* ದಶಲಕ್ಷ ಭಾಗದಲ್ಲಿರಬಹುದಾದ ಪ್ರಮಾಣ

ಈ ಲವಣಾಂಶಗಳು ಒಂದೇ ಆಳದಲ್ಲಿನ ನೀರಿನಲ್ಲಿ ಒಂದೇ ತೆರನಾಗಿರುವುದಿಲ್ಲ. ಆಳ ಹೆಚ್ಚಿದಂತೆಲ್ಲಾ ಲವಣಾಂಶ ಪ್ರಮಾಣ ಹೆಚ್ಚುತ್ತಾ ಹೋಗುತ್ತದೆ. ಇತ್ತೀಚೆಗೆ ೪೦೦ ಅಡಿಗಳಿಗಿಂತಲೂ ಹೆಚ್ಚು ಆಳ ಕೊರೆಯುತ್ತಾ ಹೋಗುತ್ತಿರುವುದರಿಂದ ಹೊಸ ಹೊಸ ಖನಿಜಗಳು ಕೊಳವೆ ಬಾವಿಯ ನೀರಿನಲ್ಲಿ ಗೋಚರಿಸುತ್ತಿದ್ದು ಆರ್ಸೆನಿಕ್ ಎಂಬ ವಿಷವೂ ಗೋಚರವಾಗಿರುವುದು ಆತಂಕದ ಸಂಗತಿಯಾಗಿದೆ ಎನ್ನುತ್ತಾರೆ ಶ್ರೀ ದೇವರಾಜ ರೆಡ್ಡಿ.

ಸಾಮಾನ್ಯವಾಗಿ ನೆಲದಿಂದ ೧೦ರಿಂದ ೨೦ ಅಡಿಗಳವರೆಗೆ ಸಾಯಿಲ್ ಪ್ರೊಫೈಲ್ ಎಂದೂ, ನಂತರ ೮೦ ಅಡಿಗಳವರೆಗೆ ವೆದರ್ಡ್ ಜೋನ್ ಎಂದೂ, ಅಲ್ಲಿಂದ ಮುಂದೆ ೩೦೦ ಅಡಿಗಳವರೆಗೆ ಫ್ರಾಕ್ಚರ್ಡ್ ಜೋನ್ ಎಂದೂ ಅನಂತರ ಬರುವ ಭಾಗವನ್ನು ಮ್ಯಾಸಿವ್ ರಾಕ್ ವಿತ್ ಷಿಯರ್ಸ್ ಎಂದೂ ನೆಲದ ಪದರುಗಳನ್ನು ವಿಭಾಗಿಸಲಾಗಿದೆ. ಇದರಲ್ಲಿ ಮೇಲುಭಾಗದಲ್ಲಿ ಸಿಗುವ ನೀರು ಸಿಹಿಯಾಗಿದ್ದು ಕುಡಿಯಲು ಯೋಗ್ಯವಾಗಿದೆ. ಆಳ ಹೆಚ್ಚಿದಂತೆಲ್ಲಾ ಲವಣಾಂಶಗಳ ಪ್ರಮಾಣ ಹೆಚ್ಚಾಗಿ, ಕುಡಿಯಲು ಬರುವುದಿಲ್ಲ.

ಕೊಳವೆ ಬಾವಿಗಳಿಗೆ ಮಳೆ ನೀರನ್ನು ಮರುಪೂರಣ ಮಾಡುವುದರಿಂದ ಗಡಸು ನೀರಿನೊಂದಿಗೆ ಶುದ್ಧ ನೀರು ಬೆರೆತು ಲವಣಗಳ ಸಾಂದ್ರತೆ ಕಡಿಮೆಯಾಗುತ್ತದೆ. ಕನಿಷ್ಠ ವೆಂದರೂ ೨೫೦ರಿಂದ ೪೦೦ ಅಡಿಗಳವರೆಗೆ ಕೊಳವೆಯನ್ನು ಕೊರೆದಿರುವುದರಿಂದ ಮನೆಯ ಮೇಲೆ ಮತ್ತು ನಿವೇಶನದ ಸುತ್ತಲೂ ಬೀಳುವ ಒಟ್ಟು ಮಳೆಯನ್ನು ಪೈಪುಗಳ ಮೂಲಕ ಸೋಸುತೊಟ್ಟಿಗೆ ತಂದು ಅಲ್ಲಿಂದ ಶುದ್ಧೀಕರಿಸಿದ ನೀರನ್ನು ಕೊಳವೆ ಬಾವಿಗೆ ಹರಿಸುವುದರಿಂದ ನೀರಿನ ಸಂಗ್ರಹಣೆಗೆ ಪ್ರತ್ಯೇಕವಾಗಿ ತೊಟ್ಟಿ ತೆಗೆಸುವ ಪ್ರಮೇಯವೂ ಇರದು. ಅಲ್ಲದೆ ಮರುಪೂರಣದಿಂದಾಗಿ ಕೊಳವೆ ಬಾವಿಗಳ ನೀರಿನ ಮಟ್ಟ ಜಾಸ್ತಿಯಾಗುವುದರಿಂದ ನೆಲದಾಳದಿಂದ ನೀರೆತ್ತುವ ಪಂಪುಗಳಿಗೆ ಬಳಸುವ ವಿದ್ಯುಚ್ಛಕ್ತಿಯಲ್ಲಿಯೂ ಉಳಿತಾಯವಾಗುತ್ತದೆ. ಬೇರೆ ಕಡೆಗಳಲ್ಲಿನ ಕೊಳವೆ ಬಾವಿಗಳಿಗಿಂತ ಹೀಗೆ ಮಳೆ ನೀರಿನಿಂದ ಮರುಪೂರಣಗೊಂಡ ಬಾವಿಗಳಲ್ಲಿ ಹೆಚ್ಚು ಕಾಲ ನೀರು ಇರುತ್ತದೆ.

ಇದೇ ತಂತ್ರಜ್ಞಾನವನ್ನು ತೆರೆದ ಬಾವಿಗಳಿಗೂ ಬಳಸಿಕೊಳ್ಳಲಾಗುತ್ತಿದೆ. ಹೊಲದಲ್ಲಿ ಬಿದ್ದ ಮಳೆಯ ನೀರು ಹರಿದು ಹೊರ ಹೋಗದಂತೆ ಇಂಗು ಗುಂಡಿಗಳನ್ನು ಅಲ್ಲಲ್ಲಿ ನಿರ್ಮಿಸಿ ಸಂಗ್ರಹಿಸಿದ್ದರಿಂದ ಹೊಲಗಳಲ್ಲಿನ ಬಾವಿ/ಕೊಳವೆ ಬಾವಿಗಳಲ್ಲಿನ ನೀರಿನಮಟ್ಟ ಸಾಕಷ್ಟು ಪ್ರಮಾಣದಲ್ಲಿ ಏರಿದ ನೂರಾರು ಉದಾಹರಣೆಗಳಿವೆ. ಶ್ರೀ ದೇವರಾಜ ರೆಡ್ಡಿಯವರು ಚಿತ್ರದುರ್ಗ, ಬಳ್ಳಾರಿ, ಶಿವಮೊಗ್ಗ, ಚಿಕ್ಕಮಗಳೂರು, ತುಮಕೂರು ಜಿಲ್ಲೆಗಳಲ್ಲಿ ಈ ರೀತಿಯ ಇಂಗು ಗುಂಡಿಗಳನ್ನು ನಿರ್ಮಿಸಿ ಮರುಪೂರಣ ವ್ಯವಸ್ಥೆಗೆ ಮಾರ್ಗದರ್ಶನ ನೀಡಿ ನೂರಾರು ಎಕರೆ ಹೊಲ ಗದ್ದೆಗಳಿಗೆ ಹಸಿರು ಉಳಿಸಲು ಬಯಲು ಸೀಮೆಯ ನೀರಿನ ಜೋಗಿಯಾಗಿದ್ದಾರೆ.

ಚಿತ್ರದುರ್ಗ ತಾಲ್ಲೂಕು ಕಾತ್ರಾಳ್ ತಿಮ್ಮಪ್ಪನ ಹಟ್ಟಿಯ ವೆಂಕಟೇಶ್ ಅವರ ೨೧ ಎಕರೆ ಅಡಿಕೆ ಮತ್ತು ತೆಂಗಿನ ಫಸಲು ಈ ಮಳೆನೀರಿನ ಮರುಪೂರಣದಿಂದ ಉಳಿದುಕೊಂಡಿದ್ದು ಬೃಹತ್ ಇಂಗು ಗುಂಡಿಯ ಸಹಾಯದಿಂದ ಬೋರ್‌ವೆಲ್‌ನಲ್ಲಿ ಬೇಸಗೆಯಲ್ಲಿಯೂ ಯಥೇಚ್ಛ ನೀರು ಉಳಿದಿದೆ. ಇದೇ ರೀತಿ ಕ್ಯಾಸಪುರದ ಸಿದ್ಧಪ್ಪ, ಹರಪ್ಪನಹಳ್ಳಿ, ನಾಗಲಾಪುರ ತಾಂಡವ ಪರಮೇಶ್ವರ ನಾಯ್ಕ, ಹಿರಿಯೂರು ತಾಲ್ಲೂಕು ಆಲೂರಿನ ಆನಂದ್, ಹರಪ್ಪನ ಹಳ್ಳಿ ತಾಲ್ಲೂಕ್ ಅರಸಿಕೆರೆಯ ಮಲ್ಲಿಕಾರ್ಜುನ ಮತ್ತಿತರರ ತೋಟಗಳು ಈ ಮಳೆ ನೀರು ಮರುಪೂರಣಕ್ಕೆ ಸಾಕ್ಷಿಯಾಗಿ ಹಸಿರಿನಿಂದ ಕಂಗೊಳಿಸುತ್ತಿವೆ. ಕಡಿಮೆ ಖರ್ಚಿನಲ್ಲಿ ಲಕ್ಷ ಲಕ್ಷ ಲಾಭ ತಂದಿವೆ.

ಮೇಲ್ಛಾವಣಿಗೆ ಬಿದ್ದ ಮಳೆ ನೀರನ್ನು ಸಂಗ್ರಹಿಸಿ ಮನೆ ಬಳಕೆಗೆ, ಶಾಲಾ - ಕಾಲೇಜು - ಕಛೇರಿಗಳ ಬಳಕೆಗೆ ಸೂಕ್ತವಾಗುವ ರೀತಿಯಲ್ಲಿ ಸಂಗ್ರಹಣ ತೊಟ್ಟಿಗಳನ್ನು ಮತ್ತು ಶುದ್ಧೀಕರಣ ತೊಟ್ಟಿಗಳನ್ನು ರೂಪಿಸಿ ಸುಲಭ ದರದಲ್ಲಿ ಒದಗಿಸುತ್ತಿರುವ ಶ್ರೀ ರೆಡ್ಡಿಯವರು ಸಂಘ - ಸಂಸ್ಥೆಗಳ ಸಹಕಾರದಿಂದ ಪ್ರತಿಯೊಂದು ಶಾಲೆಗೂ ಒಂದೊಂದು ಸಂಗ್ರಹಣಾ ತೊಟ್ಟಿಯನ್ನು ಕಟ್ಟಿಸುವತ್ತ ಪ್ರೇರಕವಾಗಿ ಕೆಲಸ ನಿರ್ವಹಿಸುತ್ತಿದ್ದಾರೆ. ಬರದ ನಾಡಿನಲ್ಲಿ ಮಳೆ ನೀರಿನ ಸಂಗ್ರಹಣಾ ಅಭಿಯಾನವನ್ನು ಯಶಸ್ವಿಯಾಗಿಸುತ್ತಿದ್ದಾರೆ.

ನಿಮ್ಮೂರಿನಲ್ಲಿಯೂ ಈ ರೀತಿಯ ಕೆಲಸಗಳನ್ನು ನೀವು ಏಕೆ ಕೈಗೊಳ್ಳಬಾರದು ? ವಿವರಗಳಿಗಾಗಿ ಸಂಪರ್ಕಿಸಿರಿ :


**ಎನ್. ಜೆ. ದೇವರಾಜ ರೆಡ್ಡಿ**
*ಅಂತರ್ಜಲ ಸಂಶೋಧಕರು, ಮಳೆ ನೀರು ಮಂಡಳಿ*
*ಆದರ್ಶ ಕಲ್ಯಾಣ ಮಂಟಪದ ಎದುರು, ಮೆದೆಹಳ್ಳಿ ರಸ್ತೆ*
*ಚಿತ್ರದುರ್ಗ - ೫೭೭ ೫೦೧*
*ಫೋನ್ : ೬೨೫೪೫೪/೬೨೧೮೨೪ ಮೊಬೈಲ್ : ೯೮೪೪೧-೨೩೭೯೨*
*e-mail : devrajreddy@rediffmail.com*



ಬೇದ್ರೆ ಎನ್. ಮಂಜುನಾಥ
ಪ್ರಸಾರ ನಿರ್ವಾಹಕರು, ಆಕಾಶವಾಣಿ ಕೇಂದ್ರ, ಚಿತ್ರದುರ್ಗ - ೫೭೭ ೫೦೧



**ಬದುಕು ಮಾಯೆಯ ಮಾಟ** (ಕಥಾಸಂಕಲನ)

ಮನು ಬಳಿಗಾರ್

**ಪುಟ :** ೧೧೬ **ಬೆಲೆ : ರೂ. ೬೦**

**ಸಪ್ನ ಬುಕ್ ಹೌಸ್,** ತುಂಗಾ ಕಾಂಪ್ಲೆಕ್ಸ್, ಗಾಂಧಿನಗರ, ಬೆಂಗಳೂರು - ೫೬೦ ೦೦೯

ಶಿಷ್ಟ ನಾಗರಿಕ ಬದುಕನ್ನು ಗೌರವಿಸುವ ಮನು ಬಳಿಗಾರ್ ಅವರ ಕಥೆಗಳಲ್ಲಿಯೂ ಅದು ಪ್ರತಿಫಲಿಸಿದ್ದು ಮನುಷ್ಯ ಸ್ವಭಾವದ ವೈಚಿತ್ರ್ಯಗಳನ್ನು ಇಲ್ಲಿ ಸ್ಪಷ್ಟವಾಗಿ ಚಿತ್ರಿಸಲಾಗಿದೆ. ಸಂಕಲನದಲ್ಲಿ ಒಂಬತ್ತು ಕಥೆಗಳಿದ್ದು ಬರವಣಿಗೆ ತುಂಬ ಹದವಾಗಿ ಅರ್ಥೈಸಿಕೊಳ್ಳಲು ಯೋಗ್ಯವಾಗಿದೆ. ವಿನೋದ ಮಿಶ್ರಿತ ಧಾಟಿಯಲ್ಲಿ ನಿಧಾನವಾಗಿ ಎಲ್ಲ ರೀತಿಯ ಜನರ ಮನೋಭಾವನೆಗಳಿಗೂ ಮಾತು ಬಂದಂತೆ ಪಾತ್ರಗಳನ್ನು ರೂಪಿಸಲಾಗಿದೆ. ಆರೋಗ್ಯಕರ ಅನುಭವ ನೀಡುವ ಕಥೆಗಳು.

**ಅಕಬರ** (ನಾಟಕ)

ಡಾ|| ಜಯಪ್ರಕಾಶ ಮಾವಿನಕುಳಿ

**ಪುಟ :** ೧೨೪ **ಬೆಲೆ: ರೂ. ೬೦**

**ಸ್ಫಟಿಕ ಪ್ರಕಾಶನ,** ಕೋಡಂಗಲ್ಲು, ಮೂಡುಬಿದರೆ - ೫೭೪೧೯೭, ದಕ್ಷಿಣ ಕನ್ನಡ

ಮೊಗಲ್ ಸಾಮ್ರಾಟ ಅಕ್ಬರನ ಕಾಲದ ಐತಿಹಾಸಿಕ ಘಟನೆ ಆಧಾರಿತ ಆಧುನಿಕ ನಾಟಕ. ಎರಡು ಸೌಹಾರ್ದ ಮನಸ್ಸುಗಳ ಮಧ್ಯೆ ಧರ್ಮವ ತೆರೆ ಅಡ್ಡ ಬಂದಾಗ ಏನಾಗುವುದೆಂಬ ನಿರೂಪಣೆ. ಸಾಮ್ರಾಟನೊ... ತನ್ನನ್ನು ಸುತ್ತುವರೆದ ಧಾರ್ಮಿಕ ವರ್ತುಲದಿಂದ ಹೊರಬಂದು ಸರ್ವಧರ್ಮ... ಸಮನ್ವಯವನ್ನು ಪ್ರಾಮಾಣಿಕವಾಗಿ ಎತ್ತಿ ಹಿಡಿಯುವುದು ಈ ನಾಟಕದ ಕಥಾ ಸಾರಾಂಶ... ಇಲ್ಲಿನ ಸಾಮ್ರಾಟ ಕೇವಲ ಅಕ್ಷರಗಳ ಪದ ಜೋಡಣೆಯ ಭಾಷೆಗೆ ಬೆಲೆ ಕೊಡದ... ಆದರೆ ಭಾರೀ ಮಾನವತೆಯ ಕನಸು ಕಂಡಿರುವಾತ. ಓದಿ ನೋಡಿ.



**ವಿಜ್ಞಾನ ವಿಸ್ಮಯ** (ಆಯ್ದ ಲೇಖನಗಳು)

ಪಾ. ವೆಂ. ಆಚಾರ್ಯ

**ಪುಟ :** ೨೪೪ **ಬೆಲೆ : ರೂ. ೧೨೫**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ಮುರಲೀಧರ - ರಾಧಾಕೃಷ್ಣರಾವ್ - ಪಿ. ವಿ. ಆಚಾರ್ಯ - ಲಾಂಗೂಲಾಚಾರ್ಯ - ಪಾ ವೆಂ – ಹೀಗೆ ಪತ್ರಿಕೆಗಳಿಗೆ ವಿವಿಧ ಹೆಸರುಗಳಿಂದ ಲೇಖನಗಳನ್ನು ಬರೆಯುತ್ತಿದ್ದ ಸಾಹಿತ್ಯ ವಲಯದ ಬಹುದೊಡ್ಡ ಹೆಸರಿನವರು ಪಾಡಿಗಾರು ವೆಂಕಟರಮಣ ಆಚಾರ್ಯರು. ಜನ ಸಾಮಾನ್ಯರ ಕೈಗೆಟುಕದ ಗಂಭೀರ ವೈಜ್ಞಾನಿಕ ಸಾಹಿತ್ಯವನ್ನು ಇಂಗ್ಲಿಷ್‌ನಲ್ಲಿ ಓದಿ ತಿಳಿದು ಕನ್ನಡದಲ್ಲಿ ಬರೆದ ಅವರ ಈ ಲೇಖನಗಳನ್ನೋದುವುದೇ ಒಂದು ವಿಸ್ಮಯಲೋಕ ಪ್ರವೇಶಿಸಿದಂತೆ. ಪಾ ವೆಂ ಸಮಗ್ರ ಸಂಪುಟ ಯೋಜನೆಯ ವೈಜ್ಞಾನಿಕ ಬರಹಗಳ ಒಂದು ಸಂಕಲನ.



**ನಲವತ್ತು ಗಜಲುಗಳು**

ಎಚ್. ಎಸ್. ಮುಕ್ತಾಯಕ್ಕ

**ಪುಟ :** ೧೦೨ **ಬೆಲೆ : ರೂ. ೭೫**

**ಶಿಲ್ಪಾ ಪ್ರಕಾಶನ,** "ಚೈತ್ರ" ಎಂ.ಐ.ಜಿ. II, ೧೩೫-೧೩೬ ರ ನಡುವೆ, ಸಿದ್ಧಲಿಂಗನಗರ, ಗದಗ - ೫೮೨ ೧೦೩

ಉರ್ದು ಕಾವ್ಯಗಳಾದ ಗಜಲ್‌ಗಳು ಭಾರತದಲ್ಲಿ ಮೊಗಲ... ಚಕ್ರವರ್ತಿಗಳ ಕಾಲದಲ್ಲಿ ಬಹುಜನಪ್ರಿಯವಾಗಿ ಗಜಲ್ ಕವಿ... ಗಾಯಕರಿಗೂ ಮನ್ನಣೆ ದೊರೆಯಿತು. ಮಧುಶಾಲೆ - ಪ್ರಣಯ - ವಿರಹ - ಉನ್ಮಾದಗ... ಸುತ್ತ ಮಾತ್ರ ಗಿರಕಿ ಹೊಡೆಯುತ್ತಿದ್ದ ಗಜಲ್‌ಗಳನ್ನು ಅಲ್ಲಿಂದ ಇತರ ವಿಷಯಗಳಿಗೂ ವಿಸ್ತರಿಸಿ ಕನ್ನಡದಲ್ಲಿಯೇ ಸ್ವತಂತ್ರವಾಗಿ ಓದುವ ಅವಕಾಶ ಕಲ್ಪಿಸಿದವರು ಶ್ರೀಮ... ಮುಕ್ತಾಯಕ್ಕ. ಭಾವನೆಗಳನ್ನು ಸಮರ್ಥವಾಗಿ ಅಭಿವ್ಯಕ್ತಿಗೊಳಿಸುವ ರೇಖಾ ಚಿತ್ರಗಳ... ಸೂಕ್ಷ್ಮ ಕುಸುರಿ ಕೆಲಸದಿಂದ ಕಂಗೊಳಿಸುತ್ತವೆ.



**ಇತಿಹಾಸದೊಡನೆ ಸಂವಾದ** (ಲೇಖನ ಸಂಗ್ರಹ)

ರಾಮದಾಸಪ್ರಭು ಸಿಂಗನಕೋಡಿ

**ಪುಟ :** ೭೨ **ಬೆಲೆ : ರೂ. ೪೮**

**ಸ್ಫಟಿಕ ಪ್ರಕಾಶನ,** ಮಾವಿನಕುಳಿ ಮನೆ, ಮೂಡಬಿದಿರೆ, ದಕ್ಷಿಣ ಕನ್ನಡ - ೫೭೪ ೧೯೭

ಇತಿಹಾಸದ ಅಧ್ಯಯನಕ್ಕೆ ಗತಕಾಲದ ಮಾನವ ಸಮಾಜವೇ ಮುಖ್ಯ ಆಧಾರ. ನಿರಂತರ ಬದಲಾವಣೆಗೊಳಪಡುತ್ತ ಸಾಗುವ ಇತಿಹಾಸದ ಬೃಹತ್ ಕಾಲಚಕ್ರ ಉರುಳುವಿಕೆಗೆ ಮನ್ವಂತರದ ದೀರ್ಘಕಾಲಿಕ ಎಣಿಕೆ. ಆಯಾಕಾಲದ ರಾಜ ನೈತಿಕ ಪ್ರಭಾವದೊಡನೆ ಬೆರೆತು ತನ್ನಲ್ಲಿರುವ ಸತ್ಯದಷ್ಟೇ ಮಿಥ್ಯೆಯನ್ನೂ ಒಳಗೊಂಡಿರುತ್ತದೆ. ಇಲ್ಲಿನ ಕಿರು ಲೇಖನಗಳು ವೈದಿಕ ಸಂಸ್ಕೃತಿಯ ಕಾಲದಿಂದಲೂ ಕ್ರಮೇಣ ಜನರ ಆಚಾರ-ವಿಚಾರಗಳು ಬದಲಾಗುತ್ತ ಬಂದುದರ ಸುಳಿವು ನೀಡುತ್ತವೆ. ಇತಿಹಾಸದ ಅಧ್ಯಯನವೂ ಇದೆ.

**ತುಂಗೆಯ ತಳಮಳ** (ಕಥೆಗಳು)

ಕಂನಾಡಿಗಾ ನಾರಾಯಣ

**ಪುಟ :** ೧೩೬ **ಬೆಲೆ : ರೂ. ೯೦**

**ಸಿ.ವಿ.ಜಿ. ಪಬ್ಲಿಕೇಷನ್ಸ್**, ನಂ. ೭೦, ೨ನೇ ಮೈನ್, ಜಬ್ಬರ್ ಬ್ಲಾಕ್, ವೈಯಾಲಿಕಾವಲ್, ಬೆಂಗಳೂರು - ೫೬೦ ೦೦೩

ಕಂ ನಾ ಉತ್ತಮ ಕಥೆಗಾರರೆಂದು ಅವರಿಗೆ ಸಂದಿರುವ ಅನೇಕ ಪ್ರಶಸ್ತಿಗಳು ಹಾಗೂ ಬಹುಮಾನಗಳು ಸಾಕ್ಷಿ ನುಡಿಯುತ್ತವೆ. ಗ್ರಾಮೀಣ ಬದುಕಿನ ಚೆಲುವನ್ನು ಅವರು ತಮ್ಮ ಕಥೆಗಳಲ್ಲಿ ಕಟ್ಟಿಕೊಡುತ್ತಾರೆ. ಸಂತೋಷ... ವನ್ನು ಕೊಡುವ ಸಹಜ ಸ್ಥಿತಿಗಳೆಲ್ಲ ಪಲ್ಲಟಗೊಂಡು ಅಸಹಜ ಸ್ಥಿತಿಗೆ ಬದುಕು ತಲುಪಿದಾ... ಅದನ್ನವರು ಗುರುತಿಸುತ್ತ ಕಥೆ ಹೆಣೆಯುತ್ತಾರೆ. ಶಬ್ದಗಳಲ್ಲಿ - ಭಾವಗಳಲ್ಲಿ ಪಡಿಮೂಡಿಸು... ತ್ತಾರೆ. ಕಣ್ಮುಂದೆ ಸಹಜವಾಗಿ ತೇಲಿ ಹೋಗುವಂತೆ, ತುಂಗೆಯ ನೀರಿನಂತೆಯೇ ಮುಂದ... ಹೋದಷ್ಟೂ ಹಿಂಬಾಲಿಸುವ ಹೊಸ ನೀರಿನಂತೆ ಹರಿಯುವ ಕಥೆಗಳ ಹರಿವು ಇದೆ.



**ಚರುಮುರಿ** (ಲಲಿತ ಪ್ರಬಂಧ)

ಸುಬ್ರಹ್ಮಣ್ಯ ಎಸ್. ಆರ್.

**ಪುಟ :** ೧೧೪ **ಬೆಲೆ : ರೂ. ೨೫**

**ಮಾರ್ಗದರ್ಶಿ ಪ್ರಕಾಶನ**, ನಂ. ೬-೧-೪೨, ಒಂದನೇ ಮಹಡಿ, ಕಮರ್ಶಿಯಲ್ ಬಿಲ್ಡಿಂಗ್, ಜಿಜ್ಜೆ, ಮಂಗಳೂರು-೪

ಮನಸ್ಸನ್ನು ಮುದಗೊಳಿಸಿ, ಬಿಗಿದ ಮುಖದ ಗಂಟನ್ನು ಸಡಲಿಸಿ, ಅಲ್ಲಲ್ಲಿ ನಗೆಮುಗುಳನ್ನು ಅರಳಿಸುತ್ತ ಸುಲಲಿತವಾಗಿ ಓದಿಸಿ ಕೊಳ್ಳುವ ಗುಣ ಇಲ್ಲಿನ ಲಲಿತ ಪ್ರಬಂಧಗಳಿಗಿದೆ. ಇವುಗಳ ವಸ್ತು ಬರಹಗಾರ-ಓದುಗ ಇಬ್ಬರಿಗೂ ಪರಿಚಯವಿರುವ ಸಾಮಾನ್ಯ ವಿಷಯ. ಆದರೂ ನಿರೂಪಣೆಯ ಚಾಕಚಕ್ಯತೆ ಎಂಥವರನ್ನೂ ಸೆಳೆಯಬಲ್ಲದು. ಇಲ್ಲಿನ ೨೩ ಲಲಿತ ವಾಚಿಕೆಗಳು ತಿಳಿಯಾದ ಲಘುಹಾಸ್ಯವನ್ನು ಚಿಮುಕಿಸುತ್ತ ಓದಿನ ರುಚಿ ತೋರಿಸುತ್ತವೆ. ಓದಿನ ಖುಷಿಯೊಂದಿಗೆ ಸಮಯದ ಸದುಪಯೋಗ.



**ಮರಳುಗಾಡಿನ ಕುಸುಮ** (ಆತ್ಮ ವೃತ್ತಾಂತಗಳು)

ಅನುವಾದ : ಭಾರತಿ ಮೋಹನ ಕೋಟಿ

**ಪುಟ :** ೧೪೮ **ಬೆಲೆ : ರೂ. ೫೦**

**ಶಿಲ್ಪಾ ಪ್ರಕಾಶನ,** "ಚೈತ್ರ" ಎಂ.ಐ.ಜಿ. II, ೧೩೫-೧೩೬ ರ ನಡುವೆ, ಸಿದ್ಧಲಿಂಗನಗರ, ಗದಗ - ೫೮೨ ೧೦೩

ಘೋರ ಮಾರಕ ರೋಗಗಳು ಸಿಡಿಲಿನಂತೆ ಬಂದೆರಗಿದರೂ ಧೃತಿಗೆಡದೆ ಎದೆಯನ್ನು ಕಲ್ಲಾಗಿಸಿ ಎದುರಿಸಿದ್ದಲ್ಲದೆ ಸಾವಿನಂಚಿ... ನಲ್ಲಿಯೂ ಕೆಲವರು ಮನುಕುಲದ ಏಳ್ಗೆಯನ್ನೇ ಚಿಂತಿಸಿ ಸಾಧಿಸಿದ ಅಸಾಮಾನ್ಯ ಮಹಿ... ಯರ ಜೀವನ ವೃತ್ತಾಂತಗಳ ಅನುವಾದಗಳು. ಅಂತಃಕರಣವನ್ನು ಬಹುವಾಗಿ ಕಲಕುವ... ಇವರ ಜೀವನದ ಕಹಿ ಘಟನೆಗಳಿಗಾಗಿಯೇ ಮರುಭೂಮಿ ಬಿರಿದು ಕಣ್ಣೀರ್ಗರೆವ... ಓಯಸಿಸ್ ಎನ್ನಿಸಿತೇನೋ! ಬದುಕಿನ ಚಿಕ್ಕಪುಟ್ಟ ತೊಂದರೆಗಳಿಗೂ ಹುಯಿಲೆಬ್ಬಿಸುವ... ನಾವು ಇವರ ಬಾಳನ್ನೊಮ್ಮೆ ಕಣ್ತೆರೆದು ನೋಡಬೇಕು. – ಇಂದಿರಾ ಕುಮಾರಿ

# ದಲಿತರ ಚರಿತ್ರೆಯ ಆಕರಗಳು

ಇಂದಿನ ಪ್ರಭುತ್ವದ ವಲಯದಲ್ಲಿ ಕೆಲವು ಪದಗಳು ಪದೇ ಪದೇ ಪ್ರಸ್ತಾಪವಾಗುತ್ತಿವೆ. ಅವುಗಳಲ್ಲಿ ಪರಿಶೀಲನೆ, ಪರಿಷ್ಕರಣೆ, ಪುನರ್‌ರಚನೆ, ಪರಾಮರ್ಶನ ಎಂಬಿತ್ಯಾದಿ ಪದಗಳು ಮುಖ್ಯವಾದವು. ಇತ್ತೀಚೆಗೆ ಚರಿತ್ರೆಯನ್ನು ಪುನರ್‌ರಚಿಸುವ, ಸಂವಿಧಾನವನ್ನು ಪರಾಮರ್ಶಿಸುವ, ಸಾಹಿತ್ಯವನ್ನು ಮೌಲ್ಯೀಕರಿಸುವ, ಶಾಸನವನ್ನು ಪರಿಶೀಲಿಸುವ, ಸಮುದಾಯಗಳನ್ನು ಶುದ್ಧೀಕರಿಸುವ, ಜನಾಂಗವನ್ನು ಮತಾಂತರಿಸುವ – ಸಂದರ್ಭಗಳಲ್ಲಿ ಇವುಗಳ ಹಾಜರಿ ಎದ್ದು ಕಾಣುತ್ತಿದೆ. ಈ ಎಲ್ಲ ಸಂದರ್ಭಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಒಂದು ಅಂಶ ಸ್ಪಷ್ಟವಾಗುತ್ತಿದೆ. ಅದೇನೆಂದರೆ, ಪ್ರಭುತ್ವದ ಬೆಂಬಲವಿಲ್ಲದಿದ್ದರೆ ಈ ಪದಗಳಿಗೆ ಪ್ರಕ್ರಿಯೆ ಎಂಬುದೇ ಇಲ್ಲ. 'ಚರಿತ್ರೆ'ಯ ಪುನರ್‌ರಚನೆಯೂ ಇದಕ್ಕೆ ಹೊರತಾಗಿಲ್ಲ.

ಭಾರತದಲ್ಲಿ ವ್ಯಕ್ತಿಗತ ಕಥನವಾಗಿರುವ ಚರಿತ್ರೆ, ಸಮಷ್ಟಿ ಸಂಕಥನವಾಗಿರುವ ಇತಿಹಾಸಗಳು, ಎರಡೂ ಪ್ರಭುತ್ವದ ಪಡಿಯಚ್ಚುಗಳಾಗಿವೆ. ಆರಂಭದಿಂದಲೂ ಅಗ್ರಹಾರ ಸಂಸ್ಕೃತಿಯ ವಶದಲ್ಲಿರುವ ಅಕ್ಷರಗಳು ಕೆಲ ಶೂದ್ರ ಸಮುದಾಯಗಳನ್ನು ಚರಿತ್ರೆಯಿಂದ ದೂರವೇ ದಬ್ಬಿದವು. ಇದರಲ್ಲಿ ದಲಿತರದೇ ಸಿಂಹಪಾಲು. ಹೀಗಾಗಿ ಮೊದಲಿನಿಂದಲೂ ದಲಿತರದು ಮೌನ ಚರಿತ್ರೆ. ಇದು ಮಾತಾಡಿದ್ದೇ ಅಪರೂಪ; ಅಕ್ಷರವಂತೂ ಆಗಲಿಲ್ಲ. ಆದ್ದರಿಂದ ''ದಲಿತರಿಗೆ ಚರಿತ್ರೆ ಇದೆಯೇ ?'' ಎಂದು ಅಕ್ಷರಲೋಕ ಇಂದಿಗೂ ಹುಬ್ಬೇರಿಸುತ್ತಿದೆ. ಹೌದು ! ಈ ನಾಡಿನಲ್ಲಿ ನೂರಾರು ಪ್ರಭುತ್ವಗಳಿಗೆ ಹೆಗಲಾದ ದಲಿತರಿಗೆ ತಮ್ಮದೇ ಆದ ಒಂದು ಚರಿತ್ರೆಯಿಲ್ಲವೆಂದರೆ ಆಶ್ಚರ್ಯವಾಗುತ್ತದೆ! ಇದಕ್ಕೆ ಕಾರಣ ಮೌಖಿಕ ಆಕರಗಳನ್ನು ಚರಿತ್ರೆಗೆ ಬಳಸಿಕೊಳ್ಳದೇ ಇರುವುದು. ಮೌಖಿಕ ಆಕರಗಳ ಮನಸ್ಸಿನ ಒಳಗು ಮೌನ. ಇಂಥ ಮೌನಗಳ ಮೂಲಕವೇ ಇಂದು ದಲಿತರ ಚರಿತ್ರೆ ರೂಪಿಸಬೇಕಿದೆ. ಜೊತೆಗೆ, ಲಿಖಿತ ಆಕರಗಳ ಒಳಗೆ ಅಡಗಿರುವ ಅನೇಕ ಮೌನಗಳನ್ನು ಮಾತಾಡಿಸಬೇಕಿದೆ. ಈ ಪ್ರಕ್ರಿಯೆಗೆ ನೆರವಾಗಲು ಮುಖ್ಯವಾಗಿ ಶಾಸನ, ಸಾಹಿತ್ಯ, ಸಂಘರ್ಷಗಳು; ಕಲೆ, ಕ್ರೀಡೆ, ಕಡತ, ಕೈಫಿಯತ್ತುಗಳು; ಅಂಕಿತ, ಆಚರಣೆ, ಐತಿಹ್ಯಗಳು ; ವಸ್ತು, ಘಟನೆ ವಿಶೇಷಗಳು ; ಜಾತ್ರೆ, ಉತ್ಸವ, ವಾಸ್ತುಗಳಂಥ ಹಲವು ಆಕರ ಸಾಮಗ್ರಿಗಳು ನಮ್ಮ ಮುಂದಿವೆ.

ಭಾರತದಲ್ಲಿ ವ್ಯಕ್ತಿಗತ ಕಥನವಾಗಿರುವ ಚರಿತ್ರೆ, ಸಮಷ್ಟಿ ಸಂಕಥನವಾಗಿರುವ ಇತಿಹಾಸಗಳು, ಎರಡೂ ಪ್ರಭುತ್ವದ ಪಡಿಯಚ್ಚುಗಳಾಗಿವೆ. ಆರಂಭದಿಂದಲೂ ಅಗ್ರಹಾರ ಸಂಸ್ಕೃತಿಯ ವಶದಲ್ಲಿರುವ ಅಕ್ಷರಗಳು ಕೆಲ ಶೂದ್ರ ಸಮುದಾಯಗಳನ್ನು ಚರಿತ್ರೆಯಿಂದ ದೂರವೇ ದಬ್ಬಿದವು. ಇದರಲ್ಲಿ ದಲಿತರದೇ ಸಿಂಹಪಾಲು. ಹೀಗಾಗಿ ಮೊದಲಿನಿಂದಲೂ ದಲಿತರದು ಮೌನ ಚರಿತ್ರೆ. ಇದು ಮಾತಾಡಿದ್ದೇ ಅಪರೂಪ; ಅಕ್ಷರವಂತೂ ಆಗಲಿಲ್ಲ. ಆದ್ದರಿಂದ ''ದಲಿತರಿಗೆ ಚರಿತ್ರೆ ಇದೆಯೇ ?'' ಎಂದು ಅಕ್ಷರಲೋಕ ಇಂದಿಗೂ ಹುಬ್ಬೇರಿಸುತ್ತಿದೆ.

ಡಾ|| ರಂಗರಾಜ ವನದುರ್ಗ

**ವೀರಗಲ್ಲು, ಮಾಸ್ತಿಗಲ್ಲು ಮತ್ತು......**

ಬಹುತೇಕ ಚರಿತ್ರೆಕಾರರು ಶಾಸನಗಳನ್ನು ವಿಶ್ವಾಸಾರ್ಹ ದಾಖಲೆಗಳೆಂದೇ ನಂಬಿದ್ದಾರೆ. ಪ್ರಭುತ್ವದ ಪರವಾದ ಮತ್ತು ಸಾಂಪ್ರದಾಯಿಕವಾದ ಇವರ ಮನಸ್ಸು ಈ ರೀತಿ ನಂಬಲು ಕಾರಣವಾಗಿದೆ. ಏಕೆಂದರೆ, ಶಿಲಾಶಾಸನ, ತಾಮ್ರಶಾಸನ, ಬಂಡೆಗಲ್ಲು ಶಾಸನಗಳ ಸಂದರ್ಭವನ್ನು ಗಮನಿಸಬೇಕು. ಇವುಗಳನ್ನು ಬರೆದ ರುವಾರಿ ಮತ್ತು ಕೊರೆದ ಕಲ್ಕುಟಿಗ ಬಿಟ್ಟರೆ ಶಾಸನಗಳ ಇಡೀ ವಾತಾವರಣ ದಲಿತೇತರಕ್ಕೆ ಸಂಬಂಧಿಸಿದೆ. ಮಾಡಿದ ಪಾಪಕ್ಕೆ ಕೊಡುವ ಶಿಕ್ಷೆಯ ಸ್ವರೂಪಗಳು ಮಾತ್ರ ಶಾಪಾಶಯಗಳಲ್ಲಿವೆ. ಇದು ಹೆಚ್ಚಾಗಿ ದಲಿತರಿಗೆ ಕೊಡುವ ಶಿಕ್ಷೆಯನ್ನು ಹೋಲುತ್ತದೆ. ಅಂದರೆ, ಶಾಸನಗಳಿಗೆ ದಲಿತರ ಮತ್ತು ಶೂದ್ರರ ನೆನಪಾಗುವುದು ಶಿಕ್ಷೆಯ ಸಂದರ್ಭದಲ್ಲಿ ಎಂದಾಯಿತು. ಹೀಗಾಗಿ, ದಲಿತರ ಚರಿತ್ರೆ ರೂಪಿಸಬೇಕಾದವರು ಊರು ಊರಿನಲ್ಲಿ ಇಂದು ಅನಾಥವಾಗಿ ಬಿದ್ದಿರುವ ವೀರಗಲ್ಲು ಮತ್ತು ಮಾಸ್ತಿಗಲ್ಲುಗಳನ್ನು ನಂಬಬೇಕು. ಥಳಥಳ ಹೊಳೆಯುವ ಶಿಲಾ-ತಾಮ್ರ ಶಾಸನಗಳಿಗೂ, ಒರಟು ಒರಟಾದ ಈ ವೀರಗಲ್ಲು- ಮಾಸ್ತಿಗಲ್ಲುಗಳಿಗೂ ತುಂಬಾ ವ್ಯತ್ಯಾಸವಿದೆ. ಇಂಥ ವ್ಯತ್ಯಾಸವನ್ನು ಚರಿತ್ರೆಕಾರರು ಖಂಡಿತಾ ಗಮನಿಸಬೇಕು. ಆಳುವವರನ್ನು ಹೊಗಳುವ ಶಾಸನಗಳು ನೂರಾರು ಸಾಲುಗಳಲ್ಲಿ ಉಪಮೆ-ರೂಪಕ, ಅಷ್ಟಾದಶ ವರ್ಣನೆಗಳನ್ನು ಬಳಸಿಕೊಳ್ಳುತ್ತವೆ. ಆದರೆ, ಆಳಿಸಿಕೊಳ್ಳುವವರನ್ನು ಹೇಳುವ ವೀರಗಲ್ಲು- ಮಾಸ್ತಿಗಲ್ಲುಗಳು ಒಂದೆರಡು ಸಾಲುಗಳಲ್ಲಿ ನೇರವಾಗಿ ತಿಳಿಸುತ್ತವೆ. ಹೀಗಾಗಿ ವಿಷಯ ಸ್ವರೂಪ, ಸಂವಹನ ಸಂದರ್ಭಗಳಲ್ಲಿ ಭಾರೀ ಅಂತರವಿರುವುದನ್ನು ಇವೆರಡರಲ್ಲಿ ಕಾಣುತ್ತೇವೆ.

ವೇಳೆವಾಳಿ, ಲೆಂಕವಾಳಿ, ಗರುಡ, ಕೀಳ್ಗುಂಟೆ ಮತ್ತು ಸಿಡಿತಲೆಯಂಥ ಪ್ರಸಂಗಗಳು ಘಟಿಸಿದ್ದು ಬಹುತೇಕ ದಲಿತರಲ್ಲಿ, ಬಿಟ್ಟರೆ, ಶೂದ್ರ ಸಮುದಾಯಗಳಲ್ಲಿ. ಬೋವಿ, ಬಿಲ್ಲರು, ಬೇಡರು, ಮುಂಡರು ಮುಂತಾದ ಹಲವು ಕೆಳಜಾತಿ/ಜನಾಂಗಗಳು ಮೊದಲಿನಿಂದಲೂ ಮುಗ್ಧ ಮನಸ್ಸಿನವು. ಪ್ರಭುತ್ವಕ್ಕೆ ತಲೆ ಕೊಟ್ಟು, ಮನಕೊಟ್ಟು ಬದುಕಿದವು. ಮನೆ ಮಗ, ಕಲಮುದ್ದ, ಬಂಟ, ಲೆಂಕ ಎಂದೆಲ್ಲ ಹೊಗಳಿಸಿಕೊಂಡವು. ಇಂಥವರ ಸಂಖ್ಯೆ ಸಾವಿರಾರು. ಆದ್ದರಿಂದಲೇ ಲೆಂಕಸಾಸಿರ್ವರ್, ಬಂಟಸಾಸಿರ್ವರ್ ಪದಗಳು ಚಾಲ್ತಿಯಲ್ಲಿವೆ. ಕವಿ ರನ್ನ ತನ್ನ ಗದಾಯುದ್ಧದಲ್ಲಿ ಪ್ರಸ್ತಾಪಿಸಿರುವ ತುರುಗೋಳ್, ಪೆಣ್‌ಪುಯ್ಯಲೋಳ್, ಎರವೆಸದೋಳ್, ಊರಳಿವಿನೋಳ್, ನೆಂಟನೆಡರೋಳ್ ಸಂದರ್ಭಗಳು ಸಹ ಶ್ರಮಸಂಸ್ಕೃತಿಯ ಸಮುದಾಯಗಳಲ್ಲಿ ಹೆಚ್ಚು ಘಟಿಸಿವೆ. ಇಲ್ಲೂ ದಲಿತರ ಪಾಲು ದೊಡ್ಡದು. ತಮ್ಮದಲ್ಲದ ಪ್ರಭುತ್ವ, ಊರು, ಕೇರಿ, ಹೋರಾಟಗಳಿಗೆ ಜೀವತೆತ್ತ ಇಂಥ ದಲಿತರ ವಿನ್ಯಾಸಗಳು ಇಲ್ಲಿ ಅಪಾರ.

ಇವೆಲ್ಲವುಗಳ ಹಿಂದೆ ಒಂದು ಬಲವಾದ ಸಾಂಸ್ಕೃತಿಕ ರಾಜಕಾರಣವಿದೆ. ಇಂದು ಪ್ರಯೋಗದಲ್ಲಿರುವ 'ದಲಿತ' ಎಂಬ ಪದ ಅಂದು ಇರಲಿಕ್ಕಿಲ್ಲ; ಆದರೆ, ದಲಿತರೆಂಬ ಅಸ್ಪೃಶ್ಯರು ಇದ್ದೇ ಇದ್ದರು. ಇವರೊಂದಿಗೆ ಶೂದ್ರರು ಸೇರಿದ್ದರು. ಇವರಿಬ್ಬರ ಮನಸ್ಸು, ಬದುಕು ಮುಗ್ಧ ಎಂಬುದರಲ್ಲಿ ಎರಡಿಲ್ಲ. ಕುಲದಲ್ಲಿ ಕೀಳಾದ ಇವರು ನಿತ್ಯ ಅನೇಕ ಅನುಮಾನ, ಅಪಮಾನಗಳ ನಡುವೆ ಬದುಕುತ್ತಿದ್ದರು. ಆಗ ಇಂಥ ಕುಲದ ಕೀಳರಿಮೆ ಕಳೆದುಕೊಳ್ಳಲು ಇವರಿಗಿದ್ದ ಎರಡು ದಾರಿಗಳೆಂದರೆ, ಒಂದು ಶೌರ್ಯ ಪ್ರದರ್ಶನ, ಇನ್ನೊಂದು ಧಾರ್ಮಿಕ ಬಲಿದಾನ. ಇವೆರಡೂ ಪಾಪ-ಪುಣ್ಯಗಳ ಅಡಿಯಲ್ಲಿ ಸೃಷ್ಟಿಯಾದ ನರಕ-ಸ್ವರ್ಗದ ಪರಿಕಲ್ಪನೆಗಳು. ಆಶ್ಚರ್ಯವೆಂದರೆ, ಶೌರ್ಯ ಪ್ರದರ್ಶಿಸಿ, ಈತ ಗೆದ್ದರೆ ರಾಜಲಕ್ಷ್ಮಿ ಸಿಕ್ಕಿದ್ದು ರಾಜನಿಗೆ ಹೊರತು ಈತನಿಗಲ್ಲ. ಅದರಂತೆ, ಸೋತರೆ ಹಲ್ಲೆಯಾದದ್ದು, ಸತ್ತರೆ ವೀರಗಲ್ಲು ಆದದ್ದು ಈತನೇ. ಹೀಗೆ ವೀರತನದ ಹೆಸರಲ್ಲಿ ದಲಿತರನ್ನು ರಣಭೂಮಿಗೆ ನುಗ್ಗಿಸುವ ಮತ್ತು ಇವರನ್ನು ಜೀವಂತ ಕಲ್ಲಾಗಿಸುವ ಹುನ್ನಾರ ಅಂದಿನ ಪ್ರಭುತ್ವ ಯಥೇಚ್ಛವಾಗಿ ಮಾಡಿದೆ. ಇದರೊಂದಿಗೆ ಪುರೋಹಿತಶಾಹಿಯೂ ಜೊತೆಗೂಡಿದೆ. ಸತ್ತ ವೀರನ ಹೆಸರಲ್ಲಿ ಗುಡಿಗುಂಡಾರ, ಹಬ್ಬ ಹರಿದಿನಗಳು ಪ್ರಚಾರಕ್ಕೆ ಬರುವಲ್ಲಿ ಪುರೋಹಿತಶಾಹಿಯ ಕೈವಾಡವಿದೆ. ಇವು ಮುಗ್ಧ ದಲಿತ/ಶೂದ್ರರಿಗೆ ಅರ್ಥವಾಗಲಿಲ್ಲ. ಇದಕ್ಕೆ ಇತ್ತೀಚೆಗೆ ನಡೆದ ಕಾರ್ಗಿಲ್ ಯುದ್ಧ ಉದಾಹರಿಸಬಹುದು. ತಾಯ್ನೆಲ, ಸ್ವಾತಂತ್ರ್ಯ, ಸ್ವಾಭಿಮಾನಗಳ ಹೆಸರಲ್ಲಿ ಯುದ್ಧ ಸೃಷ್ಟಿಸಿದವರು ಮೂಲತಃ ಪ್ರಭುತ್ವದವರು. ಆದರೆ, ರಣಭೂಮಿಯಲ್ಲಿ ನುಗ್ಗಿ ಯುದ್ಧ ಮಾಡಿ ಮಡಿದವರು ಸಾಮಾನ್ಯ ಸೈನಿಕರು. ಗೆದ್ದಾಗ ಲಾಭ ಆದದ್ದು ರಾಜಕಾರಣಿಗಳಿಗೆ ಹೊರತು ಸೈನಿಕರಿಗಲ್ಲ. ಏಕೆಂದರೆ, ಗೆದ್ದರೆ ಈ ಸೈನಿಕರು ಹಿಂದುಸ್ತಾನಕ್ಕಾಗಲೀ, ಪಾಕಿಸ್ತಾನಕ್ಕಾಗಲೀ, ಪ್ರಧಾನಮಂತ್ರಿ ಆಗಲಾರರು. ಆಗುವವರು ಯುದ್ಧ ಸೃಷ್ಟಿಸಿದವರೇ ಹೊರತು ಮಾಡಿದವರಲ್ಲ. ಹೀಗಿದ್ದರೂ ಇವರಿಗೆ ಅಶೋಕ ಚಕ್ರ, ಪರಮವೀರ ಚಕ್ರಗಳಂಥ ಪದಕ ಪ್ರಶಸ್ತಿಗಳ ಆಸೆ ತೋರಿಸುತ್ತಾರೆ. ಶೌರ್ಯ ಪ್ರದರ್ಶಿಸಿ,

ಇವುಗಳನ್ನು ಪಡೆದು ಪ್ರಭುತ್ವಕ್ಕೆ ಹತ್ತಿರವಾಗುವ ಹಂಬಲ ಸೈನಿಕರದು. ವೈರಿ ಬಣದಲ್ಲೂ ಇದೇ ರೀತಿ ಸೈನಿಕರಿದ್ದಾರೆ. ಅವರು ಸಹ ಸಿಂಹಾಸನಕ್ಕೆ ಸಮೀಪಗೊಳ್ಳಬೇಕೆಂದು ಬಯಸುತ್ತಾರೆ. ಸಿಂಹಾಸನವನ್ನೇ ಅಲ್ಲ.

ಇದರಂತೆ, ಸತ್ತ ಮೇಲೂ ಬದುಕಬೇಕೆಂಬ ಮನಸ್ಸು ಮಾಸ್ತಿಗಲ್ಲಿನದು. ಓರ್ವ ಸತಿ ತಾನು ಮಹಾಸತಿ ಆಗಬೇಕೆಂಬುದರ ಹಿಂದೆ ಪುರೋಹಿತರು ಮತ್ತು ಪ್ರಭುತ್ವದವರು ಹೆಣೆದ ರಾಜಕಾರಣವಿದೆ. ಸತ್ತ ಗಂಡನ ಹೆಸರಿನಲ್ಲಿ ಇವಳು ಸಹ ಶೋಷಣೆಗೊಂಡಿದ್ದಾಳೆ. ಅತ್ತ ಹೋರಾಡಿ ಸತ್ತ ಗಂಡ ವೀರಗಲ್ಲಾದರೆ, ಇತ್ತ ಸತ್ತ ಗಂಡನ ಹೆಸರಲ್ಲಿ ಮಡದಿ ಮಾಸ್ತಿಗಲ್ಲಾಗಿದ್ದಾಳೆ. ಇವೆರಡೂ ಭಾವುಕವಾಗಿ ನಡೆದ ದುರಂತಗಳೇ. ಊರ ನಡುಬೀದಿಯಲ್ಲಿ ಮೆರವಣಿಗೆ ಬರುವ ಈ ಸತಿ ಸಾಕ್ಷಾತ್ ಹರಕೆಯ ಕುರಿಯೇ ಸರಿ. ಇನ್ನೇನು ಕೊಂಡ ಹಾಯಬೇಕು, ಸತ್ತ ಗಂಡನ ಶವದ ಜೊತೆ ಸಾಯಬೇಕು ಎಂಬುದರಲ್ಲಿ ಇವಳಲ್ಲಿ ಎದ್ದ ತವಕ ತಲ್ಲಣಗಳ, ಮಾನಸಿಕ ಗೊಂದಲಗಳ ಅಧ್ಯಯನವಾಗಬೇಕಾಗಿದೆ. ದಲಿತರ/ಶೂದ್ರರ ಮನಸ್ಸುಗಳು ಜನಜಂಗುಳಿಗೆ ಬಹುಬೇಗ ಭಾವುಕಗೊಳ್ಳುತ್ತವೆ. ಕಾರಣ ತಮ್ಮನ್ನು ಜನ ಗುರುತಿಸುತ್ತಾರಲ್ಲ ಎಂಬ ಅನನ್ಯತೆ. ನೀರಿಲ್ಲದ ಕೆರೆಗೆ ತನ್ನನ್ನು ಆಹಾರವಾಗಿಸಿಕೊಂಡ ಭಾಗೀರಥಿಗೆ ಹೊರಗಿನ ಒತ್ತಡಗಳಿದ್ದವು. ಜೊತೆಗೆ, ಈ ಕೆರೆ ತುಂಬಿಗೆ ತಾನು ಕಲ್ಲಾಗುವ ಮೂಲಕ ಹತ್ತು ಗದ್ದೆಗೆ ನೀರಾಗುತ್ತೇನೆನ್ನುವ ಒಳಮನಸ್ಸು ಇದ್ದವು. ಇಂಥ ಮನಸ್ಸಿನ ತಾಡಿನಾಗಮ್ಮ, ಹುಳಿಯಾರು ಕೆಂಚಮ್ಮ, ದಂಡಿ ಚೆನ್ನಮ್ಮ, ವೀರ ಓಬಮ್ಮ (ಈರೋಬಿ), ಉತ್ತರ ದೇವಮ್ಮ, ಮದಗದ ಕೆಂಚಮ್ಮ ನಂಥವರು ಇದುವರೆಗೆ ಕೇವಲ ಜನಪದರ ಚರಿತ್ರೆಯಲ್ಲಿ ಮಾತ್ರ ಮೌನವಾಗಿ ಇರುವುದು ಗಮನಾರ್ಹ. ಇವರು ಮಾತಾಡಬೇಕು. ತಮ್ಮ ತಲ್ಲಣಗಳನ್ನು ಹೇಳಿಕೊಳ್ಳಬೇಕು; ಇದನ್ನು ದಲಿತ ಚರಿತ್ರೆ ಸಾಧಿಸಬೇಕು.

ಒಟ್ಟಾರೆ ಶಾಸನ - ವೀರಗಲ್ಲು - ಮಾಸ್ತಿಗಲ್ಲುಗಳ ಸಂದರ್ಭದಲ್ಲಿ ದಲಿತರ/ಶೂದ್ರರ ಬದುಕಿದೆ. ಅಧ್ಯಯನದ ಸಾಧ್ಯತೆಗಳು ವಿಸ್ತರಿಸಿದಾಗ ಅಂತರಂಗದ ಹತ್ತಾರು ವಿನ್ಯಾಸಗಳು ತೆರೆದುಕೊಳ್ಳುತ್ತವೆ.

**ಸಾಹಿತ್ಯ ಸಂಘರ್ಷ**

ಬಹುತೇಕ ಸಾಹಿತ್ಯಕ ಕೃತಿಗಳು ಕೃತಿಕಾರನ ಸಮಕಾಲೀನ ಸಂದರ್ಭವನ್ನು ಒಳಗೊಂಡಿರುತ್ತವೆ. ಇವೆಲ್ಲ ಸಮಕಾಲೀನ ನಿಜ; ಆದರೆ, ಸಾರ್ವಕಾಲಿಕ ಮೌಲ್ಯಾದರ್ಶಗಳನ್ನು ಹೊಂದಿರಬೇಕೆಂದಿಲ್ಲ. ಒಟ್ಟಾರೆ ಅಂದಿನ ಸಮಾಜದ ಪ್ರತಿಬಿಂಬವೂ, ಗತಿಬಿಂಬವೂ ಆಗಿರುತ್ತವೆ. ಆಶ್ಚರ್ಯವೆಂದರೆ, ಅನೇಕ ಸಾಹಿತಿಗಳು, ಪ್ರಜ್ಞಾಪೂರ್ವಕವಾಗಿ, ಇಲ್ಲವೇ ಅಪ್ರಜ್ಞಾಪೂರ್ವಕವಾಗಿ ತಮ್ಮ ತಮ್ಮ ಸಮುದಾಯದ ಸಂವೇದನೆಗಳನ್ನು ದಾಖಲಿಸುತ್ತಾರೆ. ಇದಕ್ಕೆ ರಾಮಾಯಣದ ವಾಲ್ಮೀಕಿ, ಮಹಾಭಾರತದ ವ್ಯಾಸರನ್ನೇ ಉದಾಹರಿಸಬಹುದು. ಬೇಡರ ವಾಲ್ಮೀಕಿ, ಅಂಬಿಗರ ವ್ಯಾಸ ಒಂದು ರೀತಿಯಿಂದ ಬೇಟೆಗಾರ ಸಂವೇದನೆಯ ಸಮುದಾಯದವರು. ಸಹಜವಾಗಿಯೇ ಇವರಿಬ್ಬರ ಕಾವ್ಯಗಳ ಆರಂಭ ಬೇಟೆ ಸಂದರ್ಭವನ್ನು ಹೇಳುತ್ತದೆ. ಕ್ರೌಂಚಪಕ್ಷಿಯ ವಧೆಯಲ್ಲಿ ಬೇಡನ ಪ್ರವೇಶವಿದ್ದರೆ, ಶಂತನುವಿನ ಪ್ರೇಮದಲ್ಲಿ ಮತ್ಸ್ಯಕನ್ಯೆಯ ಪ್ರವೇಶವಿದೆ. ಇದರರ್ಥ ತಮ್ಮ ಜನಾಂಗದ ಸಂವೇದನೆಗೆ ಸಾಹಿತಿ ಸಹಜವೆಂಬಂತೆ ಒಳಗಾಗಿರುತ್ತಾನೆ. ಆದರೆ, ಇದನ್ನು ಉದ್ದೇಶಪೂರ್ವಕವಾಗಿ ಹೇಳತೊಡಗಿದರೆ ಸೃಜನಶೀಲತೆಯಾಗದು.

ಅಂದು ಶಂಬೂಕನ ಯೋಗಕ್ಕೆ ಧಾರ್ಮಿಕ ಜಗತ್ತು ಮತ್ತು ಏಕಲವ್ಯನ ವಿದ್ಯೆಗೆ ಕ್ಷತ್ರಿಯ ಜಗತ್ತು ಅಲುಗಾಡಿದ್ದವು. ಆದ್ದರಿಂದಲೇ ಅವು ಶಂಬೂಕನ ಕೊರಳನ್ನು, ಏಕಲವ್ಯನ ಬೆರಳನ್ನು ಕತ್ತರಿಸಿದವು. ಇಲ್ಲವಾದರೆ, ರಾಮಾಯಣದಲ್ಲಿ ಶಂಬೂಕ, ಮಹಾಭಾರತದಲ್ಲಿ ಏಕಲವ್ಯ ಮಿಂಚುತ್ತಿದ್ದರು; ಮುಖ್ಯ ನೆಲೆಯಲ್ಲಿ ಮಾತಾಡುತ್ತಿದ್ದರು, ಮೆರೆಯುತ್ತಿದ್ದರು. ಆದರೆ, ಕಾವ್ಯದ ಕವಿಗೆ ಗೊತ್ತಿದೆ. ಪ್ರಭುತ್ವಗಳು ಶೂದ್ರಶಕ್ತಿಯನ್ನು ಮುಖ್ಯ ಭಿತ್ತಿಯಲ್ಲಿ ಬದುಕಲು ಬಿಟ್ಟಿಲ್ಲ ಎಂದು. ಹಾಗಾಗಿಯೇ ಬಹುತೇಕ ದಲಿತ ಪಾತ್ರಗಳು ಕಾವ್ಯದ ಆರಂಭದಲ್ಲಿಯೇ ದುರಂತ ಕಾಣುತ್ತವೆ. ಇದು ಭಾರತದ ಬಹುತೇಕ ಶಿಷ್ಟ ಮಹಾಕಾವ್ಯದ ಹಂದರ. ಅಂದರೆ, ಸಾಹಿತ್ಯವು ಸಮಾಜದ ಪ್ರತಿಬಿಂಬ ಅನ್ನುವುದಾದರೆ ಈ ಸಾಹಿತ್ಯದಲ್ಲಿ ನಡೆದಿರುವ ದಲಿತರ ದುರಂತಗಳನ್ನು ಚರಿತ್ರೆಯಾಗಿ ಓದಬೇಕಾಗುತ್ತದೆ. ಆಗ 'ಏಕಲವ್ಯನ ಗುರುಭಕ್ತಿ' ಎಂಬ ಶೀರ್ಷಿಕೆಯನ್ನು ಬದಲಿಸಿ ಅದನ್ನು 'ದ್ರೋಣನ ಮೋಸ' ಎಂದು ಇಟ್ಟುಕೊಳ್ಳಬೇಕು. ಈಗ ಪಠ್ಯ ತನ್ನ ನಿಜವಾದ ಅರ್ಥವಲಯಗಳನ್ನು ತೆರೆದು ತೋರಿಸುತ್ತದೆ. ಇಂಥ ಅಧ್ಯಯನದ ಸ್ವರೂಪಗಳು ದಲಿತ ಚರಿತ್ರೆಯ ಮುಖ್ಯ ನೆಲೆಗಳಾಗಬೇಕು.

ಬೌದ್ಧ ಸಾಹಿತ್ಯದಲ್ಲಿ ದೊರೆಯುವ 'ಹೀನಶಿಲ್ಪ'ವು

# ಪ್ರೀತಿಯ ಶಾಲೆ

ಹಚ್ಚನೆ ಹಸುರನು ಹೊತ್ತಿಹ ಮರಗಳು
ಶಾಲೆಯ ಸುತ್ತಲು ಬೆಳೆದಿಹವು
ಬಗೆಬಗೆ ಬಣ್ಣದ ಹೂಗಳ ಬಿಟ್ಟಿಹ
ಬಳ್ಳಿಯು ಕಮಾನು ಕಟ್ಟಿಹವು

ತಣ್ಣಗೆ ತೂರುವ ಗಾಳಿಯ ಜತೆಯಲಿ
ಹೂವಿನ ಪರಿಮಳ ತೇಲುವುದು
ಮನಸಿಗೆ ಮುದವನು ನೀಡುವ ಪರಿಸರ
ಎಲ್ಲರ ಗಮನವ ಸೆಳೆಯುವುದು

ಟೀಚರ ತೋರುವ ಅಕ್ಕರೆ ಮಮತೆಯು
ವಿದ್ಯೆಯ ಒಲವನು ಬೆಳೆಸುವುದು
ವಿವಿಧ ವಿಷಯದ ಪರಿಪರಿ ಬೋಧನೆ
ಜ್ಞಾನದ ಸೌಧವ ಕಟ್ಟುವುದು




ಕನ್ನಡ ಕವಿಗಳ ಕವಿತೆಯ ಕೇಳಲು
ಮನವಿದು ಹರುಷದಿ ಕುಣಿಯುವುದು
ಕಿನ್ನರ ಕಾಡಿನ ಕತೆಗಳ ಆಲಿಸಿ
ಕಲ್ಪನಾಲೋಕಕೆ ಹೋಗುವುದು

ಗೆಳೆಯರ ಗುಂಪಲಿ ತರತರ ಆಟಕೆ
ಶಾಲೆಯು ನೆರವನು ನೀಡಿಹುದು
ಮರದಡಿ ಮುಸುಕಿದ ನೆರಳಲಿ ಉಣ್ಣಲು
ಮೋದವು ತಾನೇ ದಕ್ಕುವುದು

ನಗಿಸುವ ನಲಿಸುವ ಗೆಳೆಯರ ಜತೆಯನು
ಶಾಲೆಯು ನನಗಿದು ಕೊಟ್ಟಿಹುದು
ಕಲಿಯುತ ಕಲಿಯುತ ಬೆಳೆಯುವ ನಮ್ಮೊಳು
ಸುಂದರ ಸ್ವಪ್ನವ ಬಿತ್ತಿಹುದು.

**ಸಂಗಮೇಶ ಗುಜಗೊಂಡ**
ಕಲಾ ವಾಣಿಜ್ಯ ಮಹಾವಿದ್ಯಾಲಯ
ಮೂಡಲಗಿ - ೫೯೧ ೩೧೨, ಬೆಳಗಾವಿ ಜಿ.

ಮಡಿವಾಳ, ಚಂಡಾಳ, ಕಟುಕರ ಕಸುಬುಗಳನ್ನು ಪ್ರಸ್ತಾಪಿಸುತ್ತವೆ. ಜಾತಕ ಕತೆಗಳಲ್ಲೂ ಇಂಥ ವಿವರಗಳಿವೆ. ಇದರಂತೆ, ವೈದಿಕ ಸಾಹಿತ್ಯದ ಧರ್ಮಶಾಸ್ತ್ರ, ಅರ್ಥಶಾಸ್ತ್ರ ಮತ್ತು ಸ್ಮೃತಿಶಾಸ್ತ್ರಗಳಲ್ಲಿ ಕೆಳಜಾತಿಗಳ ಮೇಲೆ ಹೇರಿದ ವಿಧಿ ನಿಷೇಧದ ಉಲ್ಲೇಖವಿದೆ. ಈ ನಿಷೇಧಗಳಿಗೆ ಕಾರಣವೇನು? ಕಾರಣರಾರು? ಎಂದು ಶೋಧಿಸಿದಾಗ ದಲಿತರ ಬದುಕಿನ ಕೆಲ ಮುಖಗಳು ಖಂಡಿತ ಕಾಣುತ್ತವೆ. ಕನ್ನಡದ ಚಂಪು ಸಾಹಿತ್ಯದಲ್ಲಿ ಚಿತ್ರಣಗೊಂಡ ಪಂಪ ರನ್ನರ ಪ್ರತಿನಾಯಕರು ಇದೇ ನೆಲೆಯಿಂದ ಬಂದವರು. ಒಂದು ಸಂದರ್ಭದಲ್ಲಿ ಸ್ವತಃ ಕರ್ಣನೇ ''ಕುಲಂ ಕುಲಮಲ್ತು ಛಲಂ ಕುಲಂ, ಅಭಿಮಾನಂ ಕುಲಂ'' ಎಂದು ಹೇಳಿರುವಲ್ಲಿ ಗಮನಾರ್ಹ ನೋಟಗಳಿವೆ. ಅಂದರೆ, ಕರ್ಣನೊಳಗಿನ ಅವಮಾನದ ಒತ್ತಡ ಮತ್ತು ಅಭಿಮಾನದ ಆಶಯಗಳು ಈ ರೀತಿ ಮಾತಾಡಿಸಿವೆ. ವಡ್ಡಾರಾಧನೆಯ ಭವಾವಳಿಗಳಲ್ಲೂ ಪಾಪ ಮತ್ತು ಪುಣ್ಯದ ಕಲ್ಪನೆಗಳು ಸ್ವರ್ಗ-ನರಕವನ್ನು ಸೃಷ್ಟಿಸಿವೆ. ಅಷ್ಟೇ ಅಲ್ಲ, ಇಂದು ದಲಿತರು ಮತ್ತು ಶೂದ್ರರಾಗಿ ಹುಟ್ಟಲು ಕಾರಣ ಹಿಂದಿನ ಜನ್ಮದ ಪಾಪವೆಂದೇ ಇವು ಹೇಳುತ್ತವೆ. ಹೀಗಾಗಿ, ಜೈನ ಸಾಹಿತ್ಯ ನೀಡುವ ವಿವರಗಳೆಲ್ಲ ಸತ್ಯವೆಂದು ಒಪ್ಪಿಕೊಳ್ಳಬೇಕಿಲ್ಲ.

ದಲಿತರು ನೀಡಿದ ಸ್ನೇಹ ಮತ್ತು ಮಾಡಿದ ಸಂಘರ್ಷ ಹಾಗೂ ಒಪ್ಪಿದ ಸಾಮರಸ್ಯಗಳ ಬಗ್ಗೆ ತೇವಾರರ ಸಾಹಿತ್ಯ, ವಚನ ಸಾಹಿತ್ಯ, ಸೂಫಿ ಸಾಹಿತ್ಯಗಳು ವಿಶೇಷ ಬೆಳಕು ಚೆಲ್ಲುತ್ತವೆ. ಬೇಡರ ಕಣ್ಣಪ್ಪನಂತಹ ಓರ್ವ ಭಕ್ತ ಸಾಕ್ಷಾತ್ ಶಿವನಿಗೆ ತನ್ನ ಕಣ್ಣು ಕಿತ್ತುಕೊಟ್ಟ ಪ್ರಸಂಗವಿದೆ. ಇದು ಉಗ್ರಭಕ್ತಿಯ ಒಂದು ರೂಪವೆನಿಸಿದರೂ ಇದರ ಹಿಂದೆ ಮುಗ್ಧಭಕ್ತಿಯ ಮುಖವಿದೆ. ತಮಿಳು ನಾಯನಾರ್ ಕತೆಗಳಲ್ಲಿ ದೊರೆಯುವ ಈ ರೀತಿಯ ಪ್ರಸಂಗಗಳು ಎರಡು ತರಹದ ಆಶಯಗಳನ್ನು ಸಾರುತ್ತವೆ. ಒಂದು, ಕೀಳು ಕುಲಗಳು ಉಗ್ರಭಕ್ತಿಯ ಮೂಲಕ ಧರ್ಮಕ್ಕೂ ಹಾಗೂ ಹೋರಾಟಗಳ ಮೂಲಕ ಅರಸನಿಗೂ ಹತ್ತಿರವಾಗುವುದು. ಇಂಥ ಸ್ನೇಹಗಳು ಮೇಲ್‌ಚಲಿಸುವ ಕೆಳಕುಲಗಳಿಗೆ ಅಂದು ಅನಿವಾರ್ಯವಾಗಿತ್ತು. ಆದರೆ, ಇದು ಶರಣರ ಚಳವಳಿಯಲ್ಲಿ ಸಂಘರ್ಷಕ್ಕೆ ತಿರುಗಿತು. ಪ್ರಭುತ್ವದೊಂದಿಗೆ ರಾಜಿ ಮಾಡಿಕೊಳ್ಳುವುದನ್ನು ಈ ಚಳವಳಿ ಪ್ರಬಲವಾಗಿ ವಿರೋಧಿಸಿತು. ಮಾದರ ಚೆನ್ನಯ್ಯನ ಮನೆಯಲ್ಲಿ ಬಸವಣ್ಣ ಊಟ ಮಾಡಿದನೆಂಬ ಒಂದೇ ಕಾರಣಕ್ಕೆ ಅಂದು ಕಲ್ಯಾಣದಲ್ಲಿ ವೇದ ನಡುಗಿತು, ಶಾಸ್ತ್ರ ಅಗಲಿತು, ತರ್ಕ ದೂರ ಸರಿಯಿತೆಂದರೆ ಆದ ತಲ್ಲಣವನ್ನು ಅರ್ಥೈಸಬೇಕಾಗುತ್ತದೆ. ಇದೊಂದು ಐತಿಹ್ಯವೆಂದರೂ ಸಂದರ್ಭದಲ್ಲಿ ಅಡಗಿರುವ ಉಲ್ಬಣವನ್ನು ಕಲ್ಪಿಸಬೇಕಾಗುತ್ತದೆ. ಪದೇ ಪದೇ ಬಸವಣ್ಣ ''ತಾನು ಮಾದಾರ ಚೆನ್ನಯ್ಯನ ಮನೆಮಗ'' ಎಂದು ಹೇಳುವಲ್ಲಿ ''ತಾನು ಡೋಹರ ಕಕ್ಕಯ್ಯನ ಮೊಮ್ಮಗನೆಂದು'' ತಿಳಿಸುವಲ್ಲಿ ಹಲವು ಆಪ್ತತೆಗಳಿವೆ. ಏಕಕಾಲಕ್ಕೆ ಎರಡು ಬಣಗಳಿಗೂ ತಿಳಿಹೇಳುವ, ನಂಬಿಸುವ, ಅರ್ಥೈಸುವ ತುರ್ತು ಬಸವಣ್ಣನಲ್ಲಿ ಹಂಬಲಿಸಿದೆ. ಬಸವನ ಮೂಲಕ ವೀರಶೈವೀಕರಣಗೊಂಡ ದಲಿತರನ್ನು, ಕನಕನ ಮೂಲಕ ವೈಷ್ಣವೀಕರಣಗೊಂಡ ಶೂದ್ರರನ್ನು, ವಿಶೇಷ ನೆಲೆಗಳಿಂದ ಅಭ್ಯಸಿಸಬೇಕಿದೆ. ಹಾಗೇನೇ ಇಂದು




ದಲಿತರು, ಅಲ್ಪಸಂಖ್ಯಾತರು ಕ್ರೈಸ್ತ ಧರ್ಮಕ್ಕೆ ಮತಾಂತರಗೊಳ್ಳುತ್ತಿರುವುದರ ಹಿಂದೆ ಒಂದು ಬಲವಾದ ಪಲ್ಲಟವಿದೆ. ಈ ರೀತಿ ಪಲ್ಲಟಗೊಂಡವರೆಲ್ಲ ಸುಖವಾಗಿದ್ದಾರೆಯೇ ಎಂದರೆ, ಅದೂ ಇಲ್ಲ. ಇವರಲ್ಲಿ ಬಹುತೇಕರ ಪಾಡು ತ್ರಿಶಂಕು ಸ್ಥಿತಿಯದು. ವೀರಶೈವೀಕರಣಗೊಂಡ ಅಸ್ಪೃಶ್ಯರು ತಮ್ಮ ಮೂಲ ದೇವರು, ಧರ್ಮ, ಆಚರಣೆ, ಆಹಾರ, ಅನನ್ಯತೆಗಳನ್ನೆಲ್ಲ ಬಿಟ್ಟುಬಂದರು, ಕಳೆದುಕೊಂಡರು. ಒಂದು ವೇಳೆ ಅವುಗಳನ್ನು ಇವರು ಬಿಟ್ಟು ಬರದೇ ಇದ್ದರೆ ಬಸವನ ಅನುಭವ ಮಂಟಪದ ಶಾಸನ ಇವರನ್ನು ಭವಿಗಳೆಂದು ಬಯ್ಯುತ್ತಿತ್ತು. ಇನ್ನು ಮತಾಂತರಗೊಂಡವರು ಮತ್ತೆ ಮರಳಿ ಬಿಡುಗಡೆಗೊಳ್ಳಬೇಕೆಂದರೆ ಈಗಾಗಲೇ ದಲಿತಕೇರಿಯ ಅವರ ಬೇರುಗಳು ಬರಿದಾಗಿವೆ. ಇದು ಕನಕನ ಸ್ಥಿತಿಯೂ ಹೌದು. ತಾಳ ತಂಬೂರಿ, ನಾಮ ಹೋಮ, ಕೀರ್ತನ ಕಾವ್ಯಗಳ ಮೂಲಕ ದಾಸಕೂಟ ಪ್ರವೇಶಿಸಿದ ಕನಕನನ್ನು ವ್ಯಾಸಕೂಟ ಕೊನೆಯವರೆಗೂ ಒಳಗೆ ಬಿಟ್ಟುಕೊಳ್ಳಲಿಲ್ಲ. 'ದಾಸತ್ವ'ದ ಎಲ್ಲಾ ಚಿಹ್ನೆಗಳು ಇಲ್ಲಿ ಕನಕನಿಗೆ ಕೈಕೊಟ್ಟವು. ಒಟ್ಟಾರೆ, ದಲಿತರು, ಶೂದ್ರರು ಧಾರ್ಮಿಕ ವಿಷಯದಲ್ಲಿ ತಳೆದ ಸ್ನೇಹ, ಸಂಘರ್ಷ ಮತ್ತು ಸಾಮರಸ್ಯದ ನಿಲುವುಗಳು ಅಧ್ಯಯನಾರ್ಹವಾದವು. ಇಂಥ ಆಕರ ಮತ್ತು ಅವುಗಳ ಅಧ್ಯಯನದ ಸ್ವರೂಪದಿಂದ ದಲಿತರ ಸಾಂಸ್ಕೃತಿಕ ಚರಿತ್ರೆಗೆ ವಿಶೇಷ ರೂಪ ನೀಡಬಹುದು.

'ಹರಿಶ್ಚಂದ್ರ' ಕಾವ್ಯದಲ್ಲಿ ರಾಘವಾಂಕ ಪ್ರಸ್ತಾಪಿಸಿದ ಹೊಲತಿಯರ ಪ್ರಸಂಗ ಆ ಕಾಲದ ಮುಖ್ಯ ದಾಖಲೆ. ಹರಿಶ್ಚಂದ್ರನ ಪ್ರಭುತ್ವದ ನಿಲುವುಗಳಿಂದ ಹೊಲತಿಯರು ಅವಮಾನಗೊಂಡರು. ಇಂಥ ಅವಮಾನದ ಪರಿಣಾಮ ಹರಿಶ್ಚಂದ್ರನ ಬದುಕನ್ನೇ ಬದಲಾಯಿಸುತ್ತದೆ. ಸ್ವತಃ ಹರಿಶ್ಚಂದ್ರನನ್ನೇ ಹೊಲಗೇರಿಗೆ ಕರೆದುತರುವಷ್ಟು ಈ ಅವಮಾನ ಪ್ರಬಲವಾಗಿದೆ. ಅಲ್ಲದೆ, ದಲಿತನ ಕೇರಿಯಲ್ಲಿ ಮುಕ್ತಿ ಸಿಗುವವರೆಗೂ ಕಾವ್ಯ ಮುಂದುವರೆಯುತ್ತದೆ. ಅಂದರೆ ಒಂದು ಪ್ರಭುತ್ವವನ್ನು ಬಗ್ಗಿಸುವ ದಲಿತಪರ ಘಟನೆಗಳು ಸಾಹಿತ್ಯದಲ್ಲಿ ಸಿಗುತ್ತವೆ. ಜಾತಿ ನಿರ್ಣಯದ ವಿಷಯದಲ್ಲಿ ದೇವಚಂದ್ರನ 'ರಾಜಾವಳಿ ಕತೆ' ಕುತೂಹಲದಿಂದ ಕೂಡಿದೆ. ಮಠವೊಂದಕ್ಕೆ ಪಟ್ಟ ಕಟ್ಟಿಕೊಂಡ ಪಂಚಮರ ವ್ಯಕ್ತಿ ಕೊನೆಗೆ ಆ ಮಠದಿಂದ ಕುಲದ ಕಾರಣಕ್ಕೆ ಉಚ್ಚಾಟನೆಗೊಳ್ಳುವ ಸ್ಥಿತಿ ಬರುತ್ತದೆ. ಇನ್ನು ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕುವೆಂಪು ಕಾರಂತರಿಂದ ದಲಿತ ಬಂಡಾಯದ ಲೇಖಕರವರೆಗೆ ದಲಿತರ ಬದುಕಿನ ಅನೇಕ ಮಗ್ಗಲುಗಳ ಪರಿಚಯ ಸಿಗುತ್ತದೆ. 'ಚೋಮನ ದುಡಿ', 'ಹೊಲಗೇರಿ ರಾಜಕುಮಾರ', 'ಗೌರ್ನಮೆಂಟ್ ಬ್ರಾಹ್ಮಣ'ದಂಥ ಹತ್ತಾರು ಕೃತಿಗಳು ದಲಿತ ಚರಿತ್ರೆಗೆ ಆಕರಗಳಾಗಿವೆ.

**ಮೌನಗಳು ಮಾತಾಡಬೇಕು**

ಜನಪದರ ಮೂಲದಿಂದ ಬಂದ ಅಪಾರ ಆಕರ ಸಾಮಗ್ರಿಗಳು ದಲಿತ ಚರಿತ್ರೆಗೆ ಮಹತ್ವದ ದಾಖಲೆಗಳು. ಇವುಗಳನ್ನು ಬಹಳ ವರ್ಷಗಳವರೆಗೆ ಅಕ್ಷರ ಲೋಕ ದೂರ ಇಟ್ಟಿತು. ಏಕೆಂದು ಕೇಳಿದರೆ, ಇವು ''ನಂಬಿಗಸ್ಥ'' ಅಲ್ಲವೆನ್ನಲಾಗುತ್ತಿದೆ. ಅಂದರೆ ಅಕ್ಷರ ಮಾತ್ರ ನಂಬಿಕೆಯದೆ? ಮಾತು ಮೌಲಿಕ ಅಲ್ಲವೆ? ಎಂಬ ಪ್ರಶ್ನೆಯನ್ನು ನಾವಿಂದು ಕೇಳಿಕೊಳ್ಳಬೇಕಿದೆ. ಕೆಳಜಾತಿ ಜನವರ್ಗದ ಕತೆ-ಸಂಕತೆಗಳು ಇಲ್ಲಿ ದಂಡಿಯಾಗಿ ಬರುತ್ತವೆ. ಮದಗದ ಕೆಂಚವ್ವ, ತಾಡಿ ನಾಗವ್ವ, ದಂಡಿ ಚೆನ್ನವ್ವರ ದುರಂತಗಳಿವೆ. ಜನಪದ ಮಹಾಕಾವ್ಯಗಳದ್ದೇ ಒಂದು ಮಹಾನ್ ಪರಂಪರೆ. ಶಿಷ್ಟ ಮಹಾಕಾವ್ಯದ ವಸ್ತು ವಿಶೇಷ; ಭಾಷೆ ಬಹುತ್ವಗಳಿಗೆ ಸಂಪೂರ್ಣ ವಿರುದ್ಧ ನೆಲೆಯಲ್ಲಿ ಪ್ರಸ್ತುತ ಮಹಾಕಾವ್ಯಗಳು ರಚನೆಗೊಂಡಿವೆ. ಶಿಷ್ಟ ಮಹಾಕಾವ್ಯಗಳು ವಿಜಯ ದಿಗ್ವಿಜಯಗಳಿಗೆ ಸಂಬಂಧಿಸಿದರೆ, ಜನಪದ ಮಹಾಕಾವ್ಯಗಳು ಅಪಜಯ ಅವಮಾನಗಳಿಗೆ ಸಂಬಂಧಿಸಿವೆ. ಹಾಗಾಗಿ, ಪಂಪ ರನ್ನರಂಥ ರಾಜಾಶ್ರಯ ಕೃಪಾಪೋಷಿತ ನಾಟಕ ಮಂಡಳಿ ಕವಿಗಳಿಂದ ವಿಕ್ರಮಾರ್ಜುನ ವಿಜಯ, ಸಾಹಸಭೀಮ ವಿಜಯ, ಕೃಷ್ಣದೇವರಾಯ ವಿಜಯ, ಕೆಳದಿನೃಪ ವಿಜಯಗಳೇ ಹೊರಬಂದವು. ಆಶ್ರಯದಾತರನ್ನು ಆಕಾಶದೆತ್ತರ ಹೊಗಳಿ, ವೈರಿರಾಜರನ್ನು ನೆಲಕ್ಕುರುಳಿಸಿ ಆನಂದಿಸಿದವು. ಆದರೆ, ಇಂಥ ವಿಜಯಿಗಳಿಂದ ಸೋತ, ಶರಣಾದ, ಶಿಕ್ಷೆ ಅನುಭವಿಸಿದ ವ್ಯಕ್ತಿಗಳು ಜನಪದರ ಕಥನಗಳಲ್ಲಿ ನಾಯಕರಾಗಿದ್ದಾರೆ. ಇವರು ಜನಪದರಿಗೆ ಕೇವಲ ವ್ಯಕ್ತಿಗಳಲ್ಲ; ಸಾಂಸ್ಕೃತಿಕ ವೀರರು. ಜನರ ಪರವಾಗಿ ಪ್ರಭುತ್ವದೆದುರು ಪ್ರಾಣತೆತ್ತ ಹುತಾತ್ಮರು.

ಸಂಗೊಳ್ಳಿ ರಾಯಣ್ಣ, ಸಿಂಧೂರ ಲಕ್ಷ್ಮಣ, ಹಲಗಲಿ ಬಾಳಣ್ಣ, ಸುರಪುರದ ವೆಂಕಟಪ್ಪ ನಾಯಕ, ನರಗುಂದ ಬಾಬಾ ಸಾಹೇಬ ಮುಂತಾದವರು ಜನಪದರ ಕಾವ್ಯಗಳಲ್ಲಿ ಕಥಾನಾಯಕರು. ಬ್ರಿಟಿಷರ ದೃಷ್ಟಿಯಲ್ಲಿ ಇವರೆಲ್ಲ ದೇಶದ್ರೋಹಿಗಳಾಗಿರಬಹುದು. ಆದರೆ, ಜನಪದರಿಗೆ ಇವರೇ ದೇವರು, ದೈವ, ದೇಶಪ್ರೇಮಿಗಳು. ಇವರನ್ನು ಕುರಿತು ಪ್ರಭುಗಳಲ್ಲಿ ಗಲ್ಲುಶಿಕ್ಷೆಯ ಕಡತಗಳಿದ್ದರೆ, ಜನಪದರಲ್ಲಿ ತ್ಯಾಗ - ಬಲಿದಾನದ ಕತೆಗಳಿವೆ. ಈ ಎಲ್ಲಾ ಸೂಕ್ಷ್ಮಗಳು ದಲಿತ ಚರಿತ್ರೆಕಾರನಿಗೆ ಗೊತ್ತಿರಬೇಕು. ಏಕೆಂದರೆ ಕಿತ್ತೂರು ಚೆನ್ನಮ್ಮನ ಹೋರಾಟಕ್ಕೂ ಸಂಗೊಳ್ಳಿ ರಾಯಣ್ಣನ ಹೋರಾಟಕ್ಕೂ ವ್ಯತ್ಯಾಸವಿದೆ. ಜೊತೆಗೆ ಈ ಹೋರಾಟದ ಆಶಯದಲ್ಲೂ ಅಂತರವಿದೆ. ಚೆನ್ನಮ್ಮನಿಗೆ ಸಿಂಹಾಸನವಿದೆ, ಜಮೀನಿದೆ, ಕೋಟೆ

ಕೊತ್ತಲಗಳಿವೆ. ಇದಾವುದೂ ರಾಯಣ್ಣನಲ್ಲಿ ಇಲ್ಲ. ಇದ್ದುದು ರಾಜನಿಷ್ಠೆಯೊಂದೇ. ಈತ ಗೆದ್ದರೆ ಕಿತ್ತೂರಿನ ಅರಸೊತ್ತಿಗೆಗೆ ಅರಸನಾಗುತ್ತಿರಲಿಲ್ಲ. ಆದರೆ, ಸೋತಾಗ ಈತನ ಕೊರಳಿಗೆ ಬೀಳುವ ಗಲ್ಲನ್ನು ಯಾವ ಅರಸೊತ್ತಿಗೆಯೂ ತಪ್ಪಿಸಲಿಲ್ಲ. ಇಂಥ ದುರಂತಗಳನ್ನು ಸಾಚಾತನದಿಂದ ದಾಖಲಿಸಿದವರು ನಮ್ಮ ಜನಪದರು ಮಾತ್ರ. ಇವರಿಗೆ ಇಲ್ಲಿದ್ದು ಆಳುವ ಜಮೀನುದಾರರು, ಹೊರಗಿನಿಂದ ಬಂದು ಆಳಿದ ಬ್ರಿಟಿಷರು ಇಬ್ಬರೂ ಒಂದೇ. ಏನಿದ್ದರೂ ಈ ಇಬ್ಬರಿಗೆ ಆಳುವುದರಲ್ಲಿ ಖುಷಿ ಇದೆ. ಈ ಸೂಕ್ಷ್ಮ ಜನಪದರ ಮೌನಗಳಲ್ಲಿವೆ.

ಶರಣರ ಕಾಲಕ್ಕೆ ಹನ್ನೆರಡನೆಯ ಶತಮಾನ ಆಕರ್ಷಕವಾಗಿತ್ತು. ಆದ್ದರಿಂದ ಆ ಕಾಲ ಅಧ್ಯಯನಾರ್ಹವಾದುದು. ದಲಿತರನ್ನು ದೇವಾಲಯದಲ್ಲಿ ಬಿಡದೇ ಇದ್ದಾಗ, ದೇವಾಲಯದಲ್ಲಿದ್ದ ದೇವರನ್ನೇ ದಲಿತರ ಮನೆಗೆ ಕರೆತಂದ ಕೀರ್ತಿ ಬಸವಣ್ಣನಿಗಿದೆ. ಇಂಥ ಚಳುವಳಿಯ ಮೂಲಕ ಅಂದು ಬಸವಣ್ಣ ದಲಿತರಿಗೆ ನೆಲೆಯಾದ. ನೇತೃತ್ವ ನೀಡಿದ. ಆದರೆ, ಇದೇ ಬಸವನ ತರುವಾಯ ಭಕ್ತಿ ವೀರಶೈವರಲ್ಲಿ ಖಾಸಗೀಕರಣಗೊಂಡಿತು, ಅಧಿಕಾರ ಕೆಲವರಲ್ಲಿ ಕೇಂದ್ರೀಕರಣವಾಯಿತು. ಜಂಗಮಗಳು ಸ್ಥಾವರಗೊಂಡವು; ವರ್ಣಗಳು ಮತ್ತೆ ಶ್ರೇಣೀಕರಣಗೊಂಡವು. ಆಗ ಮಂಟೇಸ್ವಾಮಿ ಮತ್ತು ಮಾದೇಶ್ವರನಂಥ ತೀವ್ರವಾದಿ ಶರಣರು ಸ್ಥಾವರದ, ಕೇಂದ್ರೀಕರಣದ ಮತ್ತು ಖಾಸಗೀಕರಣದ ವಿರುದ್ಧ ಮೊದಲ ಬಾರಿಗೆ ಬಂಡೆದ್ದರು. ನಾಡಿನಾದ್ಯಂತ ನಿಜವಾದ ಜಂಗಮ ಪರಿಕಲ್ಪನೆಯ ಬೀಜ ಬಿತ್ತಿದರು. ಇವೆಲ್ಲ ಜನಪದರ ಮಹಾಕಾವ್ಯಗಳಲ್ಲಿ ಮರವಾಗಿವೆ; ಫಲ ನೀಡಿವೆ. ಆಶ್ಚರ್ಯವೆಂದರೆ, ಈ ಇಬ್ಬರೂ ಅಸ್ಪೃಶ್ಯ ನೆಲೆಯಿಂದ ಬಂದವರು. ಪ್ರಭುಸತ್ತೆ ಮತ್ತು ಪುರೋಹಿತಸತ್ತೆಯ ಜೊತೆ ಸಂಘರ್ಷ ಮಾಡಿ ಸಾಂಸ್ಕೃತಿಕ ನಾಯಕರಾದವರು.

ಹೀಗಾಗಿ – ಮಂಟೇಸ್ವಾಮಿ, ಮಹದೇಶ್ವರ, ಎತ್ತಪ್ಪ, ಜುಂಜಪ್ಪ, ಮೈಲಾರಲಿಂಗ, ಮಾಳಿಂಗರಾಯ, ಕುಮಾರರಾಮ ಮುಂತಾದವರ ಮಹಾಕಾವ್ಯಗಳನ್ನು ನಾವಿಂದು ಮುಖ್ಯ ಆಕರಗಳಾಗಿ ಅಧ್ಯಯನ ಮಾಡಬೇಕಿದೆ. ಆಗ ಇಡೀ ಮಧ್ಯಕಾಲೀನ ಕರ್ನಾಟಕ ಚರಿತ್ರೆ ನಮ್ಮೊಂದಿಗೆ ಮತ್ತೊಂದು ರೀತಿಯಲ್ಲಿ ಮಾತಾಡುತ್ತದೆ. ಮೈಲಾರಲಿಂಗ ಮತ್ತು ಎತ್ತಪ್ಪ ಜುಂಜಪ್ಪ ಮಹಾಕಾವ್ಯಗಳಲ್ಲಿ ಶೂದ್ರ-ಶೂದ್ರ ಸಮುದಾಯಗಳಲ್ಲಿನ ಕದನವಿದೆ. ಮ್ಯಾಸಬೇಡರಂಥ ಶೂದ್ರರು ಅಧಿಕಾರಕ್ಕೆ ಬಂದರೆ ಗೊಲ್ಲ ಸಮುದಾಯ ಸಹಿಸದೇ ಇರುವುದು ಆಶ್ಚರ್ಯವೆನಿಸುತ್ತದೆ. ಅದರಂತೆ, ಇದೇ ಬೇಡರು ತಾವು ಅಧಿಕಾರಕ್ಕೆ ಬಂದ ತಕ್ಷಣವೇ ಮೇಲ್ವರ್ಗಗಳಂತೆ ವರ್ತಿಸುವುದು ಆತಂಕ ಹುಟ್ಟಿಸುತ್ತದೆ. ಮೈಲಾರಲಿಂಗ-ಮಾಳಿಂಗರಾಯ ಕಾವ್ಯದಲ್ಲಿ ಶೂದ್ರ ಮತ್ತು ಅಸ್ಪೃಶ್ಯರ ನಡುವೆ ರಕ್ತಸಂಬಂಧಗಳು ಬೆಳೆದಿವೆ.

ಒಟ್ಟಾರೆ, ಮಧ್ಯಕಾಲೀನ ಕರ್ನಾಟಕ ಕೆಳಜಾತಿ/ವರ್ಗಗಳ ದೃಷ್ಟಿಯಿಂದ ಎಚ್ಚರದ ಕಾಲ. ದಾಸಪಂಥದ ಕೀರ್ತನ ಸಾಹಿತ್ಯವನ್ನು ಸ್ವಲ್ಪ ಬದಿಗಿಟ್ಟರೆ ಸೂಫಿಸಂತರ ಅದ್ಭುತ ದರ್ಶನಗಳು ನಮ್ಮ ಕಣ್ಣು ತೆರೆಯಿಸುತ್ತವೆ. ಅದರಂತೆ ಅನೇಕ ಜನಪದ ಮಹಾಕಾವ್ಯಗಳು ಶೂದ್ರ ಸಮುದಾಯದ ಸಾಂಸ್ಕೃತಿಕ ವೀರರನ್ನು ಮುಖ್ಯಭಿತ್ತಿಯಲ್ಲಿ ನೀಡಿವೆ. ಹೀಗಾಗಿ, ಗಾದೆ, ಒಗಟು, ತ್ರಿಪದಿ, ಲಾವಣಿ, ಗೀಗೀ, ಡೊಳ್ಳು, ಭಜನೆ, ಕಂಸಾಳೆಯ ಅಂತರಂಗದಲ್ಲಿ ಅಸ್ಪೃಶ್ಯರ ಅನೇಕ ಕಥನಗಳಿವೆ. ಮೌನವಾಗಿರುವ ಇಂಥ ಅಂಶಗಳನ್ನು ಮಾತಾಡಿಸುವ ಮೂಲಕ ದಲಿತ ಚರಿತ್ರೆಗೆ ಹೊಸ ದಿಸೆ ನೀಡಬೇಕಿದೆ.

**ಕಡತ, ಕೈಫಿಯತ್ತು**

ಬ್ರಿಟಿಷ್ ವಸಾಹತುಶಾಹಿ ವ್ಯವಸ್ಥೆಯಲ್ಲಿ ರೂಪುಗೊಂಡ ಆಕರವೇ ಕೈಫಿಯತ್ತು. ಇದಕ್ಕಿಂತ ಮುಂಚೆ ಇಲ್ಲಿ ಕಡತಗಳಿದ್ದವು. ಇವು ಅಧಿಕಾರಿಗಳು ಹಾಕುವ ಕಂದಾಯದ, ಆಡಳಿತದ ವಿವರ ಒಳಗೊಂಡಿದ್ದವು. ಕುಲಕಸುಬುಗಳ ಮಾಹಿತಿ ಇತ್ತು. ಆದರೆ ಇದರ ವ್ಯಾಪ್ತಿ ತುಂಬಾ ಚಿಕ್ಕದು. ಸಮುದಾಯಗಳ ಸಂಪೂರ್ಣ ಮಾಹಿತಿ ಕಟ್ಟಿಕೊಡುವಲ್ಲಿ ಕೈಫಿಯತ್ತು ಯಶಸ್ವಿಯಾಗಿದೆ. ಕರ್ನಲ್ ಮೆಕೆಂಜಿಯಂಥ ಬ್ರಿಟಿಷ್ ಅಧಿಕಾರಿಗಳಿಂದಲೇ ಇದು ಸಾಧ್ಯವಾಯಿತೆಂಬುದೇ ಗಮನಾರ್ಹವಾದುದು. ಹಳ್ಳಿಗಳ ಬಗ್ಗೆ ಅಧಿಕಾರಿಗಳಿಗಿದ್ದ ಕುತೂಹಲ, ಆಡಳಿತಕ್ಕೆ ಅಲ್ಲಿಯ ಜನರನ್ನು ಬಗ್ಗಿಸುವ ತುರ್ತು ಇವೆರಡೂ ಇದರೊಳಗಿವೆ. ಆಯಾ ಗ್ರಾಮದ ಸ್ಥಳೀಯರು, ಬಹುತೇಕವಾಗಿ ಬ್ರಾಹ್ಮಣರು, ಕೊಟ್ಟ ವಿವರಗಳೇ ಈ ಕೈಫಿಯತ್ತುಗಳಲ್ಲಿವೆ. ಅಂದರೆ, ಇಲ್ಲಿರುವುದು ಅನುಭವದ ಅಭಿವ್ಯಕ್ತಿಯಲ್ಲ. ಆ ಸಮುದಾಯದ ವಕ್ತೃಗಳಿಂದಲೂ ಬಂದಿಲ್ಲ. ಬೇರೊಬ್ಬರು ನೀಡಿದ ಮಾಹಿತಿಯೇ ಹೆಚ್ಚು. ಏಕೆಂದರೆ, ಅಗ್ರಹಾರದ ಅಂಗಳದಲ್ಲಿ ನಿಂತು ಹರಿಜನರ ಕೇರಿ ಕಾಣುವುದಕ್ಕೂ, ಹರಿಜನರ ಓಣಿಯಲ್ಲಿ ನಿಂತು ಅಗ್ರಹಾರ ಕಲ್ಪಿಸಿಕೊಳ್ಳುವುದಕ್ಕೂ ತುಂಬಾ ಅಂತರವಿದೆ. ಕೈಫಿಯತ್ತುಗಳಲ್ಲಿ ಆದದ್ದು ಇದೇ ಅಂತರ. ಇಂಥ ಹತ್ತಾರು ಕೊರೆಗಳ ನಡುವೆಯೂ ಕೈಫಿಯತ್ತುಗಳನ್ನು ಆಕರವಾಗಿ ಸ್ವೀಕರಿಸುವ ಅಗತ್ಯವಿದೆ. ಸದ್ಯ ಮುನ್ನೂರಕ್ಕೂ ಮಿಕ್ಕಿ ಕೈಫಿಯತ್ತುಗಳು ಕರ್ನಾಟಕದಲ್ಲಿ ದೊರಕಿವೆ. ಹತ್ತೊಂಬತ್ತನೆಯ ಶತಮಾನದ ಆದಿಭಾಗದಲ್ಲಿ ಮೊದಲಬಾರಿಗೆ ಸಂಗ್ರಹಗೊಂಡ ಮತ್ತು ಕಟ್ಟಲ್ಪಟ್ಟ ಈ ಕೈಫಿಯತ್ತುಗಳು ನೂರಾರು ಹಳ್ಳಿಯ ಅಧಿಕಾರಿ, ಅಧಿಕಾರ, ಸಂಬಂಧ, ಸಮುದಾಯ, ಕುಲಾಚಾರ, ಹೆಣ್ಣು-ಗಂಡು, ಕಲೆ-ಕ್ರೀಡೆ, ಜಾತಿ ಜಗಳ, ಕುಲಕಸುಬು ಹೀಗೆ ಅನೇಕ ವಿಷಯಗಳನ್ನು ಒಳಗೊಂಡಿವೆ. ಸದ್ಯ ದೊರೆತ ಕೈಫಿಯತ್ತುಗಳಲ್ಲಿ ಬಂಜಾರ ಕೈಫಿಯತ್ತು, ಚೆನ್ನಯ್ಯನ ಕುಲದ ಜಾತಿ ರಿವಾಜು ಕೈಫಿಯತ್ತು, ಹಳೇ ಪೈಕರ ಜಾತಿ ರಿವಾಜು ಕೈಫಿಯತ್ತು, ಮಣ್ಣುವಡ್ಡಿ ಜಾತಿ ಕೈಫಿಯತ್ತು, ಕೊರಮರ ವಾಂಡ್ಲೆ ಕೈಫಿಯತ್ತು ಮತ್ತು ಮೇದಾರ ಕೈಫಿಯತ್ತುಗಳು ಮುಖ್ಯವಾದವು. ಇಂಥ ಜಾತಿ ಮತ್ತು ಜನಾಂಗಗಳ ಬೆಡಗು, ಬಳಿ, ಒಳಪಂಗಡ, ಕೇರಿ, ಕಸುಬು, ವೃತ್ತಿ, ವ್ಯವಹಾರ, ಕುಲ, ವಿಧಿ, ನಿಷೇಧಗಳನ್ನೆಲ್ಲ ಹೇಳಲಾಗಿದೆ. ಕೊರಮರಲ್ಲೇ ಠಕ್ಕೆ ಕೊರಮರು, ವಡ್ಡ ಕೊರಮರು, ಹಕ್ಕಿ ಕೊರಮರು, ಕಳ್ಳ ಕೊರಮರಿದ್ದಾರೆ. ಆಶ್ಚರ್ಯವೆಂದರೆ ಎಡಗೈ ಮತ್ತು ಬಲಗೈಗಳ ನಡುವೆ ಅಂದೂ ಜಗಳ ಇದ್ದ ಬಗ್ಗೆ ಉಲ್ಲೇಖಿಸಲಾಗಿದೆ. ಸಿಂದಿ, ಸರಾಯಿ, ನ್ಯಾಯ ಪಂಚಾಯ್ತಿ, ಕೂಡಿಕೆ ಕೆಡತಿಗಳೆಲ್ಲ ನಡೆದ ವಿವರವಿದೆ. ಕುಲಮೀರಿ ಕೂಡಿದರೆ ತಲೆ ಬೋಳಿಸಿ, ಉಗುರು ತೆಗೆದು ಗುಡಿಕಟ್ಟೆ ಸುತ್ತಿ ಕುಲಗುರುವಿಗೆ ದಕ್ಷಿಣೆ ನೀಡಿದರೆ ದೋಷಮುಕ್ತಿಯೆನ್ನಲಾಗಿದೆ. ಭಟ್ಟರಹಳ್ಳಿ ಕೈಫಿಯತ್ತುವಿನಲ್ಲಿ ಬೇಡರ ಬಗ್ಗೆ ವ್ಯಾಪಕ ಮಾಹಿತಿಯಿದೆ. ಒಟ್ಟಾರೆ ಕೈಫಿಯತ್ತುಗಳಿಂದ ಕೆಳಜಾತಿ-ಜನಾಂಗಗಳ ಸಂಪ್ರದಾಯ, ವಿಧಿ ಆಚರಣೆ, ವಿಧಿ ನಿಷೇಧ, ವ್ಯಕ್ತಿ ವಿಶೇಷಗಳಂಥ ಸಾಂಸ್ಕೃತಿಕ ಸಂಗತಿಗಳನ್ನು ಪಡೆಯಬಹುದು. ಇವು ಚರಿತ್ರೆಯ ದೃಷ್ಟಿಯಿಂದ ಮುಖ್ಯ. ಆದರೆ, ಈ ವಿವರ ನೀಡಿದ ವಕ್ತೃ ವರ್ಗ ಒಮ್ಮುಖೀ ನಿಲುವಿನಿಂದ ಕೂಡಿದ್ದು ಇಂಥ ಕೆಲ ಸಂಶಯಗಳು ಶೋಧಕನಿಗಿರಬೇಕು. ದಲಿತ ಕೇರಿಗಳಲ್ಲಿ ಹುಟ್ಟಿ ಬೆಳೆದು, ಬದುಕಿದ ಮನಸ್ಸುಗಳಿಂದ ಪೂರ್ಣ ಸತ್ಯ ಸಿಗಬಲ್ಲದು. ಇದು ಸಿಗುವವರೆಗೂ ಅರ್ಧ ಸತ್ಯ ಅನಿವಾರ್ಯ.

ಕಡತಗಳ ಸ್ವರೂಪದಲ್ಲಿರುವ ಸರ್ಕಾರಿ ದಾಖಲೆಗಳನ್ನು ಗಮನಿಸುವುದು ಸೂಕ್ತ. ನರೇಂದ್ರ ಕೆ. ವಾಘ್ಲೆ ಎಂಬುವವರು ಸಂಪಾದಿಸಿರುವ ಕೊತ್ವಾಲರ ದಾಖಲೆಗಳು ಈ ದೃಷ್ಟಿಯಿಂದ ಮಹತ್ವಪೂರ್ಣವಾದುವು. ಹದಿನೆಂಟನೆಯ ಶತಮಾನದ ಚರಿತ್ರೆಯನ್ನು ಪುನರ್ ರಚಿಸುವಲ್ಲಿ ಈ ಪುಣೆಯ ದಾಖಲೆಗಳು ಸಹಕರಿಸುತ್ತವೆ. ವಿಶೇಷವಾಗಿ, ಜಾತಿಗೆ ಸಂಬಂಧಿಸಿದ ದಂಡ, ಮೇಲ್ಜಾತಿಯವರ ವಸ್ತ್ರ ಧರಿಸಿದ್ದಕ್ಕೆ ದಂಡ, ಮುಸಲ್ಮಾನರು ಹಸು ತಿಂದದ್ದಕ್ಕೆ ದಂಡ ಹಾಕಲಾಗಿದೆ. ಅಂದರೆ, ದಂಡ ಹಾಕಿಸಿಕೊಳ್ಳುವುದಕ್ಕೆಂದೇ ಬದುಕಿದಂತಿರುವ ಜನಸಮುದಾಯಗಳ ಬಗ್ಗೆ ಇದರಿಂದ ತಿಳಿಯಬಹುದು.

ಬ್ರಿಟಿಷ್ ಪ್ರಾರಂಭ ಕಾಲದ ಪ್ರವಾಸಿಗಳು ಇಲ್ಲಿ ಬರೆದ ಪ್ರವಾಸಿ ಕಥನಗಳು ಗಮನಾರ್ಹವಾಗಿವೆ. ಯುರೋಪಿಯನ್ ಪ್ರವಾಸಿಗಳು ಭಾರತವನ್ನು ಸಂದರ್ಶಿಸಿದಾಗ ಅವರು ಗಮನಿಸಿದ್ದು ಮತ್ತು ಆ ಮೂಲಕ ದಾಖಲಿಸಿದ್ದು ಇಲ್ಲಿಯ ಜಾತಿಪದ್ಧತಿ, ಕುಲಕಸುಬು, ಆಚರಣೆ, ಸಂಪ್ರದಾಯ, ಅಧಿಕಾರಗಳಂಥ ಹಲವು ವಿಷಯಗಳು. ಇವರಿಗೆ ಇಂಥ ಸಂಗತಿಗಳನ್ನು ಹೇಳುವಾಗ ಯಾವುದೇ ಪೂರ್ವಾಗ್ರಹಗಳಿರಲಿಲ್ಲ. ಆದ್ದರಿಂದ ಭಾರತೀಯರ ಸಾಂಪ್ರದಾಯಿಕ ಮನಸ್ಸುಗಳನ್ನು ದಲಿತರ ಮೇಲೆ ಹೇರಿದ ಅಧಿಕಾರಗಳನ್ನು ಇದರಿಂದ ವಿವರವಾಗಿ ತಿಳಿಯುತ್ತೇವೆ.

ಒಟ್ಟಾರೆ, ದಲಿತ ಮತ್ತು ಶೂದ್ರ ಸಮುದಾಯಗಳ 'ಸಾಂಸ್ಕೃತಿಕ ಚರಿತ್ರೆ' ರೂಪಿಸುವ ಪರ್ವ ಕಾಲವಿದು. ಪರಂಪರೆಯ ಪ್ರಜ್ಞೆ ಮತ್ತು ಪ್ರಗತಿಯ ದೃಷ್ಟಿಕೋನಗಳನ್ನು ಸಮಸಮವಾಗಿ ಇಟ್ಟುಕೊಂಡ ಶಿಸ್ತು ಇಲ್ಲಿ ಅಗತ್ಯ. ಈ ಹಿನ್ನೆಲೆಯಲ್ಲಿ ದೊರೆತ ಹಲವು ಆಕರ ಸಾಮಗ್ರಿಗಳು ನಮ್ಮ ನಿಲುವುಗಳನ್ನು ನಿರೀಕ್ಷಿಸುತ್ತಿವೆ. ಇದು ನಿಲುವನ್ನೇ ಮುಖ್ಯವಾಗಿ ಅವಲಂಬಿಸಿದೆ. ನಮ್ಮ ನಿಲುವಿನಂತೆ ನೆಲಗಳಿರುತ್ತವೆ. ಹಾಗಾಗಿ ಆಕರಗಳನ್ನು ಬಳಸಿಕೊಳ್ಳುವ, ಅರ್ಥೈಸುವ, ವ್ಯಾಖ್ಯಾನಿಸುವ ಜವಾಬ್ದಾರಿ ಚರಿತ್ರೆಕಾರನಿಗಿದೆ. ಇದರಿಂದ ಅಲಕ್ಷಿತ ವಲಯಗಳಿಗೆ, ನೆಲೆಗಳಿಗೆ ಜಾತಿ ಜನಾಂಗಗಳಿಗೆ ಈ ಕಾಲಘಟ್ಟದಲ್ಲಾದರೂ ನ್ಯಾಯ ಸಿಗಬೇಕಾಗಿದೆ.

ಡಾ. ರಂಗರಾಜ ವನದುರ್ಗ
ಕನ್ನಡ ರೀಡರ್, ಕುವೆಂಪು ವಿಶ್ವವಿದ್ಯಾನಿಲಯ
ಶಂಕರಘಟ್ಟ, ಶಿವಮೊಗ್ಗ ಜಿಲ್ಲೆ




# ಅನನ್ಯ ಬದುಕಿನ ಸಂಕೇತ 'ನೀರು ಮತ್ತು ಪ್ರೀತಿ'

'**ಯಾ**ವ ಮಹತ್ತರವಾದ ಸಾಮಾಜಿಕ ಸಂಗತಿಗಳನ್ನಾಗಲಿ, ಕ್ರಾಂತಿಕಾರಿ ವಿಚಾರಗಳನ್ನಾಗಲಿ, ಸಾಹಿತ್ಯಕ್ಕೊಂದು ಹೊಸ ಕೊಡುಗೆ ನೀಡುವಂಥದ್ದಾಗಲಿ ಅಲ್ಲದ ಕೇವಲ ಸರಳ ಓದಿನ, ಸಾಮಾನ್ಯ ವಸ್ತುವಿನ ಈ ನೊವೆಲಾವನ್ನು ನಾನು ಬರೆದದ್ದು ಯಾಕೆ ?' ಎಂದು ತಮಗೆ ತಾವೇ ಪ್ರಶ್ನೆ ಹಾಕಿಕೊಳ್ಳುತ್ತಲೇ ಕೊನೆಗೆ, 'ಅಂತರಂಗದಲ್ಲಿ ನನಗೆ ಕಿಂಚಿತ್ತೂ ಒಪ್ಪಿಗೆಯಿಲ್ಲದ, ಅಪಾರ ಒತ್ತಡಕ್ಕೆ ಮಣಿಯುತ್ತಾ ಈಗ ನಿಮ್ಮ ಬೊಗಸೆಗೆ ಸುರಿಯುತ್ತಿರುವ ನೀರು ಮತ್ತು ಪ್ರೀತಿ ಇದು' ಎಂದು ಸಮಜಾಯಿಷಿ ಕೊಳ್ಳುತ್ತಾರೆ ಕೃತಿಕಾರ ಅಗ್ರಹಾರ ಕೃಷ್ಣಮೂರ್ತಿ.

೧೯೮೫ರ ಸರಿಸುಮಾರು. ಆಗ 'ಲಂಕೇಶ ಪತ್ರಿಕೆ'ಯ ಉಚ್ಛ್ರಾಯ ಕಾಲ ಬೇರೆ. ತನ್ನ ಆಪ್ತ ವಲಯದ ಒಡನಾಡಿಗಳಲ್ಲಿ ಒಬ್ಬರಾಗಿದ್ದ ಅಗ್ರಹಾರ ಕೃಷ್ಣಮೂರ್ತಿಯವರನ್ನು ಲಂಕೇಶ ಒಂದು ದಿನ ತಮ್ಮ ಸಲುಗೆ ಬೆರೆತ ದನಿಯಲ್ಲಿ "ಅಗ್ರಹಾರ, ಒಂದು ಕಾದಂಬರಿ ಬರೆಯಯ್ಯಾ, ಪತ್ರಿಕೆಯಲ್ಲಿ ಸೀರಿಯಲ್ ಮಾಡೋಣ" ಎಂದರು. ಆಗೀಗ ಪದ್ಯ ಬರೆದು ಗುರುತಿಸಿಕೊಂಡಿದ್ದ ಅಗ್ರಹಾರರಿಂದ ಕೊನೆಗೂ ಒಂದು ಕಿರು ಕಾದಂಬರಿಯನ್ನು ಬರೆಸಿಯೇ ಬಿಟ್ಟರು. ಅದು ಪತ್ರಿಕೆಯಲ್ಲಿ ಧಾರಾವಾಹಿಯಾಗಿಯೂ ಹರಿಯಿತು. ತನ್ನದೇ ಆದ ಲವಲವಿಕೆಯ ನಿರೂಪಣೆಯಿಂದಾಗಿ ಆ ಕಾಲದ ಹದಿ ಹರೆಯದ ಮನಸ್ಸುಗಳಿಗೆ ಲಗ್ಗೆಯನ್ನೂ ಇಕ್ಕಿತು. ಅದು ಇವತ್ತು ಇತಿಹಾಸ.

ಸಪಾಟು ಎದೆಯ ಹುಡುಗಿಯರನ್ನು 'ಟೆನಿಸ್ ಕೋರ್ಟ್' ಎಂದು ಆಡಿಕೊಳ್ಳುವ ಹುಡುಗರ ಪ್ರಪಂಚದ ತುಂಟಾಟದ ಪದಪ್ರಯೋಗಗಳು; ಆ ಕಾಲದ ಕಾಲೇಜು ಹುಡುಗ ಹುಡುಗಿಯರನ್ನು ಕಾಡುತ್ತಿದ್ದ 'ಬಾಬ್ಬಿ' ಹಿಂದಿ ಚಿತ್ರದ ದೃಶ್ಯಗಳು – ಆ ನೆಲೆಯಲ್ಲಿಯೇ ನಗರದ ಕಾಲೇಜು ಜೀವನದ ಒಂದು ಸಂಭಾವ್ಯ ಘಟನೆಯನ್ನೇ ಹಿಡಿದುಕೊಂಡು ನೀರು ಮತ್ತು ಪ್ರೀತಿಗಳ ಸಂಗಮದ ಅಪರೂಪ ಕಥಾ 'ಸಿಕ್ಕು' ಇಲ್ಲಿದೆ. ಪತ್ರಿಕೆಯಲ್ಲಿ ಬಂದು ಹದಿನೈದು ವರ್ಷಗಳ ತರುವಾಯ ಹೀಗೆ ಪುಸ್ತಕ ರೂಪದಲ್ಲಿ ಈಗ ನಮ್ಮ ಕೈಯಲ್ಲಿದೆ.

ಒಂದು ನೀಳ್ಗತೆಯ ಕ್ಯಾನವಾಸು ಇಲ್ಲಿ ಪುಟ್ಟ ಕಾದಂಬರಿಯ ಆಕಾರ ಪಡೆದಿದೆ. ನಾಯಕಿಯ ಕನಸಿನಿಂದ ಆರಂಭವಾಗುವ ಕತೆ ಕಟುವಾಸ್ತವ ಅಪ್ಪಿಕೊಳ್ಳುವುದರ ಮೂಲಕ ಮುಕ್ತಾಯ ಕಾಣುತ್ತದೆ. ಉದ್ದಕ್ಕೂ ಹದಿಹರೆಯದ ಮನಸ್ಸುಗಳ ತಾಕಲಾಟದಲ್ಲಿಯೇ ಜೀವಪರ ನಿಲುವನ್ನು ಸಮರ್ಥಿಸಿಕೊಳ್ಳುತ್ತಲೇ - ಮುರಿದು ಬೀಳುವ ಮದುವೆಯ ಮೂಲಕ ಹೊಸ ತಿರುವು ಪಡೆದುಕೊಳ್ಳುತ್ತದೆ. ಆಗ ನಾಯಕಿಯ ಅಪ್ಪನ ಹೆಣ ಬೆಣ್ಣೆಹೊಳೆಯಲ್ಲಿ ತೇಲುತ್ತದೆ. 'ನೀರು ಮತ್ತು ಪ್ರೀತಿ ಕಾದಂಬರಿ ಪ್ರಾರಂಭವಾಯಿತು' ಎಂದು ಹೇಳುವ ಕೊನೆಯ ವಾಕ್ಯದ ಮೂಲಕ ಲೇಖಕ ಅದಕ್ಕೆ ವಿಶೇಷ ಧ್ವನಿ ನೀಡಿ ತಟ್ಟನೆ ಗಮನ ಸೆಳೆಯುವಂತೆ ಮಾಡುತ್ತಾರೆ. ಅನನ್ಯ ಜೀವಿಗಳು ಪರಸ್ಪರ ಪರಿತಪಿಸಿ ಸೇರಿದೊಡನೆ ಅದುವೇ ಕೊನೆ ಆಗಬಾರದು. ಒಂದು ಅರ್ಥದಲ್ಲಿ ಅದು ದುರಂತದ ಬೆನ್ನಲ್ಲೇ ಹೊಸದರ ಆರಂಭವೂ ಇದೆ ಎನ್ನುವುದರ ಸೂಚನೆ ಕೂಡ ಆಗಬಲ್ಲುದು. ಬದಲಾವಣೆ ಅನ್ನುವುದು ಹಳೆಯ ವ್ಯವಸ್ಥೆ ಮುರಿದು ಬಿದ್ದು ಹೊಸದಕ್ಕೆ ದಾರಿಯಾಗುತ್ತದೆನ್ನುವುದರ ಸಂಕೇತ.

ನೀರಿಗೆ 'ಜೀವನ' ಎಂಬ ಅರ್ಥವೂ ಇದೆ.




**ಪುಟ : xii + 84** **ಬೆಲೆ : ರೂ. 35.00**

ಅದರಲ್ಲೂ, ಭಾರತೀಯ ಸಂಸ್ಕೃತಿಯಲ್ಲಿ ಹೆಣ್ಣಿಗೂ ನೀರಿಗೂ ಅವಿನಾಭಾವ ಸಂಬಂಧ ಕಲ್ಪಿಸಿದ್ದಾರೆ. ಉತ್ತರ ಕರ್ನಾಟಕದ ಕಡೆಗೆ ಮುಟ್ಟುನಿಂತಿರುವುದನ್ನು ಸೂಚಿಸಲು 'ನೀರು ನಿಂತಿದೆ' ಎಂದೇ ಹೇಳುತ್ತಾರೆ.

'ಮೌನವಾಗಿ ಪರಸ್ಪರ ನೀರು ಸುರಿದುಕೊಳ್ಳತೊಡಗಿದರು... ಹೀಗೆ ತಣ್ಣೀರಿನ ಸ್ನಾನದೊಂದಿಗಿನ ಬೆಚ್ಚನೆಯ ವಿಸ್ಮಯಕಾರಿ ಅನುಭವದ ನಂತರ ಗೋಪಾಲನ ಸ್ನಾನದ ಕೋಣೆಯಲ್ಲಿ ಬಹಳಷ್ಟು ನೀರು ಹರಿದದ್ದು ನಿಜವಿರಬೇಕು !' ಇದು ನಾಯಕಿ ಜಲಜ ತನ್ನ ಸಹಪಾಠಿ ಗೋಪಾಲನೊಂದಿಗೆ ಪಡೆದ ಸಮಾಗಮದ ಚಿತ್ರ. ಒಂದು ಆಕಸ್ಮಿಕ ಸನ್ನಿವೇಶದಲ್ಲಿ ನೀರೇ ಬಹುಮುಖ್ಯ ಪಾತ್ರ ವಹಿಸಿ ಒಟ್ಟಿಗೇ ಓದುವ ಗೋಪಾಲ - ಜಲಜರನ್ನು ಬೆಸೆಯುವಂತೆ ಮಾಡುತ್ತದೆ.

'ಪ್ರೀತಿಸಲು ಮುಗಿಬೀಳದೆ, ಹಿಂಬಾಲಿಸದೆ, ಕಾಯದೆ, ಬೇಯದೆ, ಕಾಡಿಬೇಡಿ ಮನವೊಲಿಸಿಕೊಳ್ಳದೆ, ಪ್ರಥಮ ನೋಟದಲ್ಲೇ ಪ್ರೇಮಾಂಕುರವಾಗದೆ, ಪ್ರೇಮಪತ್ರಗಳ ಸರಬರಾಜಿಲ್ಲದೆ ತನ್ನ ಮತ್ತು ಗೋಪಾಲನ ನಡುವೆ ಘಟಿಸಿದ ಈ ವಿಚಿತ್ರ ಸಂಬಂಧ ಅವಳಿಗೊಂದು ಅಚ್ಚರಿಯ ಸಂಗತಿಯಾಯಿತು.'

'ಇದೊಂದು ಗುಟ್ಟಾಗಿ ಬೆಳೆದ ಜಲಪ್ರಣಯವಾದರೂ, ಗೋಪಾಲನ ಸ್ನಾನದ ಕೋಣೆಯಲ್ಲಿ ಸುರಿದ ನೀರು ನಗರದ ನಾನಾ ಬೀದಿಗಳಲ್ಲಿ ಹರಿದು ಊರಾಚೆಯ ಯಮುನತ್ತೆಯ ಮನೆಯಲ್ಲೂ, ಕಾಲೇಜಿನ ಗೋಡೆಗಳ ಮೇಲೂ, ಬೆಣ್ಣೆ ಹೊಳೆಯ ಒಂದೆರಡು ಗಲ್ಲಿಗಳಲ್ಲೂ ಹರಿದಾಡಿತು.'

'ಎಲ್ಲ ಬಗೆಯ ಮೈಲಿಗೆಯನ್ನೂ, ಪಾಪವನ್ನೂ ತೊಳೆಯುವ ಪವಿತ್ರ ದ್ರವ್ಯವೂ, ಸಕಲ ಜೀವರಾಶಿಯ ಬದುಕಿಗೆ ಅತ್ಯಾವಶ್ಯಕವಾದ ಜೀವದ್ರವ್ಯವೂ ಆದ ನೀರೇ ತನ್ನ ಶೀಲವನ್ನೂ ಕಬಳಿಸಿಬಿಟ್ಟಿತಲ್ಲಾ..... !' ಎಂಬ ಜಿಜ್ಞಾಸೆ ಜಲಜಳಿಗೆ.

ತಂದೆಯ ಸಂಚಿನಿಂದಾಗಿ ಅವಸರದ ಮದುವೆಗೆ ಕೊರಳೊಡ್ಡಿದರೂ, ಗಂಡ ಮನೋಹರನಿಗೆ ಗಬ್ಬು ಬಾಯಿ ವಾಸನೆಯ ಪಯೋರಿಯಾ ರೋಗವಿದ್ದು, ಅದೇ ಕಾರಣದಿಂದಾಗಿ 'ಪ್ರಥಮ ರಾತ್ರಿಯ ಪುಲಕಗಳನ್ನು ನಿರೀಕ್ಷಿಸಬೇಕಾಗಿದ್ದ ಜಲಜಳ ಮನಸ್ಸಿನೊಳಕ್ಕೆ ಬೇಡ ಬೇಡವೆಂದರೂ ಗೋಪಾಲ ನುಸುಳುತ್ತಿರುವುದನ್ನು ತಡೆಯಲಾಗದೆ ಖಿನ್ನಳಾಗಿ ಯೋಚಿಸುತ್ತಾ ಕುಳಿತಿದ್ದಳು.' ಕೊಳಕ ಗಂಡನ ರಿಪೇರಿ ಸಾಧ್ಯವಿಲ್ಲವೆಂದರಿತ ಜಲಜ ಕ್ರಮೇಣ ತನ್ನ ದಾಂಪತ್ಯ ಜೀವನ ಕುದುರದೇ ಬೇಸತ್ತು, ಕೊನೆಗೆ ಗೋಪಾಲನನ್ನೇ ಹುಡುಕಿಕೊಂಡು ಹೋಗಿ 'ಗೋಪಾಲನ ಎದೆಯಲ್ಲಿ ಚಿಮ್ಮಿದ ಕಾರಂಜಿಯಲ್ಲಿ ತೊಯ್ದುಹೋದಳು.'

ನೀರು ಮತ್ತು ಪ್ರೀತಿ ಇಲ್ಲಿ ಪರಸ್ಪರ ಸಂವಹನ ಶಕ್ತಿ ಪಡೆಯುತ್ತಲೇ ಮಾನವ ಲೋಕದ ಅಂತಃಸ್ಫುರಣಗಳಾಗಿ ಹರಿದು ಅಂತಃಕರಣ ಕಲಕುತ್ತವೆ. ನೀರು ಇಲ್ಲಿ ನಿರ್ಜೀವ ವಸ್ತುವಲ್ಲ, ಗಂಡು - ಹೆಣ್ಣುಗಳ ದೇಹ - ಮನಸ್ಸುಗಳನ್ನು ಬೆಸೆಯುವ ಸಜೀವ ಪಾತ್ರವಾಗಿ ಕೆಲಸ ಮಾಡಿದೆ. ಹದಿಹರೆಯದ ಮನಸ್ಸುಗಳನ್ನು ಅನಾವರಣಗೊಳಿಸುವಲ್ಲಿ, ಅದರಲ್ಲೂ ಜಲಜಳ ಪಾತ್ರ ಸೃಷ್ಟಿಯಲ್ಲಿ, ಹುಡುಗಿಯರ ಒಳಪ್ರಪಂಚಕ್ಕೇ ಟಾರ್ಚು ಬೀರುವ ಮೂಲಕ ಅಗ್ರಹಾರರ ಲೇಖನಿ ಸೊಗಸಾದ ಎಕ್ಸ್-ರೇ ತೆಗೆದಿರಿಸಿದೆ.

ಒಂದೇ ಉಸಿರಿಗೆ ಸರಾಗವಾಗಿ ಓದಿ ಮುಗಿಸಬಹುದಾದ ಉತ್ಕಟವಾದ ಗದ್ಯ. ಇಲ್ಲಿನ ನಾಯಕಿ ಕನ್ನಡ ಕಥಾ ಪ್ರಪಂಚದ ಅಪರೂಪದ ಕಾಡುವ ಹುಡುಗಿ. ಅಗ್ರಹಾರ ಕೃಷ್ಣಮೂರ್ತಿಯವರ ಕಾವ್ಯಾತ್ಮಕ ಶೈಲಿಗಾದರೂ ಓದಲೇಬೇಕಾದ ಕೃತಿ - 'ನೀರು ಮತ್ತು ಪ್ರೀತಿ'.

**ಈರಪ್ಪ ಎಂ. ಕಂಬಳಿ**
ಸಂಶೋಧನಾಧಿಕಾರಿ, ಭಾಷಾಂತರ ನಿರ್ದೇಶನಾಲಯ
ಕಾವೇರಿಭವನ, ಎಫ್ - ಬ್ಲಾಕ್, ಬೆಂಗಳೂರು - ೫೬೦ ೦೦೯



# ಅದ್ವೈತ ಮತ್ತು ಶಂಕರ

"ಅದ್ವೈತ" ಎಂದರೆ ಬ್ರಹ್ಮ ಮತ್ತು ಜೀವಿಗಳು ಬೇರೆ ಬೇರೆಯಲ್ಲ, ಒಂದೇ ಎಂದು ಪ್ರತಿಪಾದಿಸುವ ತತ್ವ. ಅದನ್ನು ಮೊದಲಿಗೆ ಹೆಸರಿಸಿದವರು ಶಂಕರಾಚಾರ್ಯರು.

ಶಂಕರ, ಮಧ್ವ ಹಾಗೂ ರಾಮಾನುಜರನ್ನು ದೇವತಾ ಶಾಸ್ತ್ರಜ್ಞರು ಎಂದು ಕರೆಯುತ್ತಾರೆ. ಕ್ರಮವಾಗಿ ಅವರು ಅದ್ವೈತ, ದ್ವೈತ ಹಾಗೂ ವಿಶಿಷ್ಟಾದ್ವೈತ ತತ್ವಗಳನ್ನು ಬೋಧಿಸಿದರು. ಮೂವರೂ ವೈದಿಕ ಸಂಪ್ರದಾಯದವರು. ಇವರುಗಳು ಬೋಧಿಸಿದ್ದು ಮೇಲ್ನೋಟಕ್ಕೆ ಉದಾತ್ತವಾಗಿ ಕಂಡರೂ ಕ್ರಿಯೆಯಲ್ಲಿ ಜಾತಿಪರವಾಗಿರುವಂಥವು. ಆದಕಾರಣವೇ ಆಳವಾಗಿ ಅಧ್ಯಯನ ಮಾಡಿದ್ದ ವಿವೇಕಾನಂದರು "ಶಂಕರಾಚಾರ್ಯ ಮುಂತಾದ ಯುಗಾವತಾರ ವ್ಯಕ್ತಿಗಳು ಹಲವು ಜಾತಿಗಳನ್ನು ಸೃಷ್ಟಿಸಿದರು" (ಸಂ. ೫, ಪುಟ ೧೯೪) ಎಂದಿದ್ದಾರೆ.

ಶಂಕರರ ಅದ್ವೈತವು ಭಾವಾದ್ವೈತವೇ ಹೊರತು ಕ್ರಿಯಾದ್ವೈತವಲ್ಲ. ಅವರ ದೃಷ್ಟಿಯಲ್ಲಿ ಎಲ್ಲರೂ ಸಮಾನರು ಎಂಬುದು ಭಾವಸತ್ಯವೇ ಹೊರತು ಕ್ರಿಯಾಸತ್ಯವಲ್ಲ. ಜಗತ್ತು ಅವರ ಪ್ರಕಾರ ಒಂದು ಮಿಥ್ಯೆ. ಹಾಗೆನ್ನಲು ಅವರಿಗೆ ಅವರ ಪರಂಪರೆಯೇ ಕಾರಣ. ಏಕೆಂದರೆ ಪೂರ್ಣಚಂದ್ರ ತೇಜಸ್ವಿಯವರು ಗುರುತಿಸಿರುವಂತೆ 'ವೈದಿಕ ಸಂಸ್ಕೃತಿಗೆ ತನ್ನದೇ ಆದ ಪ್ರಾದೇಶಿಕತೆ ಇಲ್ಲ.' ಅಲೆಮಾರಿ ಪ್ರವೃತ್ತಿಯ ಬ್ರಾಹ್ಮಣರಿಗೆ ಬೇರುಗಳಿಲ್ಲ. ತೇಜಸ್ವಿ ಹೇಳುವಂತೆ, "ಅಲೆಮಾರಿ ಪ್ರವೃತ್ತಿಯು ಹೊಸ ಅನುಭವಗಳನ್ನೊಳಗೊಳ್ಳುವ ಮಹತ್ವಾಕಾಂಕ್ಷಿ ಸಾಹಸ ಪ್ರವೃತ್ತಿಯಾಗದೆ ಕೇವಲ ವ್ಯವಸಾಯ ಮುಂತಾದ ಶೂದ್ರೋದ್ಯಮಗಳಿಂದ ತಪ್ಪಿಸಿಕೊಳ್ಳುವ ಸೋಮಾರಿತನ ಮಾತ್ರವಾಗಿದೆ. ಬ್ರಾಹ್ಮಣ ಅಥವಾ ವೈದಿಕ ಸಂಸ್ಕೃತಿ ಹೀಗಿರುವುದರಿಂದಲೇ ಅನೇಕ ತತ್ವವೇತ್ತರೂ, ಚಿಂತನಶೀಲರೂ ಇದರಲ್ಲಿ ಹುಟ್ಟಿದರೂ ಯಾವುದೇ ಸಾಮಾಜಿಕ ಬದಲಾವಣೆಯನ್ನು ಮಾಡದೆ, ವೇದೋಪನಿಷತ್ತುಗಳಿಗೆ ಹೊಸ ಹೊಸ ವ್ಯಾಖ್ಯಾನ ಮಾಡಿಹೋದರು."

ಶಂಕರರು ಮಾಡಿದ ಪ್ರಸ್ಥಾನತ್ರಯ - ಬ್ರಹ್ಮಸೂತ್ರ, ಉಪನಿಷತ್ತುಗಳು, ಗೀತೆ – ಗಳ ಭಾಷ್ಯಗಳನ್ನು ಗಮನಿಸಿ ವಿವೇಕಾನಂದರು ಹೇಳಿದ್ದಿದು : "ಭಾಷ್ಯವನ್ನು ಬರೆದ ದೊಡ್ಡ ಆಚಾರ್ಯರೆಲ್ಲ ಕೆಲವು ವೇಳೆ ತಮ್ಮ ಸಿದ್ಧಾಂತಕ್ಕೆ ಸರಿಯಾದ ಅರ್ಥವನ್ನು ಸೂತ್ರದಲ್ಲಿ ಬರುವಂತೆ ಮಾಡುವಾಗ ತಿಳಿದೇ ಸುಳ್ಳನ್ನು ಹೇಳುತ್ತಿದ್ದರು" (ಸಂ. ೮, ಪುಟ ೫೦).

ಶಂಕರರಿಗೆ ಶ್ವಪಚನ ಮೂಲಕ ಬ್ರಹ್ಮಜ್ಞಾನವಾಯಿತು ಎಂದು ಹೇಳುವುದು, ಈಶ್ವರ ಶ್ವಪಚನ ರೂಪದಲ್ಲಿ ಬಂದು ಜ್ಞಾನವನ್ನು ಬೋಧಿಸಿದ ಎನ್ನುವುದು ಕಟ್ಟುಕಥೆ. ಒಂದು ಪಕ್ಷ ಶ್ವಪಚನ ಮೂಲಕ ಬ್ರಹ್ಮಜ್ಞಾನವಾದುದೇ ನಿಜವಾದರೆ ಆನಂತರ ಶಂಕರರು ಬ್ರಹ್ಮಸೂತ್ರಕ್ಕೆ ಭಾಷ್ಯ ಬರೆದು "ವೇದ ಕೇಳಿದ ಶೂದ್ರನ ಕಿವಿಗೆ ಕಾದ ಸೀಸ ಸುರಿಯಬೇಕು, ಉಚ್ಚರಿಸಿದರೆ ನಾಲಿಗೆಯನ್ನು ಕತ್ತರಿಸಬೇಕು, ಕಂಠಪಾಠ ಮಾಡಿ ಹೃದಯ ಸೇರಿಬಿಟ್ಟಿದ್ದರೆ ಆ ದೇಹವನ್ನೇ ಕತ್ತರಿಸಿಬಿಡಬೇಕು" (ಬ್ರಹ್ಮಸೂತ್ರ ಭಾಷ್ಯ : ಅಧ್ಯಾಯ ೧, ಸೂತ್ರ ೩೮) ಮುಂತಾದ ಮಾನವ ವಿರೋಧಿಯಾದ ಮಾತುಗಳಿಂದ ಜಾತಿಪ್ರೇಮವನ್ನು ಏಕೆ ಮೆರೆದರು ?

ಇನ್ನು ಉಪನಿಷತ್ತುಗಳಿಗೆ ಶಂಕರರು ಮಾಡಿರುವ ಭಾಷ್ಯವೂ ಕೂಡ ಕೆಲವೆಡೆ ಆಭಾಸ ಉಂಟುಮಾಡುತ್ತದೆ. ಉದಾಹರಣೆಗೆ :

'ಈಶಾವಾಸ್ಯೋಪನಿಷತ್'ನ ಎರಡನೆ ಮಂತ್ರ :

*ಕುರ್ವನ್ನೇವೇಹ ಕರ್ಮಾಣಿ*
*ಜಿಜೀವಿಷೇಚ್ಛತಂ ಸಮಾಃ।*
*ಏವಂ ತ್ವಯಿ ನಾನ್ಯಥೇತೋಽಸ್ತಿ*
*ನ ಕರ್ಮ ಲಿಪ್ಯತೇ ನರೇ॥*

[ಈ ಲೋಕದಲ್ಲಿ (ಶಾಸ್ತ್ರವಿಹಿತವಾದ) ಕರ್ಮಗಳನ್ನು ಮಾಡುತ್ತಲೇ ನೂರು ವರ್ಷ ಜೀವಿಸಲು ಇಚ್ಛೆ ಪಡಬೇಕು. ಹೀಗಿರುವ ಮನುಷ್ಯನಾದ ನಿನಗೆ ಅಶುಭಕರ್ಮವು ಅಂಟಿಕೊಳ್ಳದ (ಉಪಾಯವು) ಬೇರೆ ಯಾವುದೂ ಇಲ್ಲ]

ಕರ್ಮ ಎಂದರೆ ಕರ್ತವ್ಯ, ಕೆಲಸ. ವಚನಕಾರರು ಇದನ್ನು 'ಕಾಯಕ' ಎಂದು ಕರೆದರು. ಇಲ್ಲಿ ಶಂಕರರು ಮೂಲ ಶ್ಲೋಕದಲ್ಲಿ ಇಲ್ಲದ 'ಶಾಸ್ತ್ರವಿಹಿತವಾದ' ಎಂಬ ಪದವನ್ನು ಸೇರಿಸಿ ವ್ಯಾಖ್ಯಾನಿಸುತ್ತಾರೆ. ಶಾಸ್ತ್ರ ವಿಹಿತವಾದದ್ದು ಎಂದರೆ ವರ್ಣ ವ್ಯವಸ್ಥೆಗೆ ಒಳಪಟ್ಟಿದ್ದು. "ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಹೀಗೆ ಅವರವರು ಅವರವರಿಗೆ ವಿಧಿಸಿರುವ ಕರ್ಮಗಳನ್ನು ಮಾಡುತ್ತಾ" ಎನ್ನುವ ಅರ್ಥ ಬರುವಂತೆ ಮಾಡಿರುವ ಅವರ ವ್ಯಾಖ್ಯೆಯ ಅಂತರಂಗದ ವ್ಯೂಹವನ್ನು ಕಾಣಬಹುದು.

ವಿವೇಕಾನಂದರ ಇನ್ನೊಂದು ಮಾತನ್ನು ಮನನ ಮಾಡಿಕೊಳ್ಳಬೇಕು : "ನೋಡಿ, ಬಲಾತ್ಕಾರದಿಂದ ಹೇಗೆ ಕೋಟ್ಯಾಂತರ ಜನರು ತಮಗೆ ವಿರೋಧವಾದ ಅಭಿಪ್ರಾಯವನ್ನು ಸ್ವೀಕರಿಸುವಂತೆ ಮಾಡಿರುವರು. ಇದು ಋಷಿಗಳ ಅನ್ಯಾಯ, ಬುದ್ಧಿವಂತರ ಅನ್ಯಾಯ, ಜ್ಞಾಪಕದಲ್ಲಿಡಿ ! ತಿಳಿದವರ ಅನ್ಯಾಯ, ತಿಳಿಯದವರ ಅನ್ಯಾಯಕ್ಕಿಂತ ಘೋರವಾದದ್ದು. ಪಂಡಿತರು, ಬುದ್ಧಿವಂತರು, ಮತ್ತೊಬ್ಬರ ಮೇಲೆ ತಮ್ಮ ಅಭಿಪ್ರಾಯವನ್ನು ಬಲಾತ್ಕರಿಸುವುದಕ್ಕೆ, ಪಾಮರರು ಪಾರಾಗಲು ಅಸಾಧ್ಯವಾದ ಸಾವಿರಾರು ಬಂಧನಗಳನ್ನು ಅವರ ಮಾರ್ಗದಲ್ಲಿ ತಂದೊಡ್ಡಬಲ್ಲರು." (ಸಂ. ೮, ಪುಟ ೧೫೪)

ಇದೇ ಕಾರಣ ಕುವೆಂಪು ಅವರು ಶಾಸ್ತ್ರಗಳ ಬಂಧನಗಳನ್ನು ಬದಿಗೊತ್ತಿ,

*ಯಾವ ಕಾಲದ ಶಾಸ್ತ್ರವೇನು ಹೇಳಿದರೇನು ?*
*ಎದೆಯ ದನಿಗೂ ಮಿಗಿಲು ಶಾಸ್ತ್ರವಿಹುದೇನು ?*
*ಎಂದೊ ಮನು ಬರೆದಿಟ್ಟುದಿಂದೆಮಗೆ ಕಟ್ಟೇನು ?*
*ನಿನ್ನೆದೆಯ ಧನಿಯೆ ಋಷಿ! ಮನು ನಿನಗೆ ನೀನು !*

(ಕೋಗಿಲೆ ಮತ್ತು ಸೋವಿಯಟ್ ರಷ್ಯ : ಪುಟ ೨೪)

– ಎಂದು ಬುದ್ಧನಂತೆ ಎದೆಯ ದನಿಗೆ ಓಗೊಡುವ ಕರೆಯಿತ್ತರು.

ಹನ್ನೆರಡನೇ ಶತಮಾನದ ವಚನಕಾರರು ಎದೆಯ ದನಿಯಂತೆ ಅರಿತು ನಡೆದವರು. ಪ್ರಮುಖ ವಚನಕಾರರೆಲ್ಲಾ ಮಾನವ ವಿರೋಧಿಯಾದುದನ್ನೆಲ್ಲಾ ಖಂಡತುಂಡವಾಗಿ ಖಂಡಿಸಿದರು. ಆದರೆ ಅವರಾರೂ ಉಪನಿಷತ್ತುಗಳನ್ನು ಖಂಡಿಸದಿರುವುದು ಗಮನೀಯ. ಏಕೆಂದರೆ ಬದುಕಿಗೆ ಒಳಬೆಳಕನ್ನು ಬೀರಬಲ್ಲ, ಸರ್ವರಿಗೂ ಸಮಾನತೆಯನ್ನು ಸಾರಬಲ್ಲ ಶಕ್ತಿ ಉಪನಿಷತ್ತುಗಳಿಗಿವೆ ಎಂದವರು ಭಾವಿಸಿದ್ದರು. ಹೀಗೆ ಭಾವಾದ್ವೈತದ ಜೊತೆ ಜೊತೆಯಲ್ಲೇ ಕ್ರಿಯಾದ್ವೈತದ (ಕಾಯಕದ) ಮಹತ್ವವನ್ನು ಅರಿತಿದ್ದ ಎಲ್ಲ ವಚನಕಾರರೂ ನಿಜಜೀವನದಲ್ಲಿ ಅದ್ವೈತವನ್ನು ವ್ಯಕ್ತಪಡಿಸಿದರು.

ಈಗ ನಾವು, ಎಂದರೆ ಬಿಡುಗಡೆಗೊಳ್ಳಲಿಚ್ಛಿಸುವವರು, ಪರಲೋಕದಷ್ಟೇ, ಅಥವಾ ಅದಕ್ಕಿಂತ ಹೆಚ್ಚಾಗಿ, ಇಹಲೋಕವನ್ನು, ಪ್ರಕೃತಿಯನ್ನು, ಪ್ರೀತಿಸುವವರು ಬಹು ಎಚ್ಚರಿಕೆಯಿಂದ ಅಡಿ ಇಡಬೇಕಾಗಿದೆ. ಏಕೆಂದರೆ ಕೇವಲ ಭಾವಮಟ್ಟದಲ್ಲಿದ್ದು ಕ್ರಿಯಾಮಟ್ಟದಲ್ಲಿ ಜಾತಿಪರವಾಗಿರುವ ಅದ್ವೈತ ಅಪಾಯಕಾರಿ. ಅದನ್ನು ಸಾರಾಸಗಟಾಗಿ ತಿರಸ್ಕರಿಸಿ ಭಾವ ಮತ್ತು ಕ್ರಿಯೆಗಳೆರಡರಲ್ಲೂ ಜೀವಪರವಾದ ಅದ್ವೈತವನ್ನು ಆಚರಿಸುವ ಮಾರ್ಗದಲ್ಲಿ ನಡೆಯಬೇಕಾಗಿದೆ. ಮಹಮದ್ ಪೈಗಂಬರರು, "ಪರಲೋಕವನ್ನು ಪ್ರೀತಿಸುವಾತನು ತನ್ನ ಇಹಲೋಕಕ್ಕೆ ಹಾನಿ ಮಾಡಿಕೊಳ್ಳುತ್ತಾನೆ ಮತ್ತು ಇಹಲೋಕವನ್ನು ಪ್ರೀತಿಸುವಾತನು ತನ್ನ ಪರಲೋಕಕ್ಕೆ ಹಾನಿ ಮಾಡಿಕೊಳ್ಳುತ್ತಾನೆ" ಎಂದಿದ್ದಾರೆ. ವಿಚಾರಮಂಥನದಿಂದ ಮೂಡುವ ಸತ್ಯವೆಂದರೆ ಸೃಷ್ಟಿಯ ಸೂತ್ರವಾದ ಸಮನ್ವಯ ಮಾರ್ಗದಲ್ಲಿ ನಡೆದಾಗ ಮಾತ್ರ ಬುದ್ಧಿಗೆ ಪುಷ್ಟಿ, ಹೃದಯಕ್ಕೆ ತುಷ್ಟಿ.

ಜ. ಹೊ. ನಾರಾಯಣಸ್ವಾಮಿ
ವಕೀಲರು, "ಮಾನವ" ೨೦೬೪/ಎ, ಉತ್ತರ ಬಡಾವಣೆ
ಹಾಸನ - ೫೭೩ ೨೦೧.

HOSATHU Kannada Monthly / July 2003 Rs. 10

RNI Regn. No. KARKAN/1999/614 REGD. CPMG / KA / BGE – 7 / 2003-05 Licenced to post without prepayment. Licence No. WPP-14



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him for Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna